ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೮

ಶ್ರೀ ವಾಲ್ಮೀಕಿಮಹರ್ಷಿಪ್ರಣೀತಂ

# ಅದ್ಭುತರಾಮಾಯಣಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)


ಅನುವಾದಕ:

ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ

ಸಾಹಿತ್ಯವಿದ್ವಾನ್

ಕನ್ನಡ ಪಂಡಿತ (ಮೈಸೂರು), ಕನ್ನಡ ವಿದ್ವಾನ್ (ಮದ್ರಾಸು)





ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೬

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೮

ಶ್ರೀ ವಾಲ್ಮೀಕಿಮಹರ್ಷಿಪ್ರಣೀತಂ

# ಅದ್ಭುತರಾಮಾಯಣಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)



ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ,**

ಸಾಹಿತ್ಯವಿದ್ವಾನ್

ಕನ್ನಡ ಪಂಡಿತ (ಮೈಸೂರು), ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲಕ್ಟ್ರಿಕ್ ಪ್ರೆಸ್

೧೯೪೬

|| ಶುಭಮಸ್ತು ||

|| ಶ್ರೀ ರಾಮಚಂದ್ರ ಪರಬ್ರಹ್ಮಣೇ ನಮಃ ||

# ಪೀಠಿಕೆ

## ಕರ್ತೃವಿಚಾರ

ಶ್ರೀರಾಮನ ಚರಿತ್ರೆಯೇ ರಾಮಾಯಣವೆಂದೂ ಅದನ್ನು ಬರೆದವನು ವಾಲ್ಮೀಕಿ ಋಷಿಯೆಂದೂ ಜಗದ್ವಿಖ್ಯಾತವಾಗಿರುವುದು. ಅಲ್ಲದೆ ರಾಮಾಯಣವೇ ಆದಿಕಾವ್ಯವೆಂದೂ ವಾಲ್ಮೀಕಿಯೇ ಆದಿ ಕವಿಯೆಂದೂ ಜನಜನಿತವಾಗಿರುವುದು.

ರಾಮನ ಚರಿತ್ರೆಯನ್ನು ಹೇಳುವ ಗ್ರಂಥಗಳು ಅನೇಕವಾಗಿರುವುವು. ಅವೆಲ್ಲವೂ ರಾಮಾಯಣವೆಂದೇ ಕರೆಯಲ್ಪಡುವುವು. ಅವರಲ್ಲಿ ಶ್ರೀಮದ್ರಾಮಾಯಣಕ್ಕೆ ಬಂದಿರುವ ಪ್ರಾಶಸ್ತ್ಯವು ಮತ್ತಾವುದಕ್ಕೂ ಬಂದಿಲ್ಲ. ಆದರೂ ಕೂಡ ಒಂದೊಂದು ರಾಮಾಯಣದಲ್ಲಿಯೂ ಈ ಶ್ರೀಮದ್ರಾಮಾಯಣದ ಕಥೆಯನ್ನೇ ಸಂಕ್ಷೇಪಿಸಿ ಹೇಳುತ್ತ ಕೊಂಚ ಕೊಂಚ ವಿಶೇಷವು ವರ್ಣಿತವಾಗಿದೆ.

ಪ್ರಕೃತದಲ್ಲಿ ನಾವು ವಿವರಿಸಲು ಹೊರಟಿರುವ ಅದ್ಭುತ ರಾಮಾಯಣವೆಂಬುದು ವಾಲ್ಮೀಕಿ ವಿರಚಿತವಾದುದು ಎಂದು "ಶ್ರೀಮದ್ವಾಲ್ಮೀಕೀಯೇ ಆದಿಕಾವ್ಯೇಽದ್ಭುತೋತ್ತರಕಾಂಡೆ" ಎಂಬುದರಿಂದ ತಿಳಿಯಬರುತ್ತದೆ. ಆದರೆ ವಾಲ್ಮೀಕಿಯೆ ; ಎಂಬುದಕ್ಕೆ ವಾಲ್ಮೀಕಿ ರಚಿತವಾದುದು ಎಂದೂ ಅರ್ಥವಾಗುತ್ತದೆ. ವಾಲ್ಮೀಕಿಯ ಶಿಷ್ಯರಿಂದ ರಚಿತವಾದುದು ಎಂದೂ ಅರ್ಥವಾಗುತ್ತದೆ. ಪ್ರಸಿದ್ಧವಾಗಿರುವ ಶ್ರೀಮದ್ರಾಮಾಯಣದಲ್ಲಿಯೂ, "ವಾಲ್ಮೀಕಿಯೆ" ಎಂಬುವಕ್ಕೆ ವಾಲ್ಮೀಕಿಯೇ ಸ್ವತಃ ರಚಿಸಿದುದು ಎಂದು ಬಹು ಜನರ ಮತವಾಗಿರುವುದರಿಂದ ಈ ಅದ್ಭುತರಾಮಾಯಣದಲ್ಲಿ "ವಾಲ್ಮೀಕೀಯೇ" ಎಂಬ ಪದಕ್ಕೂ ಅದೇ ಅರ್ಥವನ್ನು ಹೇಳಬೇಕಾಗಿರುವುದು. ಆದರೆ ಶ್ರೀಮದ್ರಾಮಾಯಣದ ಶೈಲಿಯು

ಪ್ರೌಢವೂ ಗಂಭೀರವಾಗಿಯೂ ಇರುವುದರಿಂದಲೂ ಅದ್ಭುತರಾಮಾಯಣದ ಶೈಲಿಯು ಕೇವಲ ಬಲ್ಬಜವಾಗಿರುವುದರಿಂದಲೂ ಇವುಗಳು ಒಂದೊಕ್ಕೊಂದು ಹೋಲಿಕೆಯಿಲ್ಲದಂತಿರುವುವು. ಆದರೆ ಅದ್ಭುತರಾಮಾಯಣವು ಕಲಿಕೆಯ ಮೊದಲನೆಯ ಭಾಗವೆಂದೂ ಅನಂತರ ವಿರಚಿಸುದುದು ಪ್ರೌಢವಾಗಬಹುದೆಂದೂ ಹೇಳಬಹುದೆಂದರೆ,

> ನೃಣಾಂ ಹಿ ಚರಿತಂ ರಾಮಚರಿತಂ ವರ್ಣಿತಂ ತತಃ |
> ಸೀತಾಮಾಹಾತ್ಮ್ಯಸಾರಂ ಯತ್ ವಿಶೇಷಾದತ್ರ ನೋಕ್ತವಾನ್ ||

ಎಂಬ ಶ್ಲೋಕದಿಂದ ರಾಮಮಹಿಮೆಯುಳ್ಳ ದಶಕಂಠ ರಾಮಾಯಣವನ್ನು ಮೊದಲು ಹೇಳಿದ್ದೇನೆ. ಈಗ ಸೀತೆಯ ಮಹಿಮೆಯನ್ನು ಹೇಳುತ್ತೇನೆ ಎಂದು ಈ ಅದ್ಭುತರಾಮಾಯಣವು ಆಮೇಲಾಗಿರುವುದೆಂಬ ಕಾರ್ಯವನ್ನು ಹೇಳುತ್ತಾನೆ. ಅಲ್ಲದೆ " ವಾಲ್ಮೀಕೀಯೇ ಅದ್ಭುತೋತ್ತರ ಕಾಂಡೆ '' ಎಂದಿರುವುದರಿಂದಲೂ ಇದು ಶ್ರೀಮದ್ರಾಮಾಯಣದ ರಚನೆಯಾದಮೇಲೆ ರಚಿತವಾಯಿತೆಂದೂ ಹೇಳಿ ದೃಢೀ ಕರಿಸಬಹುದು. ಇದರಿಂದ ಇದು ಆ ವಾಲ್ಮೀಕಿಯ ಶಿಷ್ಯರಲ್ಲಿ ಯಾರೋ ರಚಿ ಸಿರಬಹುದೆಂದು ಅರ್ಥಮಾಡಬೇಕಾಗುತ್ತದೆ.

> ಪಂಚವಿಂಶತಿ ಸಾಹಸ್ರಂ ನೃಲೋಕೇ ಯತ್ಪ್ರತಿಷ್ಠಿತಂ |
> ಸೀತಾ ಮಹಾತ್ಮ್ಯಸಾರಂ ಯದ್ವಿಶೇಷಾದತ್ರ ನೋಕ್ತವಾನ್ ||

ಎಂದು ಹೇಳಿರುವುದರಿಂದ ಪೂರ್ವ ಖಂಡವು ಇಪ್ಪತ್ತೈದು ಸಾವಿರ ಶ್ಲೋಕ ಗಳೆಂದೂ ವ್ಯಕ್ತವಾಗುತ್ತದೆ. ಪೂರ್ವ ಖಂಡದಲ್ಲಿ " ಚತುರ್ವಿಂಶಸ್ಸಹಸ್ರಿಕಾಯಾಂ'' ಎಂಬದಾಗಿ ಇಪ್ಪತ್ತನಾಲ್ಕು ಸಾವಿರವೆಂದು ಹೇಳಿದ್ದಾನೆ. ಈ ಅದ್ಭುತ ರಾಮಾಯಣವು ಸ್ವಲ್ಪ ಹೆಚ್ಚುಕಡಿಮೆ ಒಂದು ಸಾವಿರ ಶ್ಲೋಕವಿರುವುದರಿಂದ ಇದು ಸೇರಿದರೆ ಇಪ್ಪತ್ತೈದು ಸಾವಿರವಾಯಿತೆಂದು ಹೇಳಲು ಆಗುವುದಿಲ್ಲ. ಏತಕ್ಕೆಂದರೆ ಸೀತೆಯ ಮಹಿಮೆಯನ್ನು ಅಲ್ಲಿ ಹೆಚ್ಚಾಗಿ ಹೇಳಿಲ್ಲವೆಂದು ಅದನ್ನು ಬೇರೆಯಾಗಿ ಹೇಳುತ್ತೇನೆಂದೂ ಹೇಳಿರುವನು. ಆದರೆ ಇದಕ್ಕಿಂತಲೂ ಹಿಂದೆ ವಿರಚಿಸಲ್ಪಟ್ಟಿರುವುದೆಂದು ಅರ್ಥ ಕೊಡುವ ಲವಕುಶರ ಚರಿತ್ರೆಯ ರೂಪವಾದ ಉತ್ತರ ಖಂಡವೂ ಆ ಇಪ್ಪತ್ತೈದು ಸಾವಿರದಲ್ಲಿ ಸೇರಿದೆ ಎಂದಾಗುವುದು.

ಲವಕುಶರ ಚರಿತ್ರೆಯ ರೂಪವಾದ ಉತ್ತರ ಖಂಡಕ್ಕೂ ಈ ಅದ್ಭುತ ರಾಮಾಯಣ ರೂಪವಾದ ಉತ್ತರ ಖಂಡಕ್ಕೂ ಶೈಲಿಯಲ್ಲಿಯಾಗಲಿ ವರ್ಣನೆಯಲ್ಲಿಯಾಗಲಿ ಸಂಬಂಧವಿರುವುದಿಲ್ಲ. ಆ ಉತ್ತರ ಖಂಡವು ಶ್ರೀಮದ್ರಾಮಾಯಣದ ಸರಣಿಗೆ ಸರಿಹೊಂದುತ್ತದೆ. ಇದರಿಂದಲೂ ಅದ್ಭುತ ರಾಮಾಯಣದ ಕರ್ತೃವು ಬೇರೆಯಾಗಿರಬೇಕು.

## ಕಥೆಯ ಬೆಳವಣಿಗೆ.

ಸೀತಾಯಾ ಮೂಲಭೂತಾಯಾಃ ಪ್ರಕೃತೇಶ್ಚರಿತಂ ಮಹತ್ ||

ಎಂಬುದರಿಂದ ಸೀತೆಯು ಮೂಲಪ್ರಕೃತಿಯೆಂದೂ ಆಕೆಯೂ ಮಹಿಮೆವಂತಳೆಂದೂ ಮೊದಲೇ ಪ್ರತಿಜ್ಞೆಯನ್ನು ಮಾಡಿ ಅದಕ್ಕೆ ಅನುಸಾರವಾಗಿ ಶ್ರೀ ವಿಷ್ಣುವು ರಾಮಾವತಾರ ಮಾಡುವುದಕ್ಕೂ ಮೂಲ ಪ್ರಕೃತಿಯು ಸೀತೆಯ ಅವತಾರವೆತ್ತುವುದಕ್ಕೂ ಕಾರಣವನ್ನು ಹೇಳಿರುವರು. ಅದನ್ನೇ ಇಲ್ಲಿ ಶ್ರೀಮತಿ ಚರಿತೆಯೆಂದೂ, ಸಂಗೀತದ ಪ್ರಭಾವವೆಂದೂ ಕರೆಯ ಬಹುದಾಗಿದೆ. ಇದರಲ್ಲಿ ನಾರದನೂ, ಪರ್ವತನೂ, ಅಂಬರೀಷನ ಮಗಳಾದ ಶ್ರೀಮತಿಯನ್ನು ಮದುವೆಯಾಗಲು ಒಬ್ಬರನ್ನೊಬ್ಬರು ವಂಚಿಸಬೇಕೆಂಬ ಅಭಿಪ್ರಾಯದಿಂದ ಸ್ವಾಮಿಯನ್ನು ಮರೆಹೊಕ್ಕು ವೈರೂಪ್ಯವನ್ನು ಹೊಂದುವುದು ವರ್ಣಿತವಾಗಿದೆ. ನಾರದ ಪರ್ವತರು ಯೋಗಿಗಳಾಗಿದ್ದು ಅವರಿಗೆ ಈ ರೀತಿಯಾದ ವ್ಯಾಮೋಹ ಬರಬಹುದೇ? ಎಂಬ ಪ್ರಶ್ನೆಯು ತಲೆದೋರದಂತೆ ಆ ಋಷಿಗಳೂ ಆಗ ಅಪರಿಪಕ್ವ ಜ್ಞಾನವುಳ್ಳವರೆಂದು ವರ್ಣಿಸಿ ಅನಂತರ ಜ್ಞಾನಿಗಳಾದರೆಂದೂ ಗೌರವ ಬುದ್ಧಿಯನ್ನು ಉಳಿಸಿಕೊಡುವನು. ಈ ರೀತಿಯಾದ ಅಪರಿಪಕ್ವಜ್ಞಾನವೇ ಆ ಅಂಬರೀಷನಿಗೆ ಶಾಪಕೊಡಲು ಕಾರಣವಾಯಿತೆಂದೂ ವಿವರಿಸಿರುವನು. ಮುಂದೆಯೂಕೂಡ ಗಾನವಿದ್ಯೆಯಲ್ಲಿ ಅಹಂಭಾವಗೊಂಡ ನಾರದನನ್ನು ತುಂಬುವಿನ ಗಾನದ ಸಮಯದಲ್ಲಿ ಹೊಡೆದೋಡಿಸಿದುದರಿಂದ ಲಕ್ಷ್ಮಿಗೆ ಶಾಪ ಬಂದು ಆಕೆಯು ಅದರಿಂದ ಸೀತೆಯಾಗುವಳು ಎಂಬುದರಿಂದ ಈಕೆಯು ಆದಿಶಕ್ತಿಯೆಂದೇ ಹೇಳಿ ವಿವರಿಸಿರುವನು.



# ಕಥೆಯ ವಿರುಪೇರು.

ಗಾನವಿದ್ಯೆಯ ವಿಷಯದಲ್ಲಿ ಮಹತ್ವವನ್ನು ಹೇಳುತ್ತ ಅದರ ನಿಯಮ ಗಳನ್ನು ವರ್ಣಿಸಿ ದೇವರ್ಷಿಯಾದ ನಾರದನು ಪಟ್ಟ ಕಷ್ಟಗಳನ್ನು ವಿವರಿಸುವನು. ಇದರಿಂದ ಆ ವಿದ್ಯೆಯ ಮಹತ್ವವು ತಲೆದೋರುವುದು.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಸುವ್ರತ |
ಅಭ್ಯುತ್ಥಾನಮಧರ್ಮಸ್ಯ ತದಾ ಪ್ರಕೃತಿಸಂಭವಃ ||

ಎಂಬುದು

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ||

ಎಂಬ ಭಗವದ್ಗೀತೆಯ ಶ್ಲೋಕದ ಅನುಕರಣದಂತೆ ತೋರುವುದು.

ಪೂರ್ವ ರಾಮಾಯಣದ ಕಥೆಯನ್ನು ವಿವರಿಸುವಾಗ ರಾಮ ಹನುಮಂತರ ಕಥೆಯು ಲೌಕಿಕ ಜನರ ರೀತಿಯಂತೆ ವರ್ಣಿಸಲ್ಪಟ್ಟಿರುವುದು. ಈ ಉತ್ತರ ಖಂಡದಲ್ಲಿ ಆ ಹನುಮಂತನಿಗೆ ತಾನು ಪರಮಾತ್ಮನೆಂದೇ ದೃಢೀಕರಿಸಲು ತನ್ನ ನಿಜರೂಪವನ್ನು ಹನುಮಂತನಿಗೆ ತೋರಿಸಿ ವೇದಾಂತವನ್ನು ಕಥೆಯು ಮುಚ್ಚಿ ಹೋಗುವಂತೆ ಹೇಳಿರುವನು. ಇದು ಕಥಾದೃಷ್ಟಿಯಿಂದ ಆನಂದದಾಯಕವಲ್ಲ ದಿದ್ದರೂ ಸ್ವಾಮಿಯ ನಿಜಸ್ಥಿತಿಯನ್ನು ತಿಳಿಯುವ ವೇದಾಂತದೃಷ್ಟಿಯಿಂದ ಉಪಯುಕ್ತವಾದ ಅಂಶವಾಗಿದೆ.

ಕೊನೆಗೆ ರಾವಣಾದಿಗಳನ್ನು ಕೊಂದು ರಾಮನು ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾದಾಗ ಪ್ರಜೆಗಳೆಲ್ಲರೂ ಅಭಿನಂದಿಸುವರು. ಅಂತೆಯೇ ಋಷಿ ಗಳು ಬಂದು ಅಭಿನಂದಿಸಿದಾಗ ಸೀತೆಯು ತನಗೆ ಒಬ್ಬ ಮಹಾಯೋಗಿಯು ಹೇಳಿದ ಸಹಸ್ರಕಂಠ ರಾವಣನ ಚರಿತ್ರೆಯನ್ನು ಹೇಳಿ ರಾಮನಿಗೆ ಹುರಿದುಂಬಿಸು ವಳು. ಅಂತೆಯೇ ರಾಮನು ಎಲ್ಲರೊಡನೆಯೂ ಆ ಸಹಸ್ರಕಂಠನನ್ನು ವಧಿಸಲು ಹೊರಡುವನು. ಇಲ್ಲಿನ ವಿಷಯವು ಸಹೋದರನಾದ ವಿಭೀಷಣನಿಗಾಗಲಿ

ಸರ್ವಜ್ಞನಾದ ವಸಿಷ್ಠನಿಗಾಗಲೀ ಮತ್ತೆ ಯಾವುದೇ ಪ್ರಾಣಿಗಾಗಲಿ ತಿಳಿಯದಿದ್ದು ಈಕೆಗೆ ಮಾತ್ರ ಅವನು ಹೇಳಿದ್ದನೆಂಬುದು ಸತ್ಯವೆನ್ನಲು ಮನಸ್ಸನ್ನು ಅಳುಕು ವಂತೆ ಮಾಡುತ್ತದೆ.

ಅದರಂತೆಯೇ ಎಲ್ಲರೂ ಆ ರಾವಣನನ್ನು ಕೊಲ್ಲಲು ಹೋಗಿ ಅವನು ಬಿಟ್ಟ ಬಾಣದಿಂದ ತಮ್ಮ ತಮ್ಮ ಊರಿಗೆ ಎಸೆಯಲ್ಪಡುತ್ತಾರೆ. ಕೊನೆಗೆ ರಾಮನು ಸಾಯುವನು. ಆಗ ಸೀತೆಯು ಕಾಳಿಯ ಅವತಾರವನ್ನೆಸಗಿ ಎಲ್ಲರನ್ನೂ ನಿಗ್ರಹಿಸುವಳು. ಶಿವನು ಶವರೂಪದಿಂದ ಆಕೆಯ ತುಳಿತದಲ್ಲಿ ಕಾಲಿನಡಿ ಯಲ್ಲಿದ್ದು ಭಾರವನ್ನು ಸಹಿಸುವನು. ರಾಮನು ಬ್ರಹ್ಮನ ಹಸ್ತಸ್ಪರ್ಶದಿಂದ ಜೀವಿತನಾಗಿ ಆಕೆಯನ್ನು ಬಹುವಾಗಿ ಹೊಗಳುವನು. ಇಲ್ಲಿ ಆಕೆಯ ಕಾಳಿಕಾ ವತಾರದ ರೂಪವು ಪರಿಪೂರ್ಣವಾಗಿ ವರ್ಣಿತವಾಗಿ ಆದಿಮಾಯೆಯೇ ಸೀತೆಯು ಸೀತೆಯೇ ಕಾಳಿಯು, ಕಾಳಿಯೇ ಲಕ್ಷ್ಮಿಯು ಎಂಬ ಅಭೇದ ಬುದ್ಧಿಯನ್ನು ಉಂಟುಮಾಡುತ್ತದೆ.

ಇದರಲ್ಲಿ ಕಥಾಭಾಗವು ಅತ್ಯಲ್ಪವಾಗಿದ್ದು ವರ್ಣನಾಭಾಗಕ್ಕಿಂತಲೂ ವೇದಾಂತ ಭಾಗವೇ ಬಹುವಾಗಿ ಹೆಜ್ಜೆಹೆಜ್ಜೆಗೂ ವರ್ಣಿತವಾಗಿರುವುದರಿಂದ ಇದು ವೇದಾಂತಗ್ರಂಥವೆಂದು ಧಾರಾಳವಾಗಿ ಹೇಳಬಹುದಾಗಿದೆ.

ಪರಮಾತ್ಮನಾದ ರಾಮನಿಗಿಂತಲೂ ಮೂಲಪ್ರಕೃತಿಯಾದ ಸೀತೆಯು ಬಲಿಷ್ಠಳಾಗಿರುವುದರಿಂದ ಶಕ್ತ್ಯಧಿಕತಾ ರೂಪವಾದ ಶಾಕ್ತ ಪುರಾಣವೆಂದೂ ಕರೆಯಬಹುದಾಗಿದೆ. ಆದರೆ ಈ ಅಂಶವು ರಾಮನನ್ನು ಪರಮಾತ್ಮನೆಂದು ಹೇಳಿರುವಷ್ಟು ಬಹು ಸಂಖ್ಯೆಯಲ್ಲಿಲ್ಲದಿದ್ದರೂ ಕೊನೆಯ ಗುರಿಯಾದ ಸಹಸ್ರ ರಾವಣನ ವಧೆಯನ್ನು ಆಕೆಯೇ ಅವತಾರಮಾಡಿ ಮಾಡಿರುವುದರಿಂದ ಪ್ರಾಶಸ್ತ್ಯ ವನ್ನು ಕೊಡಬೇಕಾಗಿದೆ.

ಇದರಲ್ಲಿ ಸ್ತೋತ್ರರೂಪವಾಗಿ ಇರುವ ಸೀತಾಸಹಸ್ರನಾಮವನ್ನು ಪೂಜೆ ಮಾಡುವವರ ಅನುಕೂಲಕ್ಕೋಸ್ಕರವಾಗಿ ನಾಮರೂಪದಿಂದ ಕೊನೆಯಲ್ಲಿ ಕೊಟ್ಟಿ ದ್ದೇವೆ.

ಬಹುಮಂದಿ ವಿದ್ವಾಂಸರಿಗೆ ಆಶ್ರಯವನ್ನು ಪ್ರೋತ್ಸಾಹವನ್ನು ಕೊಟ್ಟು ಅವರಿಂದ ಅನೇಕ ಗ್ರಂಥಗಳನ್ನು ಪಾಮರರಿಗೂ ಸುಲಭರೀತಿಯಲ್ಲಿ ತಿಳಿಯುವಂತೆ ಮಾಡುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರಿಗೆ ನಾನು ಅನಂತಾನಂತ ವಂದನೆಗಳನ್ನು ಅರ್ಪಿಸುತ್ತೇನೆ. ಇವರಿಗೆ ಪರದೇವತೆಯಾದ ಆ ಚಾಮುಂಡಾಂಬಿಕೆಯು ಆಯುರಾರೋಗ್ಯ ಸತ್ಸಂತಾನ ಸೌಭಾಗ್ಯಗಳನ್ನು ಕೊಟ್ಟು ಸಲಹಲಿ ಎಂದು ಆಕೆಯನ್ನು ಅನನ್ಯಭಕ್ತಿಯಿಂದ ನಿರಂತರವೂ ಪ್ರಾರ್ಥಿಸುತ್ತೇನೆ.

**ನಾರಾಯಣೇನ ಸುಧಿಯಾ ಸೂರ್ಯೇತಿ ಪದಪೂರ್ವಿಣಾ ।**
**ಅನೂದಿ ತಃ ಕಥಾಭಾಗೋ ರಾಮಸ್ತುಷ್ಯತು ಮೇ ಪ್ರಭುಃ**

ಅನುವಾದಕ :

**ಬೇಲದಕೆರೆ ಸೂರ್ಯನಾರಾಯಣ ಶಾಸ್ತ್ರಿ.**

ಸಾಹಿತ್ಯ ವಿದ್ವಾನ್,

ಕನ್ನಡ ಪಂಡಿತ (ಮೈಸೂರು). ಕನ್ನಡ ವಿದ್ವಾನ್ (ಮದರಾಸು).



# ಅದ್ಭುತರಾಮಾಯಣದ ಕಥೆಯ ಸೂಕ್ಷ್ಮ ಪರಿಚಯ

ವಾಲ್ಮೀಕಿಯನ್ನು ಕುರಿತು ಅವನ ಶಿಷ್ಯನಾದ ಭರದ್ವಾಜನು ನೀನು ನೂರು ಕೋಟಿ ಗ್ರಂಥಸಂಖ್ಯೆಯುಳ್ಳ ರಾಮಾಯಣವನ್ನು ಮಾಡಿದ್ದೀಯಷ್ಟೆ. ಅದರಲ್ಲಿ ಇಪ್ಪತ್ತೈದು ಸಾವಿರ ಮಾತ್ರ ಪ್ರಸಿದ್ಧವಾಗಿದೆ. ಅದನ್ನು ನಾನು ಕೇಳಿದ್ದೇನೆ. ಉಳಿದುದು ಬ್ರಹ್ಮಲೋಕದಲ್ಲಿದೆ ಎಂದು ಹೇಳುತ್ತಿದ್ದೀಯೆ. ಅದರಲ್ಲಿ ಏನಿರುವುದು ಹೇಳು ಎಂದು ಪ್ರಶ್ನಿಸಲು, ಉಳಿದುವೆಲ್ಲವೂ ದೇವ ಚರಿತೆ. ಮನುಷ್ಯನ ಚರಿತ್ರೆರೂಪವಾದ ರಾಮನಡತೆಯನ್ನು ಭೂಲೋಕದಲ್ಲಿ ಬಿಟ್ಟಿರುವೆನು. ಆದರೂ ಸೀತೆಯ ಮಹಿಮೆಯ ಬೋಧಕವಾದುದನ್ನು ಹೇಳು ತ್ತೇನೆಂದು ಹೇಳಿ ಮುಂದುವರಿದು ರಾಮಸೀತೆಯರ ಅವತಾರಕ್ಕೆ ಕಾರಣವನ್ನು ಹೇಳುತ್ತಾ ಆ ರಾಮನೇ ಪರಮಪುರುಷನು. ಸೀತೆಯೇ ಆದಿಪ್ರಕೃತಿಯು ಎಂದು ಹೇಳುತ್ತ ಅವತಾರಕ್ಕೆ ಕಾರಣವನ್ನು ವಿವರಿಸಿರುವನು.

ಸೂರ್ಯವಂಶದಲ್ಲಿ ತ್ರಿಶಂಕುವಿನ ಹೆಂಡತಿಯು ತಪಸ್ಸುಮಾಡಿ ಅಂಬ ರೀಷನೆಂಬ ಮಗನನ್ನು ಪಡೆದಳು. ಆ ಅಂಬರೀಷನೂ ಕೂಡ ರಾಜ್ಯವನ್ನು ಮಂತ್ರಿಗಳಲ್ಲಿಟ್ಟು ತಪಸ್ಸನ್ನಾಚರಿಸಿ ಸ್ವಾಮಿಯನ್ನು ತೃಪ್ತಿಪಡಿಸಿದನು. ಆ ಸ್ವಾಮಿಯು ಪ್ರಸನ್ನನಾಗಿ ವರವನ್ನು ಕೇಳೆನ್ನಲು ಅವನು ನನಗೆ ಋಷಿಶಾಪಾದಿ ಗಳೊಂದೂ ಅಂಟಕೂಡದು. ನನ್ನ ರಕ್ಷಣೆಗೆ ನೀನಿರಬೇಕೆನ್ನಲು ಸ್ವಾಮಿಯು ಅಂತೇ ಆಗಲೆಂದು ಹೇಳಿ ಅವನ ರಕ್ಷಣೆಗೆ ತನ್ನ ಚಕ್ರವನ್ನು ಬಿಟ್ಟುಹೋಗುವನು. ಕಾಲಾನುಸಾರವಾಗಿ ಆ ರಾಜನಿಗೆ ಶ್ರೀಮತಿಯೆಂಬ ಮಗಳಾದಳು. ಈಕೆಗೆ ಪ್ರಾಯಬಂದಾಗ ರಾಜನ ಬಳಿಗೆ ನಾರದ ಪರ್ವತರು ಬಂದು ಈ ಕನ್ಯೆಯನ್ನು ನೋಡಿ ಮೋಹಿಸುವರು. ಅಂತೆಯೇ ದೊರೆಯನ್ನು ಬೇರೆಬೇರೆಯಾಗಿ ಕನ್ಯೆ ಯನ್ನು ಕೊಡೆಂದು ಯಾಚಿಸುವರು. ಆತನು ನಾಳೆಯೇ ಇಬ್ಬರೂ ಬನ್ನಿರಿ. ಸ್ವಯಂವರವಿಧಿಯಿಂದ ಮದುವೆಯಾಗಿರೆಂದು ಹೇಳುವನು. ಕನ್ಯೆಯಲ್ಲಿ ಆಸಕ್ತ ರಾದ ನಾರದ ಪರ್ವತರು ವಿಷ್ಣುವಿನ ಬಳಿಗೆ ಹೋಗಿ ನಾರದನಿಗೆ ಕುರೂಪವಾಗ

ಲೆಂದು ಪರ್ವತನೂ ಪರ್ವತನಿಗೆ ಕುರೂಪವಾಗಲೆಂದು ನಾರದನೂ ಕೇಳಿಕೊಂಡು ಅಂತೆಯೇ ವರವನ್ನು ಪಡೆದು ಬರುವರು. ಮೂರನೆಯ ದಿನ ರಾಜಾಸ್ಥಾನದಲ್ಲಿ ಸ್ವಯಂವರಕ್ಕೆ ಬಂದಾಗ ಆ ಕನ್ಯೆಯು ಇಬ್ಬರಲ್ಲಿಯೂ ಕುರೂಪವನ್ನು ನೋಡಿ ಮಧ್ಯೆ ಇದ್ದ ವಿಷ್ಣುವನ್ನು ವರಿಸುವಳು. ಇದರಿಂದ ಕೋಪಗೊಂಡ ಅವರು ರಾಜನಿಗೆ ಶಾಪವನ್ನು ಕೊಡುವರು. ಆ ಶಾಪವನ್ನು ಚಕ್ರವು ಬಡಿದೋಡಿಸು ತ್ತಿರಲು ನಾರದ ಪರ್ವತರನ್ನೇ ಅದು ಹಿಂಬಾಲಿಸಿತು. ಅವರು ಅದರ ಬಾಧೆ. ಯನ್ನು ತಪ್ಪಿಸಿಕೊಳ್ಳಲು ವಿಷ್ಣುವಿನ ಬಳಿಗೆ ಹೋಗುವರು. ಆಗ ಆ ಶಾಪ ವನ್ನು ವಿಷ್ಣುವು ತಡೆಯುವನು. ಈ ಋಷಿಗಳು ಇದು ವಿಷ್ಣುವಿನ ಮೋಸವೆಂದ ರಿತು ನೀನು ಅಂಬರೀಷನ ಕುಲದಲ್ಲಿ ಹುಟ್ಟಿ ಈ ಶ್ರೀಮತಿಯನ್ನು ಹೊಂದಿ ನಮ್ಮಂತೆ ವಿರಹದುಃಖವನ್ನು ಹೊಂದು ಎಂದು ಶಪಿಸುವರು. ಋಷಿಗಳ ಶಾಪವು ಅನಿವಾರ್ಯವಾದುದರಿಂದ ರಾಮಾವತಾರಮಾಡಿ ವಿರಹವನ್ನು ಅನುಭವಿಸುವನು.

ಪೂರ್ವದಲ್ಲಿ ಕೌಶಿಕನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಹರಿಕ್ಷೇತ್ರ ದಲ್ಲಿ ವಿಷ್ಣುವನ್ನು ಗಾಯನದಿಂದ ಎಂದರೆ ಸಂಗೀತರೀತಿಯಿಂದ ಭಜನೆಮಾಡು ತ್ತಿದ್ದನು. ಇದನ್ನು ಕೇಳಿ ಅನೇಕರು ಇವನ ಶಿಷ್ಯರಾದರು. ಮತ್ತೂ ಇವನಿಗೆ ಭೋಜನಾದಿ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ಇವನ ಸಂಗೀತ ವಿದ್ಯೆಯಲ್ಲಿ ಆಸಕ್ತರಾಗಿ ಕುಶಸ್ಥಲಿಯೇ ಮುಂತಾದ ಸ್ಥಳಗಳಿಂದ ಜನರು ಬಂದು ಸೇರಿದ್ದರು. ಎಲ್ಲರೂ ಸೇರಿ ಹರಿಯನ್ನು ಭಜಿಸುವುದು. ಆ ಹರಿ ಗಾಯನವನ್ನು ಕೇಳುವುದು. ಈ ರೀತಿಯಾಗಿ ಇರುತ್ತಿದ್ದರು. ಹೀಗಿರಲು ಒಂದುಸಾರಿ ಇವನು ವಾಸಿಸು ತ್ತಿದ್ದ ಕಳಿಂಗದೇಶದ ರಾಜನು ಈ ಕೌಶಿಕನನ್ನು ಕರೆಸಿ ತನ್ನ ಸ್ತುತಿಯನ್ನು ಹಾಡುವಂತೆ ಅಪ್ಪಣೆಮಾಡಿದನು. ಆ ಗಾಯಕರು ನರಸ್ತುತಿಯನ್ನು ಹಾಡುವು ದಕ್ಕಾಗಲಿ ಕೇಳುವುದಕ್ಕಾಗಲಿ ಒಡಂಬಡಲಿಲ್ಲ. ರಾಜನು ಬಲಾತ್ಕಾರಪಡಿಸಲು ತಾವು ಹಾಡುವುದಕ್ಕಾಗದಂತೆ ನಾಲಿಗೆಯ ತುದಿಯನ್ನು ಕತ್ತರಿಸಿಕೊಂಡರು. ನರಸ್ತುತಿಯನ್ನು ಕೇಳುವುದಕ್ಕೂ ಆಗದಂತೆ ಕಿವಿಗೆ ಗೂಟಗಳನ್ನು ಹೊಡಿಸಿ ಕೊಂಡರು. ಇದನ್ನು ನೋಡಿ ರಾಜನು ಅವರನ್ನೆಲ್ಲಾ ತನ್ನ ದೇಶದಿಂದ ಓಡಿಸಿ ಬಿಟ್ಟನು. ಕೊನೆಗೆ ಅವರೆಲ್ಲರೂ ಕಾಲಾನುಕಾಲದಲ್ಲಿ ಮೃತರಾಗಲು ಆ ಕೌಶಿಕಾದಿ ಗಳಿಗೆ ಒಳ್ಳೆಯ ಗತಿಯು ಸಿಕ್ಕಿತು. ಆಗ ವೈಕುಂಠಕ್ಕೆ ಬಂದ ಕೌಶಿಕನನ್ನು ಗೌರವಿಸಲು ವಿಷ್ಣುವು ಒಂದು ಸಂಗೀತದ ಸಭೆಯನ್ನು ಏರ್ಪಡಿಸಿದನು. ಆಗ

ತುಂಬುರುವು ಹಾಡುವುದಕ್ಕೆ ಬಂದನು. ಈ ಸಭೆಯನ್ನಲಂಕರಿಸಿ ಗೀತವನ್ನು ಕೇಳುವುದಕ್ಕೆ ಲಕ್ಷ್ಮಿಯು ಬಂದಳು. ಆಗ ಸಂಗೀತವನ್ನು ನಾನು ಚೆನ್ನಾಗಿ ಬಲ್ಲೆನೆಂದು ಅಹಂಭಾವವನ್ನು ಹೊಂದಿದ್ದ ನಾರದನೂ ಅಲ್ಲಿ ನಿಂತಿರಲು ಆ ಲಕ್ಷ್ಮಿಯ ಆಳುಗಳು ಬೆತ್ತದಿಂದ ಹೊಡೆದು ದೂರವಾಗಿ ಓಡಿಸಿಬಿಟ್ಟರು. ಆಗ ನಾರದನು ತನ್ನ ಜೊತೆಯ ತುಂಬುರುಗೆ ಗೌರವದೊರೆತುದನ್ನೂ ತನಗೆ ಅವ ಮಾನವಾದುದನ್ನೂ ಯೋಚಿಸಿ ಲಕ್ಷ್ಮಿಯ ಆಳುಗಳು ನನ್ನನ್ನು ತಾಮಸಭಾವ ದಿಂದ ಹೊಡೆದು ಓಡಿಸಿದುದರಿಂದ ಲಕ್ಷ್ಮಿಯು ರಾಕ್ಷಸರ ಹೊಟ್ಟೆಯಲ್ಲಿ ಹುಟ್ಟಲಿ ಮತ್ತು ನನ್ನನ್ನು ಅವರು ರಟ್ಟೆಯನ್ನು ಹಿಡಿದು ಹೊರಕ್ಕೆ ಎಳೆದುಹಾಕಿದುದರಿಂದ ರಾಕ್ಷಸಜನ್ಮದಲ್ಲಿ ಲಕ್ಷ್ಮಿಯನ್ನು ಹೆರುವವಳು ಗರ್ಭದಿಂದ ತೆಗೆದು ಸ್ವಲ್ಪವೂ ಲಕ್ಷ್ಯವಿಲ್ಲದೆ ಬಿಸುಡಲಿ '' ಎಂದು ಶಪಿಸಿದನು. ಈ ಶಾಪವನ್ನು ಕರ್ಣಾಕರ್ಣಿಕೆ ಯಾಗಿ ವಿಷ್ಣುವೂ ಲಕ್ಷ್ಮಿಯೂ ಕೇಳಿ ನಾರದನ ಬಳಿಗೆ ಅವನನ್ನು ಸಂತೈಸಲು ಬಂದರು. ಆಗ ಲಕ್ಷ್ಮಿಯು ತಾನು ರಾಕ್ಷಸರ ಹೊಟ್ಟೆಯಲ್ಲಿ ಹುಟ್ಟಬಾರದೆಂಬ ಅಭಿಪ್ರಾಯದಿಂದ ಅಸಾಧ್ಯವಾದ ವರವನ್ನು ಕೇಳಬೇಕೆಂದು ಯೋಚಿಸಿ ಅರಣ್ಯದ ಮುನಿಗಳಲ್ಲಿ ಒಬ್ಬೊಬ್ಬರಲ್ಲಿಯೂ ಒಂದೊಂದು ತೊಟ್ಟು ರಕ್ತವನ್ನು ತೆಗೆದುಕೊಳ್ಳ ಬೇಕು. ಅದನ್ನು ಒಂದು ಬಿಂದಿಗೆಗೆ ತುಂಬಬೇಕು. ಅದನ್ನು ಕುಡಿದವಳ ಹೊಟ್ಟೆಯಲ್ಲಿ ತಾನು ಹುಟ್ಟಬೇಕು. ಈ ರೀತಿಯಾಗಿ ನೀನು ನನಗೆ ಅನುಗ್ರಹ ಮಾಡೆಂದು ಕೇಳಿದಳು. ಅದಕ್ಕೆ ನಾರದನು ಹಾಗೆಯೇ ಆಗಲೆಂದು ಹೇಳಿದನು ಲಕ್ಷ್ಮಿಯು ಈ ರೀತಿಯಾಗಿ ಋಷಿಗಳ ರಕ್ತವು ಸೇರುವುದೂ ಅದರಿಂದ ನಾನು ಹುಟ್ಟುವುದೂ ಮಕ್ಕಳನ್ನು ನಿರ್ದಯದಿಂದ ಲೋಕದಲ್ಲಿ ಎಸೆಯುವುದೂ ಅಸಂಭವ ವೆಂದೂ ಇದರಿಂದ ತಾನು ರಾಕ್ಷಸರ ಹೊಟ್ಟೆಯಲ್ಲಿ ಹುಟ್ಟುವುದು ತಪ್ಪಿತೆಂದೂ ಭಾವಿಸಿ ಸಂತುಷ್ಟಳಾದಳು. ಆದರೆ ತಪಸ್ವಿಗಳ ಶಾಪವಾಗಲಿ ವರವಾಗಲಿ ಸುಳ್ಳಾಗುವುದಿಲ್ಲವೆಂಬುದನ್ನು ಮರೆತಳು. ವಿಷ್ಣುವು ಆ ನಾರದನನ್ನು ಕುರಿತು ಎಲೈ ನಾರದನೇ ! ನನಗೆ ಸಂಗೀತಗಾನದಿಂದ ತೃಪ್ತಿಯಾಗುವಂತೆ ಯಾವುದ ರಿಂದಲೂ ತೃಪ್ತಿಯುಂಟಾಗುವುದಿಲ್ಲ. ಕೌಶಿಕನೂ ತುಂಬುರುವೂ ಅದರಿಂದಲೇ ಗೌರವಾರ್ಹರಾಗಿದ್ದಾರೆ. ನೀನೂ ಆ ರೀತಿಯಾಗಿ ಅಭ್ಯಾಸಮಾಡು. ಮಾನ ಸೋತ್ತರ ಶೈಲದಲ್ಲಿ ಒಂದು ಗುಹೆಯಿರುವುದು. ಅದರ ಬಳಿಯಲ್ಲಿರುವ ಉಲೂಕ ನಿಂದ ಗಾನವನ್ನು ಅಭ್ಯಾಸಿಸು ಎಂದೆನ್ನಲು ನಾರದನು ಅಲ್ಲಿಗೆ ಹೋದನು. ಅಲ್ಲಿ ತನ್ನ ಸಂಗೀತವನ್ನು ಹಾಡಲು ಅಲ್ಲಿದ್ದವರೆಲ್ಲರೂ ನಕ್ಕರು. ಇವನಿಗೆ

ಏನೂ ಬರುವುದಿಲ್ಲವೆಂಪು ತಿಳಿದು ಹಾಸ್ಯಮಾಡಿ ಆ ಉಲೂಕನು ಮೊದಲಿನಿಂದ ಕಲಿಸಿದನು. ಕೊನೆಗೆ ಸ್ವಲ್ಪಮಟ್ಟಿಗೆ ಹಾಡುವುದು ಬರಲು ಅದರಿಂದ ಗರ್ವಿತನಾಗಿ ತುಂಬುರುವನ್ನು ಸೋಲಿಸಲು ಅವನ ಬಳಿಗೆ ಹೋಗಿ ಅಲ್ಲಿ ಅವಮಾನಿತನಾಗುವನು. ಕೊನೆಗೆ ವಿಷ್ಣುವಿನ ಬಳಿಗೆ ಹೋಗಿ ಮತ್ತೆ ಕೇಳಿಕೊಳ್ಳಲು ನಾನು ಕೃಷ್ಣಾವತಾರವನ್ನು ಮಾಡುತ್ತೇನೆ. ಆಗ ಪೂರ್ಣವಿದ್ಯಾಪಾರಂಗತನಾಗುತ್ತೀಯೆ ಎಂದು ಹೇಳಿದನು. ಅದರಂತೆ ನಾರದನು ಕಾಲಕಳೆಯುತ್ತ ಕೃಷ್ಣಾವತಾರದಲ್ಲಿ ಕೃಷ್ಣನಿಂದಲೂ ಆತನ ಹೆಂಡತಿಯರಿಂದಲೂ ಗಾನವನ್ನು ಕಲಿತು ಪೂರ್ಣಪಂಡಿತನಾದನು. ಇದು ಸೀತೆಯ ಅವತಾರಕ್ಕೆ ಕಾರಣವಾದ ಶಾಪದ ಕಥೆಯಾಯಿತು. ಇಲ್ಲಿ ಸಂಗೀತ ವಿದ್ಯೆಗೆ ಬಹು ಪ್ರಾಶಸ್ತ್ಯವನ್ನು ಹೇಳಿ ಅವುಗಳ ನಿಯಮುವನ್ನು ಹೇಳಿದೆ. ಇತ್ತ ದಶಾಸ್ಯನೆಂಬ ರಾವಣನು ವರದಿಂದ ಗರ್ವಿತನಾಗಿ ಎಲ್ಲರಿಂದಲೂ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಋಷಿಗಳನ್ನೂ ನೋಡಿ ಇವರಿಂದಲೂ ಕಪ್ಪವನ್ನು ತೆಗೆದುಕೊಳ್ಳಬೇಕೆಂದು ಯೊಚಿಸಿ ಎಲ್ಲರಲ್ಲೂ ರಕ್ತದ ಹನಿಗಳನ್ನು ತೆಗೆದುಕೊಂಡನು. ಅದನ್ನು ಒಂದು ಗಡಿಗೆಯಲ್ಲಿ ಸೇರಿಸಿಕೊಂಡನು. ಇದನ್ನು ವಿಷವೆಂದು ಹೇಳಿ ತನ್ನ ಪ್ರೀತಿಪಾತ್ರಳಾದ ಮಂಡೋದರಿಯಲ್ಲಿ ಕೊಟ್ಟನು. ಅನಂತರ ರಾವಣನು ಗಂಧರ್ವ ಕಿನ್ನರರೇ ಮುಂತಾದ ಕನ್ನಿಕೆಯರಲ್ಲಿ ಆಸಕ್ತನಾಗಿ ವರ್ಷಾಂತರಗಳಾದರೂ ಮನೆಗೆ ಬರದಿರಲು ಮಂಡೋದರಿಯು ಗಂಡನು ಪರಸ್ತ್ರೀಯಾಸಕ್ತನಾಗಿ ತನ್ನಲ್ಲಿ ಪ್ರೀತಿಯನ್ನು ತೋರಿಸದಿದ್ದುದರಿಂದ ವಿಷವನ್ನು ಕುಡಿದು ಪ್ರಾಣಬಿಡಲುದ್ದೇಶಿಸಿ ವಿಷವೆಂದು ಹೇಳಿ ಕೊಟ್ಟಿದ್ದ ಆ ರಕ್ತವನ್ನು ವಿಷವೆಂದೆಣಿಸಿ ಕುಡಿದಳು. ಅದರಿಂದ ಗಂಡನ ಸಂಪರ್ಕವಿಲ್ಲದೆಯೇ ಗರ್ಭಿಣಿಯಾಗಿ ಅವಮಾನದ ಭೀತಿಯಿಂದ ಆ ಮಗುವನ್ನು ಸಮುದ್ರದಾಚೆಗೆ ಹೋಗಿ ಹೆತ್ತು ಭೂಮಿಯಲ್ಲಿ ಹೂಳಿದಳು. ಇದೇ ಮಗುವು ಜನಕನಿಗೆ ಸಿಕ್ಕಿ ಸೀತೆಯೆಂಬ ಹೆಸರನ್ನು ಹೊಂದಿದಳು. ಶ್ರೀಮದ್ರಾಮಾಯಣದ ಕಥೆಯಂತೆ ರಾಮನು ವನವಾಸಕ್ಕೆ ಹೋಗಿ ಸೀತೆಯನ್ನು ಕಳೆದುಕೊಂಡು ದಶಾಸ್ಯನನ್ನು ಕೊಂದು ಮತ್ತೆ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದನು. ಈ ರೀತಿಯಾಗಿ ಅಭಿಷಿಕ್ತನಾದ ರಾಮನನ್ನು ಗೌರವಿಸುವುದು ಪ್ರಜೆಗಳ ಕರ್ತವ್ಯವಾಗಿರುವುದರಿಂದ ಪ್ರಜೆಗಳಲ್ಲಿ ಸೇರಿದ ಋಷಿಗಳು ಬಂದು ರಾಮನಿಗೆ ಧನ್ಯವಾದವನ್ನು ಸೂಚಿಸಲು ಸೀತೆಯು ತಾನು ತಂದೆಯಮನೆಯಲ್ಲಿದ್ದಾಗ ಕೇಳಿದ ದಶಕಂಠ ಸಹಸ್ರಕಂಠರ ಕಥೆಯನ್ನು ಹೇಳಿ ರಾಮನು ಆ ಸಹಸ್ರಕಂಠನನ್ನು ವಧಿಸು

ವಂತೆ ಪ್ರೇರಿಸಿದಳು. ಅದರಂತೆ ಅವನ ಸ್ಥಳವಾದ ಶ್ವೇತದ್ವೀಪಕ್ಕೆ ಪರಿವಾರದೊಡನೆ ಹೋಗಿ ಅವನಿಂದ ಪರಾಜಿತನಾಗಿ ಪ್ರಾಣಬಿಟ್ಟು ರಥದಲ್ಲಿ ಮಲಗಿರುವನು. ಆಗ ಈ ಸೀತೆಯು ಕಾಳಿಯ ಅವತಾರವನ್ನು ಮಾಡಿ ಆತನನ್ನು ಕೊಲ್ಲುವಳು. ಇದು ಸಂಕ್ಷಿಪ್ತವಾದ ಕಥೆ.



# ವಿಷಯಾನುಕ್ರಮಣಿಕೆ.



ಶ್ರೀಃ

|| ಶ್ರೀಗುರುಭ್ಯೋ ನಮಃ ||



**ಅಥ ಅದ್ಭುತರಾಮಾಯಣ ಪ್ರಾರಂಭಃ**

# ಅದ್ಭುತರಾಮಾಯಣೇ

## ಪ್ರಥಮಃ ಸರ್ಗಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೧ ॥**

**ನಮಸ್ತಸ್ಮೈಮುನೀಂದ್ರಾಯ ಶ್ರೀಯುತಾಯ ಯಶಸ್ವಿನೇ ।**
**ಶಾಂತಾಯ ವೀತರಾಗಾಯ ವಾಲ್ಮೀಕಾಯ ನಮೋ ನಮಃ ॥ ೨ ॥**

---

## ಒಂದನೆಯ ಸರ್ಗವು

೧. ಪರಮಪಾವನನೂ ದೇವತಾಶ್ರೇಷ್ಠನೂ ಆದ ನಾರಾಯಣನಿಗೆ ನಮಸ್ಕರಿಸಿ, ಮನುಷ್ಯಶ್ರೇಷ್ಠನಾದ ಅರ್ಜುನನಿಗೆ ನಮಸ್ಕರಿಸಿ, ಸರಸ್ವತಿಗೆ ನಮಸ್ಕರಿಸಿ, ಋಷಿಶ್ರೇಷ್ಠನಾದ ವ್ಯಾಸನಿಗೂ ನಮಸ್ಕರಿಸಿ ಅನಂತರ ಜಯಜಯ ಎಂಬ ಶಬ್ದವನ್ನು ಹೇಳಬೇಕು. (ಜಯವೆಂದರೆ ಭಾರತಕ್ಕೆ ಹೆಸರಿದೆ. ಆ ಭಾರತವನ್ನು ಹೇಳಬೇಕೆಂದು ಅರ್ಥವಾಗುತ್ತದೆ. ಇಲ್ಲಿ ಆ ಅರ್ಥವು ಅನುಕೂಲವಾಗಿರುವುದರಿಂದ ಅದನ್ನು ಹೇಳಬೇಕು.)

೨. ಮುನೀಂದ್ರನೂ ಸಂಪದ್ಯುಕ್ತನೂ ಯಶಸ್ವಿಯೂ ಶಾಂತನೂ ರಾಗದ್ವೇಷಾದಿಗಳಿಲ್ಲದವನೂ ಆದ ವಾಲ್ಮೀಕಿಗೆ ನಮಸ್ಕರಿಸುತ್ತೇನೆ.

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ ೩ ॥

ಜಯತಿ ರಘುವಂಶತಿಲಕಃ ಕೌಸಲ್ಯಾನಂದವರ್ಧನೋ ರಾಮಃ ।
ದಶವದನನಿಧನಕಾರೀ ದಾಶರಥಿಃ ಪುಂಡರೀಕಾಕ್ಷಃ ॥ ೪ ॥

ತಮಸಾತೀರನಿಲಯಂ ನಿಲಯಂ ತಪಸಾಂ ಗುರುಂ ॥
ವಚಸಾಂ ಪ್ರಥಮಸ್ಥಾನಂ ವಾಲ್ಮೀಕಿಂ ಮುನಿಪುಂಗವಂ ॥ ೫ ॥

ವಿನಯಾವನತೋ ಭೂತ್ವಾ ಭಾರದ್ವಾಜೋ ಮಹಾಮುನಿಃ ॥
ಅಪೃಚ್ಛತ್ಸಂಯತಃ ಶಿಷ್ಯಃ ಕೃತಾಂಜಲಿಪುಟೋ ವಶೀ ॥ ೬ ॥

ರಾಮಾಯಣಮಿತಿ ಖ್ಯಾತಂ ಶತಕೋಟಿ ಪ್ರವಿಸ್ತರಂ ॥
ಪ್ರಣೀತಂ ಭವತಾ ಯಚ್ಚ ಬ್ರಹ್ಮಲೋಕೇ ಪ್ರತಿಷ್ಠಿತಂ ॥ ೭ ॥

---

೩. ರಾಮನಿಗೆ ನಮಸ್ಕಾರವು. ರಾಮಭದ್ರನಿಗೆ ನಮಸ್ಕಾರವು. ರಾಮಚಂದ್ರನಿಗೆ ನಮಸ್ಕಾರವು. ವೇಧಸ್ಸಿಗೆ ನಮಸ್ಕಾರವು. ರಘುನಾಥನಿಗೆ ನಮಸ್ಕಾರವು. ನಾಥನಿಗೆ ನಮಸ್ಕಾರವು. ಸೀತಾಪತಿಗೆ ನಮಸ್ಕಾರವು.

೪. ರಘುವಂಶಕ್ಕೆ ತಿಲಕನಾದ ಕೌಸಲ್ಯೆಗೆ ಆನಂದವನ್ನು ಉಂಟುಮಾಡುವ ರಾಮನು ಸರ್ವೋತ್ಕೃಷ್ಟತೆಯಿಂದಿದ್ದಾನೆ. ದಶವದನನನ್ನು ಕೊಂದ ದಶರಥನ ಮಗನಾದ ಪುಂಡರೀಕದಂತೆ ಕಣ್ಣುಗಳುಳ್ಳ ರಾಮನು ಉತ್ಕೃಷ್ಟತೆಯಿಂದಿದ್ದಾನೆ.

೫. ತಮಸಾನದಿಯ ದಡದಲ್ಲಿ ಮನೆಯುಳ್ಳ ತಪಸ್ಸಿಗೆ ಮನೆಯಾದ ಗುರುವಾದ ಮಾತಿಗೆಲ್ಲಾ ಮೊದಲನೆಯ ಸ್ಥಾನವಾದ ಋಷಿಶ್ರೇಷ್ಠನಾದ ವಾಲ್ಮೀಕಿಗೆ ನಮಸ್ಕರಿಸುತ್ತೇನೆ.

೬. ಮಹಾಮುನಿಯಾದ ಆ ವಾಲ್ಮೀಕಿಗೆ ಪ್ರಿಯಶಿಷ್ಯನಾದ ಇಂದ್ರಿಯನಿಗ್ರಹವುಳ್ಳ ಭಾರದ್ವಾಜನು ಕೈಮುಗಿದುಕೊಂಡು ಇಂತೆಂದು ಕೇಳಿದನು.

೭. ನೂರು ಕೋಟಿ ಗ್ರಂಥಗಳ ವಿಸ್ತಾರವುಳ್ಳ ರಾಮಾಯಣವನ್ನು ನೀನು ಮಾಡಿದ್ದೀಯೆ. ಅದು ಬ್ರಹ್ಮಲೋಕದಲ್ಲಿ ನಿಂತಿತು.

ಶ್ರೂಯತೇ ಬ್ರಾಹ್ಮಣೈರ್ನಿತ್ಯಮೃಷಿಭಿಃ ಪಿತೃಭಿಃ ಸುರೈಃ ॥
ಪಂಚವಿಂಶತಿಸಾಹಸ್ರಂ ರಾಮಾಯಣಮಿದಂ ಭುವಿ ॥ ೮ ॥

ತದಾಕರ್ಣಿತಮಸ್ಮಾಭಿಃ ಸವಿಶೇಷಂ ಮಹಾಮುನೇ ॥
ಶತಕೋಟಿಪ್ರವಿಸ್ತಾರೇ ರಾಮಾಯಣಮಹಾರ್ಣವೇ ॥ ೯ ॥

ಆಕರ್ಣ್ಯಾದರಿಣಃ ಪೃಷ್ಟಂ ಭಾರದ್ವಾಜಸ್ಯ ವೈ ಮುನಿಃ ॥
ಹಸ್ತಾಮಲಕವತ್ಸರ್ವಂ ಸಸ್ಮಾರ ಶತಕೋಟಿಕಂ ॥ ೧೦ ॥

ಓಮಿತ್ಯುಕ್ತ್ವಾ ಮುನಿಃ ಶಿಷ್ಯಂ ಪ್ರೋವಾಚ ವದತಾಂ ವರಃ ॥ ೧೧ ॥

ಭಾರದ್ವಾಜ ಚಿರಂಜೀವ ಸಾಧುಸ್ಮಾರಿತಮದ್ಯ ವಃ ॥
ಶತಕೋಟಿಪ್ರವಿಸ್ತಾರೇ ರಾಮಾಯಣಮಹಾರ್ಣವೇ ॥ ೧೨ ॥

---

೮. ಬ್ರಾಹ್ಮಣರೂ ಋಷಿಗಳೂ ಪಿತೃಗಳೂ ದೇವತೆಗಳೂ ಇಪ್ಪತ್ತೈದು ಸಾವಿರ ಗ್ರಂಥಗಳ ರಾಮಾಯಣವು ಭೂಮಿಯಲ್ಲಿವೆ, ಎಂದು ಹೇಳುತ್ತಾರೆ.

೯. ಎಲೈ ಋಷಿಶ್ರೇಷ್ಠನೇ! ಈ ಭೂಮಿಯಲ್ಲಿರುವ ಇಪ್ಪತ್ತೈದು ಸಾವಿರ ರಾಮಾಯಣವನ್ನು ಅದರಲ್ಲಿರುವ ಗೂಢಾರ್ಥದೊಡನೆ ಕೇಳಿದ್ದೇವೆ. ದೇವಲೋಕ ದಲ್ಲಿರುವ ಆ ಶತಕೋಟಿ ರಾಮಾಯಣದಲ್ಲಿ ಏನು ಹೇಳಿದೆ? ಎಂಬುದು ನನ್ನ ಮನಸ್ಸಿನಲ್ಲಿ ಕೊರೆಯುತ್ತಿದೆ. ಅದನ್ನು ನನಗೆ ದಯವಿಟ್ಟು ಹೇಳು.

೧೦–೧೧. ಪ್ರೀತಿಯಿಂದ ಕೇಳುತ್ತಿರುವ ಆ ಭಾರದ್ವಾಜನ ಮಾತನ್ನು ಈ ವಾಲ್ಮೀಕಿಯು ಕೇಳಿ ಆ ಶತಕೋಟಿರಾಮಾಯಣವನ್ನು ಅಂಗೈಯ್ಯಲ್ಲಿ ನೆಲ್ಲಿಯ ಕಾಯನ್ನು ಇಟ್ಟುಕೊಂಡರೆ ಹೇಗೆ ಕಾಣುವುದೋ ಹಾಗೆ ನೋಡುತ್ತ ತಿಳಿದನು. ಅನಂತರ ಹಾಗೇ ಆಗಲೆಂದು ಶಿಷ್ಯನನ್ನು ಕುರಿತು ಇಂತೆಂದು ಹೇಳಿದನು.

೧೨. ಎಲೈ ಭಾರದ್ವಾಜನೆ! ನೀನು ನನಗೆ ಚೆನ್ನಾಗಿ ಜ್ಞಾಪಿಸಿದೆ. ಬಹು ಕಾಲ ಬದುಕು. ಆ ದೇವಲೋಕದಲ್ಲಿರುವ ನೂರುಕೋಟಿ ವಿಸ್ತಾರವುಳ್ಳ ರಾಮಾ ಯಣದಲ್ಲಿ ರಾಮನ ಆಶ್ಚರ್ಯಕರವಾದ ಚರಿತ್ರೆಯು ಹೇಳಲ್ಪಟ್ಟಿದೆ.

ರಾಮಸ್ಯ ಚರಿತಂ ಸರ್ವಮಾಶ್ಚರ್ಯಂ ಸಮ್ಯಗೀರಿತಂ
ಪಂಚವಿಂಶತಿಸಾಹಸ್ರಂ ನೃಲೋಕೇ ಯತ್ಪ್ರತಿಷ್ಠಿತಂ ॥ ೧೩ ॥

ನೃಣಾಂ ಹಿ ಸದೃಶಂ ರಾಮಚರಿತಂ ವರ್ಣಿತಂ ತತಃ ॥
ಸೀತಾಮಾಹಾತ್ಮ್ಯಸಾರಂ ಯತ್ ವಿಶೇಷಾದತ್ರ ನೋಕ್ತವಾನ್ ॥ ೧೪ ॥

ಶೃಣುಷ್ವಾವಹಿತೋ ಬ್ರಹ್ಮನ್ ಕಾಕುತ್ಸ್ಥಚರಿತಂ ಮಹತ್ ॥
ಸೀತಾಯಾ ಮೂಲಭೂತಾಯಾಃ ಪ್ರಕೃತೇಶ್ಚರಿತಂ ಮಹತ್ ॥ ೧೫ ॥

ಆಶ್ಚರ್ಯಮಾಶ್ಚರ್ಯಮಿದಂ ಗೋಪಿತಂ ಬ್ರಹ್ಮಣೋ ಗೃಹೇ ॥
ಹಿತಾಯ ಪ್ರಿಯಶಿಷ್ಯಾಯ ತುಭ್ಯಮಾವೇದಯಾಮಿ ತತ್ ॥ ೧೬ ॥

ಜಾನಕೀ ಪ್ರಕೃತಿಃ ಸೃಷ್ಟೇರಾದಿಭೂತಾ ಮಹಾಗುಣಾ ॥
ತಪಸ್ಸಿದ್ಧಿಃ ಸ್ವರ್ಗಸಿದ್ಧಿಃ ಭೂತಿರ್ಭೂತಿಮತಾಂ ಸತೀ ॥ ೧೭ ॥

ವಿದ್ಯಾವಿದ್ಯಾ ಚ ಮಹತೀ ಗೀಯತೇ ಬ್ರಹ್ಮವಾದಿಭಿಃ ॥
ಋದ್ಧಿಃ ಸಿದ್ಧಿರ್ಗುಣಮಯೀ ಗುಣಾತೀತಾ ಗುಣಾತ್ಮಿಕಾ ॥ ೧೮ ॥

---

೧೩–೧೪. ಮನುಷ್ಯಲೋಕದಲ್ಲಿರುವ ಇಪ್ಪತ್ತೈದುಸಾವಿರ ರಾಮಾಯಣ ದಲ್ಲಿ ಮನುಷ್ಯರಿಗೆ ಅನುಗುಣವಾದ ರಾಮಚರಿತ್ರೆಯನ್ನು ವರ್ಣಿಸಿದ್ದೇವೆ. ಅದರಲ್ಲಿ ಸೀತೆಯ ಮಹಿಮಾಸಾರವನ್ನು ಅತಿಶಯವಾಗಿ ಹೇಳಿಲ್ಲ.

೧೫–೧೬. ಎಲೈ ಭಾರದ್ವಾಜನೇ! ಶ್ರೀರಾಮನ ಚರಿತ್ರೆಯನ್ನು ಹೇಳುತ್ತೇನೆ ಮನಸ್ಸಿಟ್ಟು ಕೇಳು. ಮತ್ತು ಮೂಲಭೂತಳಾದ ಪ್ರಕೃತಿಭೂತಳಾದ ಸೀತೆಯ ಮಹ ತ್ವವನ್ನು ಕೇಳು. ಇದು ಬಹು ಆಶ್ಚರ್ಯವಾದುದು. ಈ ಸೀತೆಯ ಚರಿತ್ರೆಯನ್ನು ಬ್ರಹ್ಮನ ಮನೆಯಲ್ಲಿ ಗುಟ್ಟಾಗಿಟ್ಟಿದ್ದಾರೆ. ಹಿತನೂ ಪ್ರಿಯಶಿಷ್ಯನೂ ಆದ ನಿನಗೆ ಇದನ್ನು ಹೇಳುತ್ತೇನೆ.

೧೭–೧೮. ಜಾನಕಿಯು ಸೃಷ್ಟಿಗೆ ಮುಖ್ಯಳು. ಆದಿಭೂತಳು. ಉತ್ತಮ ಗುಣವುಳ್ಳವಳು. ತಪಸ್ಸಿಗೆ ಸಿದ್ಧಿಸ್ವರೂಪಳು. ಸ್ವರ್ಗಸಿದ್ಧಿಯನ್ನು ಕೊಡುವವಳು. ಐಶ್ವರ್ಯವಂತರಿಗೆಲ್ಲಾ ಐಶ್ವರ್ಯರೂಪಳು. ವಿದ್ಯೆಯ ಮತ್ತು ಅವಿದ್ಯೆಯ ಸ್ವರೂಪಳು. ಎಂಬುದಾಗಿ ಬ್ರಹ್ಮವಾದಿಗಳು ಹೇಳುತ್ತಾರೆ. ಏಳಿಗೆಯನ್ನು ಕೊಡುವವಳು. ಸಿದ್ಧಿ ರೂಪಳು. ಗುಣಮಯಳು. ಗುಣಗಳಿಗೆ ಅತೀತಳು. ಗುಣಗಳ ಸ್ವರೂಪಳು.

ಬ್ರಹ್ಮಬ್ರಹ್ಮಾಂಡಸಂಭೂತಾ ಸರ್ವಕಾರಣಕಾರಣಂ ॥
ಪ್ರಕೃತಿರ್ನಿಕೃತಿರ್ದೇವೀ ಚಿನ್ಮಯೀ ಚಿದ್ವಿಲಾಸಿನೀ ॥ ೧೯ ॥

ಮಹಾಕುಂಡಲಿನೀ ಸರ್ವಾನುಸ್ಯೂತಾ ಬ್ರಹ್ಮಸಂಜ್ಞಿತಾ ॥
ತಸ್ಯಾವಿಲಸಿತಂ ಸರ್ವಂ ಜಗದೇತಚ್ಚರಾಚರಂ ॥ ೨೦ ॥

ಯಾಮಾಧಾಯ ಹೃದಿ ಬ್ರಹ್ಮ ಯೋಗಿನಃ ತತ್ವದರ್ಶಿನಃ ॥
ನಿಘಟ್ಟಯಂತಿ ಹೃದ್ಗ್ರಂಥಿಂ ಭವಂತಿ ಸುಖಮೂರ್ತಿಕಾಃ ॥ ೨೧ ॥

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಸುವ್ರತ ॥
ಅಭ್ಯುತ್ಥಾನಮಧರ್ಮಸ್ಯ ತದಾ ಪ್ರಕೃತಿಸಂಭವಃ ॥ ೨೨ ॥

ರಾಮಃ ಸಾಕ್ಷಾತ್ಪರಂಜ್ಯೋತಿಃ ಪರಂ ಧಾಮ ಪರಃ ಪುಮಾನ್ ॥
ಆಕೃತೌ ಪರಮೋ ಭೇದೋ ನ ಸೀತಾರಾಮಯೋರ್ಯತಃ ॥ ೨೩ ॥

---

೧೯. ಆಕೆಯು ಬ್ರಹ್ಮಸ್ವರೂಪಳು. ಬ್ರಹ್ಮಾಂಡಸ್ವರೂಪಳು. ಬ್ರಹ್ಮಬ್ರಹ್ಮಾಂಡಗಳಿಗೆ ಉತ್ಪತ್ತಿಕಾರಣಳು. ಕಾರಣಗಳಿಗೆಲ್ಲಾ ಕಾರಣಳು. ಪ್ರಕೃತಿಸ್ವರೂಪಳು. (ಮೂಲಭೂತಳು). ವಿಕಾರ ರೂಪಳು (ಕಾರ್ಯರೂಪಳು). ಚಿನ್ಮಿಕಾರಳು. ಚಿತ್ ಸ್ವರೂಪಳು.

೨೦. ಮಹಾಕುಂಡಲಿನಿಯು. ಸರ್ವರಲ್ಲಿಯೂ ಸೇರಿರುವವಳು. ಬ್ರಹ್ಮ ಸಂಜ್ಞೆಯುಳ್ಳವಳು. ಈ ಜಗತ್ತಿನ ಚರಾಚರಗಳೆಲ್ಲವೂ ಆಕೆಯ ಕೆಲಸಗಳೇ!

೨೧, ಆ ಪ್ರಕೃತಿಯನ್ನು ತತ್ವದರ್ಶಿಗಳಾದ ಯೋಗಿಗಳು ಹೃದಯದಲ್ಲಿಟ್ಟುಕೊಂಡು ಧ್ಯಾನಿಸಿ ಆ ಹೃದ್ಗ್ರಂಥಿಯನ್ನು ಭೇದಿಸಿಕೊಂಡು ಅಲ್ಲಿ ಆಕೆಯನ್ನು ಸಾಕ್ಷಾತ್ಕರಿಸಿ ಸುಖವನ್ನು ಅನುಭವಿಸುತ್ತಾರೆ.

೨೨. ಯಾವಾಗ ಯಾವಾಗ ಧರ್ಮಕ್ಕೆ ಗ್ಲಾನಿಯು ಬರುವುದೋ ಮತ್ತು ಅಧರ್ಮವು ತಲೆಯೆತ್ತುತ್ತದೆಯೋ ಆಗ ಆ ಪ್ರಕೃತಿಯು ಅವತರಿಸುತ್ತಾಳೆ.

೨೩. ರಾಮನು ಪರಂಜ್ಯೋತಿಸ್ವರೂಪನು. ಉತ್ತಮವಾದ ಸ್ಥಾನಸ್ವರೂಪನು. ಪರಮಪುರುಷನು. ರಾಮಸೀತೆಯರಿಗೆ ಆಕಾರದಲ್ಲಿ ಭೇದವೇ ಹೊರತು ವಾಸ್ತವಿಕ ಸ್ಥಿತಿಯಲ್ಲಿ ಭೇದವಿಲ್ಲ.

ರಾಮಃ ಸೀತಾ ಜಾನಕೀ ರಾಮಭದ್ರೋ
ನಾಣುರ್ಭೇದೋ ನೈತಯೋರಸ್ತಿ ಕಶ್ಚಿತ್ ॥
ಸಂತೋ ಬುಧ್ವಾ ತತ್ವಮೇತದ್ವಿಬುದ್ಧಾಃ
ಪಾರಂ ಯಾತಾಃ ಸಂಸೃತೇಃ ಮೃತ್ಯುವಕ್ತ್ರಾತ್ ॥ ೨೪ ॥

ರಾಮೋ ಚಿಂತ್ಯೋ ನಿತ್ಯಚಿತ್ ಸರ್ವಸಾಕ್ಷೀ
ಸರ್ವಾಂತಸ್ಥಃ ಸರ್ವಲೋಕೈಕಕರ್ತಾ ॥
ಭರ್ತಾ ಹರ್ತಾನಂದಮೂರ್ತಿರ್ವಿಭೂಮಾ
ಸೀತಾಯೋಗಾಚ್ಚಿಂತ್ಯತೇ ಯೋಗಿಭಿಸ್ಸಃ ॥ ೨೫ ॥

**ಅಪಾಣಿಪಾದೋ ಜವನೊ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ ॥**
**ಸ ವೇತ್ತಿ ವಿಶ್ವಂ ನ ಹಿ ತಸ್ಯ ವೇತ್ತಾ ತಮಾಹುರಗ್ರ್ಯಂ ಪುರುಷಂ ಪುರಾಣಂ ॥**

---

೨೪. ರಾಮನೇ ಸೀತೆಯು. ಸೀತೆಯೇ ರಾಮನು. ಇವರಿಬ್ಬರಿಗೂ ಸ್ವಲ್ಪವೂ ಭೇದವೇ ಇಲ್ಲ. ಸತ್ಪುರುಷರು ಈ ತತ್ವವನ್ನು ತಿಳಿದು ಅದರಿಂದ ಮತ್ತೂ ಎಚ್ಚತ್ತು ಕೊಂಡು ಯಮನ ಮುಖರೂಪವಾದ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಿರುವರು.

೨೫. ಯಾವಾಗಲೂ ರಾಮನನ್ನೇ ಚಿಂತಿಸಬೇಕು. ನಿತ್ಯಸ್ವರೂಪನು. ಚಿದ್ರೂಪನು, ಸರ್ವಸಾಕ್ಷಿಯು, ಎಲ್ಲರಲ್ಲಿಯೂ ಇರುವವನು. ಎಲ್ಲಕ್ಕೂ ಕರ್ತೃವು. ಕಾಪಾಡುವವನು. ನಾಶಮಾಡುವವನು. ಆನಂದಮೂರ್ತಿಯು, ಬಹು ಐಶ್ವರ್ಯವಂತನು, ಈ ಸೀತೆಯ ಸಂಬಂಧವಿರುವುದರಿಂದಲೇ ರಾಮನು ಈ ರೀತಿಯಾಗಿರುವನು. ಇವರಿಬ್ಬರನ್ನೂ ಒಟ್ಟಿಗೆ ಯೋಗಿಗಳು ಸ್ಮರಿಸುತ್ತಾರೆ.

೨೬. ಈ ಸ್ವಾಮಿಯು ಕೈ ಇಲ್ಲದಿದ್ದರೂ ಹಿಡಿಯುವನು. ಕಾಲಿಲ್ಲದಿದ್ದರೂ ಓಡುವನು. ಕಣ್ಣಿಲ್ಲದಿದ್ದರೂ ನೋಡುವನು. ಕಿವಿಯಿಲ್ಲದಿದ್ದರೂ ಕೇಳುವನು. ಅವನು ಪ್ರಪಂಚವೆಲ್ಲವನ್ನೂ ತಿಳಿಯುವನು. ಅವನನ್ನು ತಿಳಿಯಲು ಒಬ್ಬನಿಂದಲೂ ಆಗುವುದಿಲ್ಲ. ಅವನನ್ನು ಎಲ್ಲರಿಗಿಂತಲೂ ಹಳಬನನ್ನಾಗಿಯೂ ಮೊದಲನೆಯವನನ್ನಾಗಿಯೂ ಹೇಳುತ್ತಾರೆ.

ತಯೋಃ ಪರಂ ಜನ್ಮ ಉದಾಹರಿಷ್ಯೇ
ಯಯೋರ್ಯಥಾಕಾರಣ ದೇಹಧಾರಿಣೋಃ ||
ಅರೂಪಿಣೋರೂಪವಿಧಾರಣಂ ಪುನಃ ।
ನೃಣಾಂ ಮಹಾನುಗ್ರಹ ಏವ ಕೇವಲಂ || ೨೭ ||

ಪಠನ್ ದ್ವಿಜೋ ವಾಗೃಷಭತ್ವಮೀಯಾತ್
ಕ್ಷತ್ರಾನ್ವಯೋ ಭೂಮಿಪತಿತ್ವಮಾಯಾತ್ ||
ವಣಿಗ್ಜನಃ ಪಣ್ಯಫಲತ್ವಮಾಯಾತ್
ಶೃಣ್ವನ್ ಹಿ ಶೂದ್ರೋಽಪಿ ಮಹತ್ವಮಾಯಾತ್ || ೨೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ
ಅದ್ಭುತೋತ್ತರಕಾಂಡೇ ಆದಿಕಾವ್ಯೇ
ಪ್ರಥಮಸ್ಸರ್ಗಃ

---

೨೭. ಯಾವುದೋ ಕೆಲಸವನ್ನು ಮಾಡುವ ಕಾರಣದಿಂದ ಜನ್ಮವನ್ನು ಪಡೆದಿರುವ ಆ ಪರಮಾತ್ಮರಾದ ಸೀತಾರಾಮರ ಜನ್ಮವನ್ನು ಹೇಳುತ್ತೇನೆ. ರೂಪವಿಲ್ಲದಿರುವ ಅವರು ರೂಪವನ್ನು ಹೊಂದಿರುವುದು ಮನುಷ್ಯರ ಅನುಗ್ರಹಕ್ಕೋಸ್ಕರವೇ ಆಗಿದೆ.

೨೮. ಇದನ್ನು ಓದಿದರೆ ಬ್ರಾಹ್ಮಣನಾದವನು ತಿಳಿವಳಿಕೆಯನ್ನು ಹೊಂದಿ ಪಂಡಿತನಾಗುತ್ತಾನೆ. ಕ್ಷತ್ರಿಯನಾದವನು ರಾಜ್ಯವನ್ನು ಹೊಂದುತ್ತಾನೆ. ವರ್ತಕನಾದವನು ವ್ಯಾಪಾರದ ಫಲವನ್ನು ಹೊಂದುತ್ತಾನೆ. ಶೂದ್ರನಾದವನು ಗಣ್ಯತೆಯನ್ನು ಹೊಂದುತ್ತಾನೆ.

ಇಂತು ಋಷಿಪ್ರೋಕ್ತವಾದ ಆದಿಕಾವ್ಯವಾದ ವಾಲ್ಮೀಕಿರಾಮಾಯಣದ
ಅದ್ಭುತೋತ್ತರಕಾಂಡದಲ್ಲಿ ಮೊದಲನೆಯ ಸರ್ಗವು
ಮುಗಿದುದು.

ಶ್ರೀಃ

---

# ಅದ್ಭುತ ರಾಮಾಯಣೇ

## ಅಥ ದ್ವಿತೀಯಃ ಸರ್ಗಃ



ಭಾರದ್ವಾಜ ಶೃಣುಷ್ವಾಥ ರಾಮಚಂದ್ರಸ್ಯ ಧೀಮತಃ ॥
ಜನ್ಮನಃ ಕಾರಣಂ ವಿಪ್ರ ಇಕ್ಷ್ವಾಕುಕುಲವಾರಿಧೌ ॥ ೧ ॥

ಸೀತಾಯಾಶ್ಚ ಮಹಾದೇವ್ಯಾಃ ಪೃಥಿವ್ಯಾಂ ಜನ್ಮಹೇತುಕಂ ॥
ತತ್ರ ರಾಮಕಥಾಮಾದೌ ವಕ್ಷ್ಯಾಮಿ ಮುನಿಪುಂಗವ ॥ ೨ ॥

ಶ್ರೂಯತಾಂ ಮುನಿಶಾರ್ದೂಲ ಅಂಬರೀಷ ಕಥಾಲಯಂ ಃ
ಪುರುಷೋತ್ತಮಮಾಹಾತ್ಮ್ಯಂ ಸರ್ವಪಾಪಹರಂ ಪರಂ ॥ ೩ ॥

---

## ಎರಡನೆಯ ಸರ್ಗವು

೧. ಎಲೈ ಭರದ್ವಾಜನೇ ! ಮಹಾಮಹಿಮನಾದ ರಾಮಚಂದ್ರನು ಇಕ್ಷ್ವಾಕುವಿನ ಕುಲದಲ್ಲಿ ಜನ್ಮವನ್ನು ತಾಳಿದ ಬಗೆಯನ್ನು ಹೇಳುತ್ತೇನೆ.

೨. ಮಹಾದೇವಿಯಾದ ಸೀತೆಯು ಜನ್ಮತಾಳಿದುದನ್ನೂ ಹೇಳುತ್ತೇನೆ. ಇವೆರಡರಲ್ಲಿ ಮೊದಲು ರಾಮನ ಕಥೆಯನ್ನು ಹೇಳುತ್ತೇನೆ, ಕೇಳು.

೩. ಎಲೈ ಮುನಿಯೆ ! ಅಂಬರೀಷನ ಕಥೆಯನ್ನು ಕೇಳು. ಅದರಲ್ಲಿ ಈ ರಾಮನ ಮಹಿಮೆಯಿರುವುದು. ಅದು ಸರ್ವಪಾಪಹರವು.

ತ್ರಿಶಂಕೋರ್ದಯಿತಾ ಭಾರ್ಯಾ ಸರ್ವಲಕ್ಷಣಶೋಭಿತಾ ॥
ಅಂಬರೀಷಸ್ಯ ಜನನೀ ನಿತ್ಯಶೌಚ ಸಮನ್ವಿತಾ ॥ ೪ ॥

ಯೋಗನಿದ್ರಾಂ ಸಮಾರೂಢಂ ಶೇಷಪರ್ಯಂಕಶಾಯಿನಂ ॥
ನಾರಾಯಣಂ ಮಹಾತ್ಮಾನಂ ಬ್ರಹ್ಮಾಂಡಕಮಲೋದ್ಭವಂ ॥ ೫ ॥

ತಮಸಾ ಕಾಲರುದ್ರಾಖ್ಯಂ ರಜಸಾ ಕನಕಾಂಡಜಂ ॥
ಸತ್ವೇನ ಸರ್ವಗಂ ವಿಷ್ಣುಂ ಸರ್ವದೇವ ನಮಸ್ಕೃತಂ ॥ ೬ ॥

ಅರ್ಚಯಾಮಾಸ ಸತತಂ ವಾಙ್ಮನಃಕಾಯವೃತ್ತಿಭಿಃ ॥
ಮಾಲ್ಯದಾಮಾದಿಕಂ ಸರ್ವಂ ಸ್ವಯಮೇವ ವ್ಯಚೀಕರತ್ ॥ ೭ ॥

ಗಂಧಾದಿಪೇಷಣಂ ಚೈವ ಧೂಪದ್ರವ್ಯಾದಿಕಂ ತಥಾ ।
ತತ್ಸರ್ವಂ ಕೌತುಕಾವಿಷ್ಟಾ ಸ್ವಯಮೇವ ಚಕಾರ ಸಾ ॥ ೮ ॥

---

೪. ತ್ರಿಶಂಕುವಿಗೆ ಪ್ರೀತಿಪಾತ್ರಳಾದ ಹೆಂಡತಿಯೊಬ್ಬಳಿರುವಳು. ಅವಳು ಎಲ್ಲಾ ಲಕ್ಷಣದಿಂದಲೂ ಕೂಡಿರುವಳು. ಅವಳಿಗೆ ಅಂಬರೀಷನೆಂಬ ಮಗನಾದನು. ಯಾವಾಗಲೂ ಶುಚಿಯಾಗಿರುವಳು.

೫-೭. ಯೋಗನಿದ್ರೆಯನ್ನು ಹೊಂದಿರುವ ಶೇಷನಮೇಲೆ ಮಲಗಿರುವ ಮಹಾತ್ಮನಾದ ಬ್ರಹ್ಮಾಂಡರೂಪವಾದ ಕಮಲವೇ ಹೊಕ್ಕುಳಲ್ಲಿ ಉಳ್ಳ ತಮೋಗುಣದಿಂದ ಕಾಲರುದ್ರನೆಂದೂ ರಜೋಗುಣದಿಂದ ಬ್ರಹ್ಮನೆಂದೂ ಸತ್ವಗುಣದಿಂದ ವಿಷ್ಣುವೆಂದೂ ಹೆಸರನ್ನು ಹೊಂದಿ ಸರ್ವದೇವನಮಸ್ಕೃತನಾದ ನಾರಾಯಣನನ್ನು ಮನೋವಾಕ್ಕಾಯಗಳಿಂದ (ಮನಃ ಪೂರ್ತಿಯಾಗಿ) ಪೂಜಿಸಿದಳು. ಮಾಲೆ ಮುಂತಾದುವುಗಳನ್ನು ತಾನೇ ಅರ್ಪಿಸಿದಳು.

೮. ಗಂಧವೇ ಮುಂತಾದುವನ್ನೂ ಧೂಪ ದೀಪಗಳನ್ನೂ ಪೂಜಾದ್ರವ್ಯಗಳೆಲ್ಲವನ್ನೂ ಬಹು ಆದರದಿಂದ ತಾನೇನೇ ಮಾಡಿ ಅರ್ಪಿಸಿದಳು.

ಶುಭಾ ಪದ್ಮಾವತೀ ನಿತ್ಯಂ ವಚೋ ನಾರಾಯಣೇತಿ ಚ ॥
ಅನಂತೇತಿ ಚ ಸಾ ನಿತ್ಯಂ ಭಾಷಮಾಣಾ ಯತವ್ರತಾ ॥ ೯ ॥

ದಶವರ್ಷಸಹಸ್ರಾಣಿ ತತ್ಪರೇಣಾಂತರಾತ್ಮನಾ ॥
ಅರ್ಚಯಾಮಾಸ ಗೋವಿಂದಂ ಗಂಧಪುಷ್ಪಾದಿಭಿಃ ಶುಭೈಃ ॥ ೧೦ ॥

ವಿಷ್ಣುಭಕ್ತಾನ್ ಮಹಾಭಾಗಾನ್ ಸರ್ವಪಾಪವಿವರ್ಜಿತಾನ್ ॥
ದಾನಮಾನಾರ್ಚನೈರ್ನಿತ್ಯಂ ಧನೈರತ್ನೈರತೋಷಯತ್ ॥ ೧೧ ॥

ತತಃ ಕದಾಚಿತ್ಸಾ ದೇವೀ ದ್ವಾದಶ್ಯಾಂ ಸಮುಪೋಷ್ಯ ವೈ ॥
ಹರೇರಗ್ರೇ ಮಹಾಭಾಗಾ ಸುಷ್ವಾಪ ಪತಿನಾ ಸಹ ॥ ೧೨ ॥

ತತ್ರ ನಾರಾಯಣೋ ದೇವಃ ತಾಮಾಹ ಪುರುಷೋತ್ತಮಃ ॥
ಕಿಮಿಚ್ಛಸಿ ವರಂ ಭದ್ರೇ ಮತ್ತಃ ಕಿಂ ಬ್ರೂಹಿ ಭಾಮಿನಿ ॥ ೧೩ ॥

---

೯. ಆಕೆಯ ಹೆಸರು ಪದ್ಮಾವತಿಯು. ಆಕೆಯು ಯಾವಾಗಲೂ ನಾರಾಯಣ, ಅನಂತ, ಇತ್ಯಾದಿಯಾದ ಸ್ವಾಮಿಯ ಹೆಸರನ್ನೇ ಹೇಳುತ್ತ ಅದನ್ನೇ ಸ್ಮರಿಸುತ್ತಿರುವಳು,

೧೦. ಹತ್ತುಸಾವಿರ ವರ್ಷಗಳವರೆಗೂ ಆ ಸ್ವಾಮಿಯನ್ನೇ ಧ್ಯಾನಿಸುತ್ತ ಗಂಧಪುಷ್ಪಾದಿಗಳಿಂದ ಪೂಜಿಸಿದಳು.

೧೧. ಆಕೆಯು ಅಂತೆಯೇ ಮಹಿಮರಾದ ಪಾಪಿಗಳಲ್ಲದ ವಿಷ್ಣುಭಕ್ತರನ್ನು ದಾನ, ಮಾನ, ಅರ್ಚನೆಗಳಿಂದಲೂ ಧನ, ರತ್ನಗಳಿಂದಲೂ ಸಂತೋಷಪಡಿಸಿದಳು.

೧೨. ಆಕೆಯು ಒಂದು ಸಾರಿ ಏಕಾದಶಿಯ ದಿನ ಉಪವಾಸಮಾಡಿ ದ್ವಾದಶಿಯ ದಿನ ಹರಿಯ ಮುಂಭಾಗದಲ್ಲಿ ಗಂಡನೊಡನೆ ಮಲಗಿದ್ದಳು.

೧೩. ಆಗ ನಾರಾಯಣನು ಪ್ರತ್ಯಕ್ಷನಾಗಿ ಎಲೈ ಭದ್ರೆಯೆ ! ನನ್ನಿಂದ ಯಾವ ವರವನ್ನು ಅಪೇಕ್ಷಿಸುತ್ತೀಯೆ ? ಹೇಳು. ಎಂದು ಕೇಳಿದನು.

ಸಾ ದೃಷ್ಟ್ವಾ ತಂ ವರಂ ವವ್ರೇ ಪುತ್ರಸ್ತ್ವದ್ಭಕ್ತಿರ್ಮಾ ಭವೇತ್ ॥
ಸಾರ್ವಭೌಮೋ ಮಹಾತೇಜಾಃ ಸ್ವಕರ್ಮ ನಿರತಶ್ಶುಚಿಃ ॥ ೧೪ ॥

ತಥೇತ್ಯುಕ್ತ್ವಾ ದದೌ ತಸ್ಯೈ ಫಲಮೇಕಂ ಜನಾರ್ದನಃ ॥
ಸಾ ಪ್ರಬುದ್ಧಾ ಫಲಂ ದೃಷ್ಟ್ವಾ ಭರ್ತ್ರೇ ಸರ್ವಂ ನಿವೇದ್ಯ ಚ ॥ ೧೫ ॥

ಭಕ್ಷಯಾಮಾಸ ಸಂದಶ್ಯ ಫಲಂ ತದ್ಧೃಷ್ಟಮಾನಸಾ ॥
ತತಃ ಕಾಲೇನ ಸಾ ದೇವೀ ಪುತ್ರಂ ಕುಲವಿವರ್ಧನಂ ॥ ೧೬ ॥

ಅಸೂಯತ ಶುಭಾಚಾರಂ ವಾಸುದೇವಪರಾಯಣಂ ॥
ಶುಭಲಕ್ಷಣಸಂಪನ್ನಂ ಚಕ್ರಾಂಕಿತಮನುತ್ತಮಂ ॥ ೧೭ ॥

ಜಾತಂ ದೃಷ್ಟ್ವಾ ಪಿತಾ ಪುತ್ರಂ ಕ್ರಿಯಾಸ್ಸರ್ವಾಶ್ಚಕಾರ ವೈ ॥
ಅಂಬರೀಷ ಇತಿಖ್ಯಾತೋ ಲೋಕೇ ಸಮಭವತ್ಪ್ರಭುಃ ॥ ೧೮ ॥

೧೪. ಆಕೆಯು ಪ್ರತ್ಯಕ್ಷನಾದ ಆ ಸ್ವಾಮಿಯನ್ನು ನೋಡಿ ನನಗೆ ನಿನ್ನಲ್ಲಿ ಭಕ್ತಯಿರುವ ಮಗನೂ ಚಕ್ರವರ್ತಿಯೂ ಬಹುತೇಜಸ್ವಿಯೂ ವರ್ಣಾಶ್ರಮ ಧರ್ಮದಲ್ಲಿ ಆಸಕ್ತನೂ ಶುಚಿಯೂ ಆದ ಮಗನಾಗಬೇಕೆಂದು ವರವನ್ನು ಕೇಳಿಕೊಂಡಳು.

೧೫-೧೭. ಹಾಗೇ ಆಗಲೆಂದು ಹೇಳಿ ಆ ಸ್ವಾಮಿಯು ಒಂದು ಹಣ್ಣನ್ನು ಕೊಟ್ಟನು. ಆಕೆಯು ಎಚ್ಚರಗೊಂಡು ಆ ಹಣ್ಣನ್ನು ನೋಡಿ ಗಂಡನಿಗೆ ನಡೆದುದೆಲ್ಲವನ್ನೂ ತಿಳಿಸಿದಳು. ಅನಂತರ ಆ ಹಣ್ಣನ್ನು ಕಚ್ಚಿಕೊಂಡು ಸಂತೋಷದಿಂದ ತಿಂದಳು. ಅನಂತರ ಗರ್ಭಿಣಿಯಾಗಿ ಕೊಂಚಕಾಲದಮೇಲೆ ಕುಲೋದ್ಧಾರಕನಾದ ಗಂಡುಮಗನನ್ನು ಹೆತ್ತಳು. ಅವನು ವಾಸುದೇವನಲ್ಲಿಯೇ ಆಸಕ್ತನಾಗಿದ್ದನು. ಶುಭವಾದ ಲಕ್ಷಣಗಳಿಂದ ಕೂಡಿದ್ದನು. ಚಕ್ರಾಂಕಿತನಾಗಿದ್ದನು.

೧೮. ತಂದೆಯು ಆ ಗಂಡುಮಗು ಹುಟ್ಟಿದುದನ್ನು ನೋಡಿ ಸಂತೋಷಪಟ್ಟು ಜಾತಕರ್ಮ ನಾಮಕರಣ ಮುಂತಾದ ಸಂಸ್ಕಾರಗಳನ್ನೆಲ್ಲಾ ಮಾಡಿದನು. ಅಂಬರೀಷನೆಂದು ಹೆಸರಿಡಲು ಆ ಹೆಸರಿನಿಂದಲೇ ಪ್ರಪಂಚದಲ್ಲೆಲ್ಲಾ ಪ್ರಖ್ಯಾತನಾದನು.

ಪಿತರ್ಯುಪರತೇ ಶ್ರೀಮಾನಭಿಷಿಕ್ತೋ ಮಹಾತ್ಮಭಿಃ ||
ಮಂತ್ರಿಷ್ವಾಧಾಯ ರಾಜ್ಯಂ ಚ ತಪ ಉಗ್ರಂ ಚಕಾರ ಸಃ || ೧೯ ||

ಸಂವತ್ಸರಸಹಸ್ರಂ ವೈ ಜಪನ್ನಾರಾಯಣಂ ಪ್ರಭುಂ ||
ಹೃತ್ಪುಂಡರೀಕಮಧ್ಯಸ್ಥಂ ಸೂರ್ಯಮಂಡಲಮಧ್ಯಗಂ || ೨೦ ||

ಶಂಖಚಕ್ರಗದಾಪದ್ಮಂ ಧಾರಯಂತಂ ಚತುರ್ಭುಜಂ ||
ಶುದ್ಧ ಜಾಂಬೂನದನಿಭಂ ಬ್ರಹ್ಮವಿಷ್ಣು ಶಿವಾತ್ಮಕಂ || ೨೧ ||

ಸರ್ವಾಭರಣಸಂಯುಕ್ತಂ ಪೀತಾಂಬರಧರಂ ಪ್ರಭುಂ ||
ಶ್ರೀವತ್ಸವಕ್ಷಸಂ ದೇವಂ ಪುರುಷಂ ಪುರುಷೋತ್ತಮಂ || ೨೨ ||

ತತೋ ಗರುಡಮಾರುಹ್ಯ ಸರ್ವದೇವೈರಭಿಷ್ಟುತಃ ||
ಆಜಗಾಮ ಸ ವಿಶ್ವಾತ್ಮಾ ಸರ್ವಲೋಕ ನಮಸ್ಕೃತಃ || ೨೩ ||

---

೧೯. ತಂದೆಯು ಸತ್ತುಹೋಗುತ್ತಲೂ ಆ ಅಂಬರೀಷನಿಗೆ ಮಂತ್ರಿಗಳು ಪಟ್ಟಾಭಿಷೇಕಮಾಡಿದರು. ಅನಂತರ ಆ ರಾಜ್ಯವನ್ನು ಮಂತ್ರಿಗಳಿಗೆ ವಹಿಸಿ ಉಗ್ರವಾದ ತಪಸ್ಸನ್ನು ಮಾಡಿದನು.

೨೦-೨೨. ಹೃದಯವೆಂಬ ಕಮಲದ ಮಧ್ಯದಲ್ಲಿರುವ ಸೂರ್ಯಮಂಡಲದ ಮಧ್ಯದಲ್ಲಿಯೂ ಇರುವ ಶಂಖ ಚಕ್ರ ಗದೆ ಪದ್ಮಗಳನ್ನು ಧರಿಸಿರುವ ನಾಲ್ಕು ತೋಳಗಳುಳ್ಳ ಪುಟವಿಕ್ಕಿದ ಚಿನ್ನದಂತೆ ಬಣ್ಣವುಳ್ಳ ಬ್ರಹ್ಮ ವಿಷ್ಣು ಶಿವಾತ್ಮಕನಾದ ಎಲ್ಲಾ ಒಡವೆಗಳನ್ನೂ ತೊಟ್ಟಿರುವ ಪೀತಾಂಬರಧಾರಿಯಾದ ಶ್ರೀವತ್ಸವೆಂಬ ಮಚ್ಚೆಯನ್ನು ಎದೆಯಮೇಲೆ ಹೊಂದಿರುವ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಕುರಿತು ಸಾವಿರ ವರ್ಷಗಳವರೆಗೂ ತಪಸ್ಸನ್ನು ಮಾಡಿದನು.

೨೩. ಆಗ ಆ ನಾರಾಯಣನು ಗರುಡನ ಮೇಲೆ ಕುಳಿತುಕೊಂಡು ಎಲ್ಲಾ ದೇವತೆಗಳಿಂದಲೂ ಹೊಗಳಿಸಿಕೊಳ್ಳುತ್ತಾ ಎಲ್ಲರಿಂದಲೂ ನಮಸ್ಕಾರವನ್ನು ಹೊಂದುತ್ತಾ ಬಂದನು.

ಐರಾವತಮಿವಾಚಿಂತ್ಯಂ ಕೃತ್ವಾ ವೈ ಗರುಡಂ ಹರಿಃ ॥
ಸ್ವಯಂ ಶಕ್ರ ಇವಾಸೀನಸ್ತನಾಹ ನೃಪಸತ್ತಮಂ ॥ ೨೪ ॥

ಇಂದ್ರೋಽಹಮಸ್ಮಿ ಭದ್ರಂ ತೇ ಕಿಂ ದದಾಮಿ ತವಾದ್ಯ ವೈ ॥
ಸರ್ವಲೋಕೇಶ್ವರೋಽಹಂ ತ್ವಾಂ ರಕ್ಷಿತುಂ ಸಮುಪಾಗತಃ ॥ ೨೫ ॥

ಅಂಬರೀಷಸ್ತು ತಂ ದೃಷ್ಟ್ವಾ ಶಕ್ರಮೈರಾವತಸ್ಥಿತಂ ॥
ಉವಾಚ ವಚನಂ ಧೀಮಾರ್ನ್ ವಿಷ್ಣುಭಕ್ತಿಪರಾಯಣಃ ॥ ೨೬ ॥

ನಾಹಂ ತ್ವಾಮಭಿಸಂಧಾಯ ತಪ ಆಸ್ಥಿತವಾನಿಹ ॥
ತ್ವಯಾ ದತ್ತಂ ಚ ನೇಚ್ಛಾಮಿ ಗಚ್ಛ ಶಕ್ರ ಯಥಾಸುಖಂ ॥ ೨೭ ॥

ಮಮ ನಾರಾಯಣೋ ನಾಥಃ ತ್ವಾಂ ನ ಸ್ತೋಷ್ಯೇಽಮರಾಧಿಪ ॥
ವ್ರಜೇಂದ್ರ ಮಾ ಕೃಥಾಸ್ತ್ವತ್ರ ಮಮಾಶ್ರಮವಿಲೋಪನಂ ॥ ೨೮ ॥

---

೨೪. ಆ ಗರುಡನನ್ನು ಐರಾವತದಂತೆ ಮಾಡಿ ತಾನು ಇಂದ್ರನಂತೆ ವೇಷವನ್ನು ಧರಿಸಿ ಆ ಆನೆಯಮೇಲೆ ಕುಳಿತುಕೊಂಡು ಆ ಹರಿಯು ಆ ರಾಜನ ಬಳಿಗೆ ಬಂದನು.

೨೫. ಎಲೈ ರಾಜನೇ! ನಿನಗೆ ಮಂಗಳವಾಗಲಿ. ನಾನು ಇಂದ್ರನು. ನಿನಗೆ ಏನು ಬೇಕು? ಹೇಳು, ಕೊಡುತ್ತೇನೆ. ಸರ್ವಲೋಕೇಶ್ವರನಾದ ನಾನು, ನಿನ್ನನ್ನು ವರಕೊಟ್ಟು ರಕ್ಷಿಸಲು ಬಂದಿದ್ದೇನೆ.

೨೬. ಅಂಬರೀಷನು ಐರಾವತದ ಮೇಲಿರುವ ಇಂದ್ರನನ್ನು ನೋಡಿ ವಿಷ್ಣುವಿನಲ್ಲಿ ಭಕ್ತಿಯುಳ್ಳವನಾದುದರಿಂದ ಇಂತೆಂದನು.

೨೭. ಎಲೈ ಇಂದ್ರನೇ! ನಾನು ನಿನ್ನನ್ನು ಕುರಿತು ತಪಸ್ಸನ್ನು ಮಾಡಲಿಲ್ಲ. ನೀನು ಕೊಡತಕ್ಕ ವರಗಳೂ ನನಗೆ ಬೇಕಿಲ್ಲ. ನೀನು ಬಂದಂತೆ ಸುಖವಾಗಿ ಹೊರಟುಹೋಗು.

೨೮. ಎಲೈ ಇಂದ್ರನೇ! ನನಗೆ ನಾರಾಯಣನೇ ಸ್ವಾಮಿಯು. ಅವನನ್ನು ಸ್ತುತಿಸುವೆನೇ ಹೊರತು ನೀನು ಅಮರಾಧಿಪನಾದರೂ ನಿನ್ನನ್ನು ಸ್ತುತಿಸುವುದಿಲ್ಲ. ನೀನು ಹೊರಟುಹೋಗು. ನನಗೆ ನನ್ನ ಆಶ್ರಮದಲ್ಲಿ ಕೆಡಕುಮಾಡಿ ತೊಂದರೆಯನ್ನು ಕೊಡಬೇಡ.

ತತಃ ಪ್ರಹಸ್ಯ ಭಗವಾನ್ ಸ್ವರೂಪಮಕರೋದ್ಧರಿಃ ||
ಶಾರ್ಙ್ಗಚಕ್ರ ಗದಾಪಾಣಿಃ ಶಂಖಹಸ್ತೋ ಜನಾರ್ದನಃ || ೨೯ ||

ಗರುಡೋಪರಿ ವಿಶ್ವಾತ್ಮಾ ನೀಲಾಚಲ ಇವಾಪರಃ ||
ದೇವಗಂಧರ್ವಸಂಘೈಶ್ಚ ಸ್ತೂಯಮಾನಃ ಸಮಂತತಃ || ೩೦ ||

ಪ್ರಣಮ್ಯ ರಾಜಾ ಸಂತುಷ್ಟಃ ತುಷ್ಟಾವ ಗರುಡಧ್ವಜಂ ||
ಪ್ರಸೀದ ಲೋಕನಾಥಸ್ತ್ವಂ ಮಮ ನಾಥ ಜನಾರ್ದನ || ೩೧ ||

ಕೃಷ್ಣ ಕೃಷ್ಣ ಜಗನ್ನಾಥ ಸರ್ವಲೋಕನಮಸ್ಕೃತ ||
ತ್ವಮಾದಿಸ್ತ್ವಮನಾದಿಸ್ತ್ವಮನಂತಃ ಪುರುಷಃ ಪ್ರಭುಃ || ೩೨ ||

ಅಪ್ರಮೇಯೋ ವಿಭುರ್ವಿಷ್ಣುಃ ಗೋವಿಂದಃ ಕಮಲೇಕ್ಷಣಃ ||
ಮಹೇಶ್ವರಾಂಶಜೋ ಮಧ್ಯಃ ಪುಷ್ಕರಃ ಖಗಮಃ ಖಗಃ || ೩೩ ||

೨೯. ಆಗ ಆ ನಾರಾಯಣನು ನಗುತ್ತಾ ತನ್ನ ಸ್ವರೂಪವನ್ನು ತೋರಿಸಿದನು. ಶಾರ್ಙ್ಗ ಚಕ್ರ ಗದೆ ಶಂಖಗಳನ್ನು ಕೈಯ್ಯಲ್ಲಿ ಧರಿಸಿದ್ದನು.

೩೦. ಗರುಡನ ಮೇಲೆ ಕುಳಿತಿದ್ದನು. ನೀಲಪರ್ವತದಂತಿದ್ದನು. ಸುತ್ತಲೂ ದೇವತೆಗಳೂ ಗಂಧರ್ವರೂ ಹೊಗಳುತ್ತಿದ್ದರು.

೩೧. ಆಗ ಆ ರಾಜನು ಸಂತೋಷಪಟ್ಟು ನಮಸ್ಕರಿಸಿ ಆ ಸ್ವಾಮಿಯನ್ನು ಸ್ತುತಿಸಿದನು. ಲೋಕನಾಥನೆ! ಪ್ರಸನ್ನನಾಗು. ಎಲೈ ಜನಾರ್ದನನೇ ! ನೀನು ನನಗೆ ಒಡೆಯನು.

೩೨. ಕೃಷ್ಣ! ಕೃಷ್ಣ! ಜಗನ್ನಾಥ! ಸರ್ವಲೋಕನಮಸ್ಕೃತ! ನೀನೇ ಎಲ್ಲಕ್ಕೂ ಆದಿಯು. ನಿನಗೆ ಆದಿಯು ಯಾವುದೂ ಇಲ್ಲವು. ನಿನಗೆ ಕೊನೆಯೆಂಬುದೇ ಇಲ್ಲ. ನೀನೇ ಪುರುಷನು. ಮತ್ತು ಪ್ರಭುವು.

೩೩. ನಿನ್ನನ್ನು ಇಂಥವನೆಂದು ಗೊತ್ತುಮಾಡುವುದಕ್ಕೇ ಆಗದವನು. ವ್ಯಾಪಕನು, ನೀನೇ ವಿಷ್ಣುವು, ನೀನೇ ಗೋವಿಂದನು. ಕಮಲದಂತೆ ಕಣ್ಣುಳ್ಳವನು. ಮಹೇಶ್ವರನ ಅಂಶದಿಂದ ಉತ್ಪನ್ನನೂ ಆಗಿದ್ದೀಯೆ. ತ್ರಿಮೂರ್ತಿಗಳಲ್ಲಿ ಮಧ್ಯದವನಾದ ವಿಷ್ಣುವು. ನೀನೇ ಆಕಾಶಸ್ವರೂಪನು. ಆಕಾಶದಲ್ಲಿ ಹೋಗಲು ಶಕ್ತಿಯುಳ್ಳವನು. ಸೂರ್ಯನೂ ಆಗಿದ್ದೀಯೆ.

ಕವ್ಯವಾಹಃ ಕಪಾಲೀ ತ್ವಂ ಹವ್ಯವಾಹಃ ಪ್ರಭಂಜನಃ ||
ಆದಿದೇವಃ ಕ್ರಿಯಾನಂದಃ ಪರಮಾತ್ಮನಿ ಸಂಸ್ಥಿತಃ || ೩೪ ||

ತ್ವಾಂ ಪ್ರಪನ್ನೋಽಸ್ಮಿ ಗೋವಿಂದ ಪಾಹಿ ಮಾಂ ಪುಷ್ಕರೇಕ್ಷಣ ||
ನಾನ್ಯಾಗತಿಸ್ತ್ವದನ್ಯಾ ಮೇ ತ್ವಾಮೇವ ಶರಣಂ ಗತಃ || ೩೫ ||

ತಮಾಹ ಭಗವಾನ್ ವಿಷ್ಣುಃ ಕಿಂ ತೇ ಹೃದಿ ಚಿಕೀರ್ಷಿತಂ ||
ತತ್ಸರ್ವಂ ಸಂಪ್ರದಾಸ್ಯಾಮಿ ಭಕ್ತೋಽಸಿ ಮಮ ಸುವ್ರತ || ೩೬ ||

ಭಕ್ತಪ್ರಿಯೋಽಸ್ಮಿ ಸತತಂ ತಸ್ಮಾದ್ದಾತುಮಿಹಾಗತಃ ||
ಅಂಬರೀಷಸ್ತು ತಚ್ಛ್ರುತ್ವಾ ಹರ್ಷಗದ್ಗದಯಾ ಗಿರಾ || ೩೭ ||

ಪ್ರೋವಾಚ ಪರಮಾತ್ಮಾನಂ ನಾರಾಯಣಮನಾಮಯಂ ||
ತ್ವಯಿ ವಿಷ್ಣೌ ಪರಾನಂದೇ ನಿತ್ಯಂ ಮೇ ವರ್ತತಾಂ ಮತಿಃ || ೩೮ ||

೩೪. ನೀನೇ ಪಿತೃಗಳಿಗೆ ಆಹಾರವನ್ನು ತೆಗೆದುಕೊಂಡು ಹೋಗುವವನು. ಕಪಾಲವನ್ನು ಕೈಯ್ಯಲ್ಲಿ ಹಿಡಿದಿರುವ ಈಶ್ವರನು. ದೇವತೆಗಳಿಗೂ ಆಹಾರವನ್ನು ತೆಗೆದುಕೊಂಡು ಹೋಗತಕ್ಕವನು. ವಾಯುಸ್ವರೂಪನು. ಆದಿಯ ದೇವತೆಯು. ಕ್ರಿಯೆಯಿಂದ ಆನಂದವನ್ನು ಹೊಂದುತ್ತೀಯೆ. ಪರಮಾತ್ಮನಲ್ಲಿ ನೀನು ಯಾವಾಗಲೂ ಇರುತ್ತೀಯೆ.

೩೫. ಎಲೈ ಗೋವಿಂದನೇ! ನಿನ್ನನ್ನೇ ಮರೆಹೊಕ್ಕಿದ್ದೇನೆ. ಕಮಲಾಕ್ಷನೇ ನನ್ನನ್ನು ಕಾಪಾಡು. ನನಗೆ ನಿನ್ನನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲವು. ನಿನ್ನನ್ನೇ ಶರಣು ಹೊಕ್ಕಿದ್ದೇನೆ.

೩೬. ಆಗ ವಿಷ್ಣುವು ಎಲೈ ಅಂಬರೀಷನೇ ! ನಿನ್ನ ಮನಸ್ಸಿನಲ್ಲಿ ಏನಿದೆ? ಅವೆಲ್ಲವನ್ನೂ ಕೊಡುತ್ತೇನೆ. ನೀನು ನನಗೆ ಭಕ್ತನಾಗಿದ್ದೀಯೆ.

೩೭-೩೮. ನಾನು ಯಾವಾಗಲೂ ಭಕ್ತರಲ್ಲಿ ಪ್ರೀತಿಯುಳ್ಳವನು. ಆದ್ದರಿಂದ ನಿನಗೆ ಬೇಕಾದುದನ್ನು ಕೊಡಲು ಬಂದಿದ್ದೇನೆ ಎಂದನು. ಆಗ ಅಂಬರೀಷನು ಅದನ್ನು ಕೇಳಿ ಹರ್ಷದಿಂದ ತೊದಲು ತೊದಲು ಮಾತನ್ನು ಆಡುತ್ತ ಆ ಪರಮಾತ್ಮನಾದ ನಾರಾಯಣನನ್ನು ಕುರಿತು ಇಂತೆಂದನು. ಆನಂದ ಸ್ವರೂಪನಾದ ವಿಷ್ಣುವಾದ ನಿನ್ನಲ್ಲಿಯೇ ನನಗೆ ಮನಸ್ಸು ಯಾವಾಗಲೂ ಇರಲಿ.

ಭವೇಯಂ ತ್ವತ್ಪರೋ ನಿತ್ಯಂ ವಾಙ್ಮನಃಕಾಯಕರ್ಮಭಿಃ ||
ಪಾಲಯಿಷ್ಯಾಮಿ ಪೃಥಿವೀಂ ಕೃತ್ವಾ ವೈ ವೈಷ್ಣವಂ ಜಗತ್ || ೩೯ ||

ಯಜ್ಞಹೋಮಾರ್ಚನೈಶ್ಚೈವ ತರ್ಪಿಷ್ಯಾಮಿ ಸುರೋತ್ತಮಾನ್ ||
ವೈಷ್ಣವಾನ್ ಪಾಲಯಿಷ್ಯಾಮಿ ಹನಿಷ್ಯಾಮಿ ಚ ಶಾತ್ರವಾನ್ || ೪೦ ||

ಏವಮುಕ್ತಸ್ತು ಭಗವಾನ್ ಪ್ರತ್ಯುವಾಚ ನೃಪೋತ್ತಮಂ ||
ಏವಮಸ್ತು ತವೇಚ್ಛಾ ವೈ ಚಕ್ರಮೇತತ್ಸುದರ್ಶನಂ || ೪೧ ||

ಪುರಾ ರುದ್ರಪ್ರಭಾವೇನ ಲಬ್ಧಂ ವೈ ದುರ್ಲಭಂ ಮಯಾ ||
ಋಷಿಶಾಪಾದಿಕಂ ದುಃಖಂ ಶತ್ರುರೋಗಾದಿಕಂ ತಥಾ || ೪೨ ||

ನಿಹನಿಷ್ಯತಿ ತೇ ದುಃಖಮಿತ್ಯುಕ್ತ್ವಾಂತರಧೀಯತ ||
ತತಃ ಪ್ರಣಮ್ಯ ಮುದಿತೋ ರಾಜಾ ನಾರಾಯಣಂ ಪ್ರಭುಂ || ೪೩ ||

೩೯. ಮನೋವಾಕ್ಕಾಯಗಳಿಂದ ಯಾವಾಗಲೂ ನಿನ್ನಲ್ಲಿಯೇ ಆಸಕ್ತನಾಗಿ ರಬೇಕು. ಪ್ರಪಂಚವೆಲ್ಲವನ್ನೂ ವಿಷ್ಣುಭಕ್ತರನ್ನಾಗಿ ಮಾಡಿ ಅಂತೆ ಭೂಮಿಯನ್ನು ನಾನು ಆಳಬೇಕು.

೪೦. ಯಜ್ಞ, ಹೋಮ, ಅರ್ಚನೆಗಳಿಂದ ದೇವತೆಗಳನ್ನು ತೃಪ್ತಿಪಡಿಸಬೇಕು. ವೈಷ್ಣವರನ್ನ ಕಾಪಾಡಬೇಕು. ಶತ್ರುಗಳನ್ನು ನಿಗ್ರಹಿಸಬೇಕು.

೪೧–೪೨. ಹೀಗೆಂದು ಆ ಅಂಬರೀಷನು ಹೇಳಲು ಸ್ವಾಮಿಯು ಆತನನ್ನು ಕುರಿತು ಇಂತೆಂದನು. ಹಾಗೆಯೇ ಆಗಲಿ. ನಿನ್ನ ಇಚ್ಛೆಯು ನೆರವೇರಲಿ. ಈ ಸುದರ್ಶನ ಚಕ್ರವನ್ನು ಪೂರ್ವದಲ್ಲಿ ರುದ್ರನ ಮಹಿಮೆಯಿಂದ ನಾನು ಹೊಂದಿದೆನು. ಇದು ದುರ್ಲಭವಾದುದು. ಇದು ನಿನ್ನ ಋಷಿಶಾಪವೇ ಮುಂತಾದ ದುಃಖಗಳನ್ನೂ ಶತ್ರುದುಃಖವನ್ನೂ ರೋಗದಭಯವನ್ನೂ ಎಲ್ಲಾ ತರಹದ ದುಃಖಗಳನ್ನೂ ನಾಶ ಮಾಡುತ್ತದೆ. ಎಂದು ಹೇಳಿ ಅದನ್ನು ಕೊಟ್ಟು ಹೊರಟುಹೋದನು.

೪೩–೪೪. ಆಗ ಈ ಅಂಬರೀಷನು ನಾರಾಯಣನಿಗೆ ನಮಸ್ಕರಿಸಿ ಸಂತೋಷ

**ಪ್ರವಿಶ್ಯ ನಗರೀಂ ದಿವ್ಯಾಮಯೋಧ್ಯಾಂ ಪರ್ಯಪಾಲಯತ್ ॥**
**ಬ್ರಾಹ್ಮಣಾದೀನ್ ತಥಾ ವರ್ಣಾನ್ ಸ್ವೇ ಸ್ವೇ ಕರ್ಮಣ್ಯಯೋಜಯತ್॥೪೪॥**

**ನಾರಾಯಣಪರೋ ನಿತ್ಯಂ ವಿಷ್ಣುಭಕ್ತಾನಕಲ್ಮಷಾನ್ ॥**
**ಪಾಲಯಾಮಾಸ ಹೃಷ್ಟಾತ್ಮಾ ವಿಶೇಷೇಣ ಜನಾಧಿಪಃ ॥ ೪೫ ॥**

**ಅಶ್ವಮೇಧಶತೈರಿಷ್ಟ್ವಾ ವಾಜಪೇಯ ಶತಾನಿ ಚ ॥**
**ಪಾಲಯಾಮಾಸ ಪೃಥಿವೀಂ ಸಾಗರಾವರಣಾಮಿಮಾಂ ॥ ೪೬ ॥**

**ಗೃಹೇ ಗೃಹೇ ಹರಿಸ್ತಸ್ಥೌ ವೇದಘೋಷೋ ಗೃಹೇ ಗೃಹೇ ॥**
**ನಾಮಘೋಷೋ ಹರೇಶ್ಚೈವ ಯಜ್ಞಘೋಷಸ್ತಥೈವ ಚ ॥ ೪೭ ॥**

**ಅಭವನ್ ನೃಪಶಾರ್ದೂಲೇ ತಸ್ಮಿನ್ ರಾಜ್ಯಂ ಪ್ರಶಾಸತಿ ॥**
**ನಾಸಸ್ಯಾ ನಾತೃಣಾ ಭೂಮಿಃ ನ ದುರ್ಭಿಕ್ಷಾದಿಭಿರ್ಯುತಾ ॥ ೪೮ ॥**

---

ಗೊಂಡು ಅಯೋಧ್ಯೆಗೆ ಬಂದು ರಾಜ್ಯಭಾರವನ್ನು ಕೈಗೊಂಡನು. ಬ್ರಾಹ್ಮಣರೇ ಮುಂತಾದ ವರ್ಣಗಳು ಅವರವರ ಧರ್ಮದಲ್ಲಿರುವಂತೆ ಮಾಡಿದನು.

೪೫. ಆ ಅಂಬರೀಷನು ನಾರಾಯಣನನ್ನು ಧ್ಯಾನಮಾಡುತ್ತ ರಾಜ್ಯಭಾರವನ್ನು ಚೆನ್ನಾಗಿ ಮಾಡುತ್ತ ಪುಣ್ಯವಂತರಾದ ವಿಷ್ಣುಭಕ್ತರನ್ನು ಅತಿಶಯವಾಗಿ ಪೂಜಿಸುತ್ತಾ ಬಂದನು.

೪೬. ಹೀಗೆ ರಾಜ್ಯಭಾರವನ್ನು ಮಾಡುತ್ತ ನೂರು ಅಶ್ವಮೇಧಯಾಗಗಳನ್ನೂ ನೂರು ವಾಜಪೇಯ ಯಾಗಗಳನ್ನೂ ಮಾಡಿದನು.

೪೭–೪೮. ಆ ಅಂಬರೀಷನು ರಾಜ್ಯವಾಳುತ್ತಿರಲು ಮನೆಮನೆಯಲ್ಲಿಯೂ ಹರಿಯು ಇರುತ್ತಿದ್ದನು. ಮನೆಮನೆಯಲ್ಲಿಯೂ ವೇದಘೋಷವಾಗುತ್ತಲಿದ್ದಿತು. ಮನೆಮನೆಯಲ್ಲಿಯೂ ಹರಿನಾಮಸ್ಮರಣೆಯಾಗುತ್ತಿದ್ದಿತು. ಮನೆಮನೆಯಲ್ಲಿಯೂ ಯಜ್ಞದ ಮಾತೇ ನಡೆಯುತ್ತಿದ್ದಿತು. ಆಗ ಭೂಮಿಯು ಆಹಾರಾದಿಗಳನ್ನು ಕೊಡುವ ಸಸ್ಯಗಳಿಂದಲೂ ಗೋವುಗಳಿಗೆ ಬೇಕಾದ ತೃಣಗಳಿಂದಲೂ ಬಹುವಾಗಿ ಕೂಡಿಕೊಂಡಿದ್ದಿತು. ದುರ್ಭಿಕ್ಷವೆಂಬುದು ಇರಲಿಲ್ಲ.

**ರೋಗಹೀನಾ ಪ್ರಜಾ ನಿತ್ಯಂ ಸರ್ವೋಪದ್ರವವರ್ಜಿತಾ ॥**
**ಅಂಬರೀಷೋ ಮಹಾತೇಜಾಃ ಪಾಲಯಾಮಾಸ ಮೇದಿನೀಂ ॥ ೪೯ ॥**

**ಸ ವೈ ಮಹಾತ್ಮಾ ಸತತಂ ಚ ರಕ್ಷಿತಃ**
**ಸುದರ್ಶನೇನಾತಿ ಸುದರ್ಶನೇನ ॥**
**ಶುಭಾಂ ಸಮುದ್ರಾವಧಿಸಂತತಾಂ ಮಹೀಂ**
**ಸುಪಾಲಯಾಮಾಸ ಮಹೀಮಹೇಂದ್ರಃ ॥ ೫೦ ॥**

**ಇತ್ಯಾರ್ಷೇ ಶ್ರೀ ರಾಮಾಯಣೇ ವಾಲ್ಮೀಕೀಯೇ ಅದ್ಭುತೋತ್ತರಕಾಂಡೇ ಅಂಬರೀಷವರಪ್ರದಾನೋ ನಾಮ ದ್ವಿತೀಯಸ್ಸರ್ಗಃ**

---

೪೯. ಪ್ರಜೆಗಳು ರೋಗವಿಲ್ಲದೆಯೂ ಮತ್ತೆ ಯಾವ ವಿಧವಾದ ತೊಂದರೆಯೂ ಇಲ್ಲದಿದ್ದರು. ಈ ರೀತಿಯಾಗಿ ಅಂಬರೀಷನು ರಾಜ್ಯಭಾರವನ್ನು ಮಾಡುತ್ತಿದ್ದನು.

೫೦. ಬಹುವಾದ ಶಕ್ತಿಯೂ ಕಾಂತಿಯೂ ಉಳ್ಳ ಆ ಸುದರ್ಶನ ಚಕ್ರದಿಂದ ಅಂಬರೀಷನು ರಕ್ಷಿತನಾಗಿ ಸಮುದ್ರಮೇಖಲೆಯಾದ ಭೂಮಿಯನ್ನೆಲ್ಲಾ ಸುಖವಾಗಿ ಕಾಪಾಡುತ್ತಿದ್ದನು.

ಇಂತು ವಾಲ್ಮೀಕಿ ಋಷಿಯಿಂದ ವಿರಚಿತವಾದ ಶ್ರೀರಾಮಾಯಣದ
ಅದ್ಭುತ ಉತ್ತರಕಾಂಡದಲ್ಲಿ ಅಂಬರೀಷವರಪ್ರದಾನ ಎಂಬ
ಎರಡನೆಯ ಸರ್ಗವು ಮುಗಿದುದು.

---

ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ತೃತೀಯಃ ಸರ್ಗಃ



ತಸ್ಯೈವಂ ವರ್ತಮಾನಸ್ಯ ಕನ್ಯಾ ಕಮಲಲೋಚನಾ ।
ಶ್ರೀಮತೀ ನಾಮ ವಿಖ್ಯಾತಾ ಸರ್ವಲಕ್ಷಣಶೋಭಿತಾ ॥ ೧ ॥

ತಸ್ಮಿನ್ ಕಾಲೇ ಮುನಿಶ್ರೇಷ್ಠೋ ನಾರದೋಽಭ್ಯಾಗತೋ ಗೃಹಂ ।
ಅಂಬರೀಷಸ್ಯ ರಾಜ್ಞೋ ವೈ ಪರ್ವತಶ್ಚ ಮಹಾದ್ಯುತಿಃ ॥ ೨ ॥

## ಮೂರನೆಯ ಸರ್ಗವು

೧. ಈ ರೀತಿಯಾಗಿ ಅಂಬರೀಷನು ರಾಜ್ಯಭಾರಮಾಡುತ್ತ ವಿಷ್ಣುಭಕ್ತನಾಗಿರಲು ಅವನಿಗೆ ಕಮಲದಂತೆ ಕಣ್ಣುಗಳುಳ್ಳ, ಸಮಸ್ತಲಕ್ಷಣಗಳಿಂದಲೂ ಕೂಡಿದ ಶ್ರೀಮತಿಯೆಂಬ ಒಬ್ಬಳು ಮಗಳಾದಳು.

೨. ಆ ಕಾಲದಲ್ಲಿ ಮಹಾತೇಜಸ್ವಿಗಳಾದ ನಾರದನೂ ಪರ್ವತನೂ ಅಂಬರೀಷನ ಮನೆಗೆ ಬರಲು ಅವರನ್ನು ನೋಡಿ ಅಂಬರೀಷನು ಅವರಿಗೆ ನಮಸ್ಕರಿಸಿ ಶಾಸ್ತ್ರರೀತಿಯಾಗಿ ಮಧುಪರ್ಕವನ್ನು ಕೊಟ್ಟು ವಿಶ್ವಾಸದಿಂದ ಪೂಜಿಸಿದನು.

ತಾವ್ರಭಾವಾಗತೌ ದೃಷ್ಟ್ವಾ ಪ್ರಣಿಪತ್ಯ ಯಥಾವಿಧಿ ।
ಅಂಬರೀಷೋ ಮಹಾತೇಜಾಃ ಪೂಜಯಾಮಾಸ ತೌ ನೃಪಃ ॥ ೩ ॥

ಕನ್ಯಾಂ ತು ಪ್ರೇಕ್ಷ್ಯ ಭಗವಾನ್ ನಾರದಃ ಪ್ರಾಹ ವಿಸ್ಮಿತಃ ।
ಕೇಯಂ ರಾಜನ್ ಮಹಾಭಾಗಾ ಕನ್ಯಾ ಸುರಸುತೋಪಮಾ ॥ ೪ ॥

ಬ್ರೂಹಿ ಧರ್ಮಭೃತಾಂ ಶ್ರೇಷ್ಠ ಸರ್ವಲಕ್ಷಣಶೋಭಿತಾ ।
ನಿಶಮ್ಯ ವಚನಂ ತಸ್ಯ ರಾಜಾ ಪ್ರಾಹ ಕೃತಾಂಜಲಿಃ ॥ ೫ ॥

ದುಹಿತೇಯಂ ಮಮ ವಿಭೋ ಶ್ರೀಮತೀ ನಾಮ ನಾಮತಃ ।
ಪ್ರದಾನಸಮಯಂ ಪ್ರಾಪ್ತಾ ವರಮನ್ವೇಷತೀ ಶುಭಾ ॥ ೬ ॥

ಇತ್ಯುಕ್ತೋ ಮುನಿಶಾರ್ದೂಲಃ ತಾಮೈಚ್ಛನ್ನಾರದೋ ದ್ವಿಜಃ ।
ಪರ್ವತೋಽಪಿ ಮುನಿಸ್ತಾಂ ವೈ ಚಕಮೇ ಋಷಿಸತ್ತಮಃ ॥ ೭ ॥

ಅನುಜ್ಞಾಪ್ಯ ಚ ರಾಜಾನಂ ನಾರದೋ ವಾಕ್ಯಮಬ್ರವೀತ್ ।
ರಹಸ್ಯಾಹೂಯ ಧರ್ಮಾತ್ಮಾ ಮಮ ದೇಹಿ ಸುತಾಮಿಮಾಂ ॥ ೮ ॥

---

೩–೪. ಆಗ ನಾರದನು ಆ ಹುಡುಗಿಯನ್ನು ನೋಡಿ ಆಶ್ಚರ್ಯಗೊಂಡು ಎಲೈ ದೊರೆಯೆ! ದೇವಕನ್ಯೆಯಂತೆ ಇರುವ ಈ ಹುಡುಗಿ ಯಾರು? ಸರ್ವಲಕ್ಷಣಸಂಪನ್ನೆಯಾಗಿರುವಳಲ್ಲ! ಸತ್ಯವಂತನೇ! ಸರಿಯಾಗಿ ತಿಳಿಸು.

೫–೬. ಅಂಬರೀಷನು ನಾರದನ ಮಾತನ್ನು ಕೇಳಿ ಕೈಮುಗಿದುಕೊಂಡು ಎಲೈ ಋಷಿಯೇ! ಈಕೆಯು ನನ್ನ ಮಗಳು. ಈಕೆಯ ಹೆಸರು ಶ್ರೀಮತಿಯು. ಮದುವೆಯ ಕಾಲವು ಬಂದಿತು. ವರನನ್ನು ನೋಡುತ್ತಿದ್ದಾಳೆ. ಎಂದನು.

೭. ಅಂಬರೀಷನು ಹೀಗೆಂದು ಹೇಳುತ್ತಲೂ ನಾರದನು ಆಕೆಯನ್ನು ತಾನು ಮದುವೆಯಾಗಬೇಕೆಂದು ಯೋಚಿಸಿದನು. ಪರ್ವತನೂ ಕೂಡ ತಾನು ಮದುವೆ ಯಾಗಬೇಕೆಂದು ಯೋಚಿಸಿದನು. ಈ ರೀತಿಯಾಗಿ ಆ ಒಬ್ಬಳನ್ನು ಈ ಇಬ್ಬರು ಋಷಿಗಳಿಗೂ ಅಪೇಕ್ಷಿಸಿದರು.

೮. ಆಗ ನಾರದನು ರಾಜನಿಗೆ ಸರಿಯೆಂದು ಹೇಳಿ ಬೇರೆಯ ಕಡೆಗೆ ಗುಟ್ಟಾಗಿ ಕರೆದು ಎಲೈ ಧರ್ಮಾತ್ಮನೇ ನನಗೆ ಈ ಮಗಳನ್ನು ಮದುವೆಮಾಡಿಕೊಡೆಂದು ಕೇಳಿದನು.

ಪರ್ವತೋಽಪಿ ತಥಾ ಪ್ರಾಹ ರಾಜಾನಂ ರಹಸಿ ಪ್ರಭುಂ ।
ತಾವುಭೌ ಪ್ರಾಹ ಧರ್ಮಾತ್ಮಾ ಪ್ರಣಿಪತ್ಯ ಭಯಾರ್ದಿತಃ ॥ ೯ ॥

ಉಭೌ ಭವಂತೌ ಕನ್ಯಾಂ ಮೇ ಪ್ರಾರ್ಥಯಾನೌ ಕಥಂ ತ್ವಹಂ ।
ಕರಿಷ್ಯಾಮಿ ಮಹಾಪ್ರಾಜ್ಞೌ ಶೃಣು ನಾರದ ಮೇ ವಚಃ ॥ ೧೦ ॥

ತ್ವಂ ಚ ಪರ್ವತ ಮೇ ವಾಕ್ಯಂ ಶೃಣು ವಕ್ಷ್ಯಾಮಿ ಯತ್ಪ್ರಭೋ ।
ಕನ್ಯೇಯಂ ಯುವಯೋರೇಕಂ ವರಯಿಷ್ಯತಿ ಚೇಚ್ಛುಭಾ ॥ ೧೧ ॥

ತಸ್ಮೈ ಕನ್ಯಾಂ ಪ್ರಯಚ್ಛಾಮಿ ನಾನ್ಯಥಾ ಶಕ್ತಿರಸ್ತಿ ಮೇ ।
ತಥೇತ್ಯುಕ್ತ್ವಾ ತು ತೌ ವಿಪ್ರೌ ಶ್ವ ಆಯಾಸ್ಯಾವ ಏವ ಹಿ ॥ ೧೨ ॥

ಇತ್ಯುಕ್ತ್ವಾ ಮುನಿಶಾರ್ದೂಲೌ ಜಗ್ಮತುಃ ಪ್ರೀತಮಾನಸೌ ।
ವಾಸುದೇವಪರೌ ನಿತ್ಯಮುಭೌ ಜ್ಞಾನವತಾಂ ವರೌ ॥ ೧೩ ॥

---

೯. ಪರ್ವತನೂ ಕೂಡ ಅಂಬರೀಷನನ್ನು ಗುಟ್ಟಾಗಿ ಬೇರೆ ಕಡೆಗೆ ಕರೆದು ನಿನ್ನ ಆ ಮಗಳನ್ನು ನನಗೆ ಕೊಡೆಂದು ಕೇಳಿದನು. ಆಗ ರಾಜನು ಅವರಿಬ್ಬರಿಗೂ ನಮಸ್ಕರಿಸಿ ಭಯಗೊಂಡವನಾಗಿ ಇಂತೆಂದನು.

೧೦. ಎಲೈ ನಾರದನೇ! ನೀವಿಬ್ಬರೂ ಬಹು ತಿಳಿವಳಿಕೆಯುಳ್ಳವರು. ನೀವಿಬ್ಬರೂ ನನ್ನ ಹುಡುಗಿಯನ್ನು ಪ್ರಾರ್ಥಿಸುತ್ತೀರಿ ಈಗ ನಾನೇನು ಮಾಡಬೇಕು? ಆದರೆ ಒಂದು ಮಾತನ್ನು ಹೇಳುತ್ತೇನೆ ಕೇಳು.

೧೧. ಎಲೈ ಪರ್ವತನೇ! ನೀನು ನನ್ನ ಮಾತನ್ನು ಕೇಳು. ನನ್ನ ಕನ್ಯೆಯು ನಿಮ್ಮಲ್ಲಿ ಯಾವನನ್ನು ವರಿಸುವಳೋ ಅವನಿಗೆ ಆಕೆಯನ್ನು ಕೊಟ್ಟು ಮದುವೆ ಮಾಡುತ್ತೇನೆ. ಬೇರೆ ವಿಧವಾಗಿ ನಡೆಯಲು ನನಗೆ ಸಾಧ್ಯವಿಲ್ಲ.

೧೨. ಆ ಋಷಿಗಳಿಬ್ಬರೂ ಹಾಗೆಯೇ ಆಗಲಿ. ನಾಳೆಯ ದಿನ ಬರುತ್ತೇವೆ. ಎಂದು ಹೇಳಿ ಸಂತೋಷದಿಂದ ಹೊರಟುಹೋದರು.

೧೩–೧೪. ಜ್ಞಾನಿಗಳೂ ವಾಸುದೇವನ ಧ್ಯಾನದಲ್ಲಿಯೇ ಆಸಕ್ತರೂ ಆದ

ವಿಷ್ಣುಲೋಕಂ ತತೋ ಗತ್ವಾ ನಾರದೋ ಮುನಿಸತ್ತಮಃ ।
ಪ್ರಣಿಪತ್ಯ ಹೃಷೀಕೇಶಂ ವಾಕ್ಯಮೇತದುವಾಚ ಹ ॥ ೧೪ ॥

ವೃತ್ತಾಂತಂ ಸರ್ವಮಾಖ್ಯಾಯ ನಾಥ ನಾರಾಯಣಾವ್ಯಯ ।
ರಹಸಿ ತ್ವಾಂ ಪ್ರವಕ್ಷ್ಯಾಮಿ ನಮಸ್ತೇ ಭುವನೇಶ್ವರ ॥ ೧೫ ॥

ತತಃ ಪ್ರಹಸ್ಯ ಗೋವಿಂದಃ ಸರ್ವಾತ್ಮಾ ಕರ್ಮಗಂ ಮುನಿಂ ।
ಬ್ರೂಹೀತ್ಯಾಹ ಸ ವಿಶ್ವಾತ್ಮಾ ಮುನಿರಾಹ ಚ ಕೇಶವಂ ॥ ೧೬ ॥

ತ್ವದೀಯೋ ನೃಪತಿಃ ಶ್ರೀಮಾನಂಬರೀಷೋ ಮಹಾಮತಿಃ ।
ತಸ್ಯ ಕನ್ಯಾ ವಿಶಾಲಾಕ್ಷೀ ಶ್ರೀಮತೀನಾಮ ನಾಮತಃ ॥ ೧೭ ॥

ಪರಿಣೇತುಮಹಂ ತಾಂ ವೈ ಇಚ್ಛಾಮಿ ವಚನಂ ಶೃಣು ।
ಪರ್ವತೋಽಯಂ ಮುನಿಃ ಶ್ರೀಮಾನ್ ತವ ಭೃತ್ಯಸ್ತಪೋನಿಧಿಃ ॥ ೧೮ ॥

---

ನಾರದ ಪರ್ವತರು ಹೊರಟುಹೋದರು. ಇತ್ತ ನಾರದನು ವಿಷ್ಣುಲೋಕಕ್ಕೆ ಹೋಗಿ ನಾರಾಯಣನಿಗೆ ನಮಸ್ಕರಿಸಿ ಇಂತೆಂದನು.

೧೫. ಎಲೈ ನಾಥನೇ! ನಾರಾಯಣನೇ! ಅವ್ಯಯನೇ! ಲೋಕಕ್ಕೆಲ್ಲಾ ಒಡೆಯನೇ! ನಿನಗೆ ನಮಸ್ಕಾರವು. ಎಂದು ನಮಸ್ಕರಿಸಿ ಲೋಕದ ವಿಷಯವನ್ನೆಲ್ಲಾ ಹೇಳಿ ಅನಂತರ ಸ್ವಾಮಿ! ನಿನಗೆ ಗುಟ್ಟಾಗಿ ಒಂದು ವಿಷಯವನ್ನು ಹೇಳಬೇಕೆಂದಿದ್ದೇನೆ. ಎಂದನು.

೧೬. ಆಗ ಆ ಸರ್ವಾತ್ಮನಾದ ಕೇಶವನು ನಕ್ಕು ಕರ್ಮದಲ್ಲಿ ಆಸಕ್ತನಾದ ಆ ನಾರದನನ್ನು ಕುರಿತು ಎಲೈ ನಾರದನೇ! ಅದೇನು? ಹೇಳು. ಎಂದನು.

೧೭. ಎಲೈ ಸ್ವಾಮಿಯೇ! ನಿನ್ನ ಕಡೆಯವನಾದ ಅಂಬರೀಷನೆಂಬ ಒಬ್ಬ ದೊರೆಯಿರುವನು. ಅವನು ಬಹು ಬುದ್ಧಿವಂತನು. ಅವನಿಗೆ ಒಬ್ಬಳು ರೂಪವತಿ ಯಾದ ಮಗಳಿರುವಳು. ಅವಳ ಹೆಸರು ಶ್ರೀಮತಿ ಎಂದು.

೧೮. ನನ್ನ ಮಾತನ್ನು ಕೇಳು. ಆಕೆಯನ್ನು ಮದುವೆಯಾಗಬೇಕೆಂಬ ಆಸೆ ನನಗೆ ಇದೆ. ನಿನ್ನ ಆಳಾದ ಆ ಪರ್ವತನೆಂಬ ತಪೋನಿಧಿಯೂ ಕೂಡ ಅವಳನ್ನು ಮದುವೆಯಾಗಲು ಅಪೇಕ್ಷಿಸಿದನು. ಆಗ ರಾಜನು ಇಂತೆಂದನು.

ತಾಪೃಚ್ಛತ್ ಸೋऽಪಿ ಭಗವಾನ್ ತಮಾಹ ಚ ಜನಾಧಿಪಃ ।
ಅಂಬರೀಷೋ ಮಹಾತೇಜಾಃ ಕನ್ಯಾ ಯಂ ಯುವಯೋರ್ವರಂ ॥ ೧೯ ॥

ಲಾವಣ್ಯಯುಕ್ತಂ ವೃಣುಯಾದ್ಯದಿ ತಸ್ಮೈ ದದಾಮ್ಯಹಂ ।
ಇತ್ಯಾಹಾವಾಂ ನೃಪಸ್ತತ್ರ ತಥೇತ್ಯುಕ್ತ್ವಾಸ್ಯಹಂ ತತಃ ॥ ೨೦ ॥

ಆಗಮಿಷ್ಯಾಮಿ ತೇ ರಾಜನ್ ಶ್ವಃ ಪ್ರಭಾತೇ ಗೃಹಂ ಪ್ರತಿ ।
ಆಗತೋऽಹಂ ಜಗನ್ನಾಥ ಕರ್ತುಮರ್ಹಸಿ ಮೇ ಪ್ರಿಯಂ ॥ ೨೧ ॥

ವಾನರಾನನವದ್ಭಾತಿ ಪರ್ವತಸ್ಯ ಮುಖಂ ಯಥಾ ।
ತಥಾ ಕುರು ಜಗನ್ನಾಥ ಮಮ ಚೇದಿಚ್ಛಸಿ ಪ್ರಿಯಂ ॥ ೨೨ ॥

ಶ್ರೀಮತೀ ತು ತಥಾ ಪಶ್ಯೇನ್ನಾನ್ಯಃ ಪಶ್ಯೇತ್ತಥಾವಿಧಂ ।
ತಥೇತ್ಯುಕ್ತ್ವಾ ಸ ಗೋವಿಂದಃ ಪ್ರಹಸ್ಯ ಮಧುಸೂದನಃ ॥ ೨೩ ॥

---

೧೯. ಈ ನನ್ನ ಕನ್ಯೆಯು ನಿಮ್ಮಗಳಲ್ಲಿ ಯಾವನು ಸೌಂದರ್ಯದಿಂದ ಕೂಡಿರುವನೋ ಅವನನ್ನು ವರಿಸುತ್ತಾಳೆ. ನಾನು ಅವಳು ವರಿಸಿದವನಿಗೆ ಮದುವೆ ಮಾಡಿಕೊಡುತ್ತೇನೆ. ಎಂದನು.

೨೦-೨೧. ಅದನ್ನು ಕೇಳಿ ನಾವಿಬ್ಬರೂ ಹಾಗೇ ಆಗಲಿ. ಎಂದು ಹೇಳಿದೆವು. ನಾನು ಎಲೈ ರಾಜನೆ! ನಾಳೆಯ ಬೆಳಿಗ್ಗೆ ನಾನು ನಿನ್ನ ಮನೆಗೆ ಬರುತ್ತೇನೆ. ಎಂಬುದಾಗಿ ಹೇಳಿ ನಿನ್ನ ಬಳಿಗೆ ಬಂದಿದ್ದೇನೆ. ನೀನು ಮಾತ್ರ ನನಗೆ ಅನುಕೂಲವನ್ನು ಮಾಡಿಕೊಡಬೇಕು.

೨೨. ಎಲೈ ಸ್ವಾಮಿಯೇ ! ನನಗೆ ನೀನು ಅನುಕೂಲವನ್ನು ಮಾಡಿಕೊಡಲು ಇಷ್ಟಪಟ್ಟರೆ ಆ ಪರ್ವತನ ಮುಖವು ಕಪಿಯ ಮುಖದಂತೆ ಕಾಣುವ ಹಾಗೆ ಮಾಡು.

೨೩. ಶ್ರೀಮತಿಯೊಬ್ಬಳಿಗೆ ಮಾತ್ರ ಆ ಪರ್ವತನು ಕಪಿಯಂತೆ ಕಾಣಬೇಕು. ಮಿಕ್ಕವರಿಗೆ ಸರಿಯಾಗಿಯೇ ಕಾಣುತ್ತಿರಬೇಕು. ಹಾಗೆ ಮಾಡು ಎನ್ನಲು ಸ್ವಾಮಿಯು ನಕ್ಕು ನೀನು ಹೇಳಿದಂತೆಯೇ ಮಾಡುತ್ತೇನೆ. ಸಂತೋಷದಿಂದ ಹೋಗು. ಎಂದನು.

ತ್ವಯೋಕ್ತಂ ತತ್ಕರಿಷ್ಯಾಮಿ ಗಚ್ಛ ಸೌಮ್ಯ ಯಥಾಸುಖಂ ।
ಏವಮುಕ್ತೋ ಮುನಿರ್ಹೃಷ್ಟಃ ಪ್ರಣಿಪತ್ಯ ಜನಾರ್ದನಂ ॥ ೨೪ ॥

ಮನ್ಯಮಾನಃ ಕೃತಾತ್ಮಾನಮಯೋಧ್ಯಾಂ ವೈ ಜಗಾಮ ಸಃ ।
ಗತೇ ಮುನಿವರೇ ತಸ್ಮಿನ್ ಪರ್ವತೋಽಪಿ ಮಹಾಮುನಿಃ ॥ ೨೫ ॥

ಪ್ರಣಮ್ಯ ಮಾಧವಂ ಹೃಷ್ಟೋ ರಹಸ್ಯೇನಮುವಾಚ ಹ ।
ವೃತ್ತಾಂತಂ ಚ ನಿವೇದ್ಯಾಗ್ರೇ ನಾರದಸ್ಯ ಜಗತ್ಪತೇ ॥ ೨೬ ॥

ಗೋಲಾಂಗೂಲ ಮುಖಂ ಯದ್ವನ್ಮುಖಂ ಭಾತಿ ತಥಾ ಕುರು ।
ಶ್ರೀಮತೀ ತು ತಥಾ ಪಶ್ಯೇತ್ ನಾನ್ಯಃ ಪಶ್ಯೇತ್ತಥಾವಿಧಂ ॥ ೨೭ ॥

ತಚ್ಛ್ರುತ್ವಾ ಭಗವಾನ್ ವಿಷ್ಣುಃ ತ್ವಯೋಕ್ತಂ ಚ ಕರೋಮಿ ವೈ ।
ಗಚ್ಛ ಶೀಘ್ರಮಯೋಧ್ಯಾಂ ತ್ವಂ ಮಾ ವಾದೀರ್ನಾರದಸ್ಯ ವೈ ॥ ೨೮ ॥

---

೨೪. ಆ ನಾರದನು ಇದನ್ನು ಕೇಳಿ ಸಂತೋಷಗೊಂಡು ಆ ಜನಾರ್ದನನಿಗೆ ನಮಸ್ಕರಿಸಿ ತನ್ನ ಕೆಲಸವಾಯಿತೆಂದೂ ತಾನು ಧನ್ಯನಾದೆನೆಂದೂ ತಿಳಿದುಕೊಂಡು ಅಯೋಧ್ಯೆಗೆ ಹೋದನು.

೨೫. ಆ ನಾರದನು ಹೊರಟುಹೋಗುತ್ತಲೂ ಮಹಾಮುನಿಯಾದ ಪರ್ವತನೂ ಮಾಧವನ ಬಳಿಗೆ ಬಂದು ನಮಸ್ಕರಿಸಿ ಸಂತೋಷದಿಂದ ಗುಟ್ಟಿನಲ್ಲಿ ಇಂತೆಂದನು.

೨೬–೨೭. ಈ ಪರ್ವತನು ವಿಷಯಗಳೆಲ್ಲವನ್ನೂ ತಿಳಿಸಿ ಎಲೈ ಜಗತ್ಪತಿಯೇ ಆ ನಾರದನ ಮುಖವು ಕೊಂಡಮುಸುವ ಮುಖದಂತೆ ಆ ಶ್ರೀಮತಿಗೆ ಕಾಣುವಂತೆಯೂ ಮಾಡಬೇಕೆಂದು ಹೇಳಿ ಕೇಳಿಕೊಂಡನು.

೨೮. ಅದನ್ನು ಕೇಳಿ ವಿಷ್ಣುವು ಎಲೈ ಪರ್ವತನೇ ! ನೀನು ಹೇಳಿದಂತೆಯೇ ಮಾಡುತ್ತೇನೆ. ನೀನು ಅಯೋಧ್ಯೆಗೆ ಬೇಗ ಹೋಗು. ನಾರದನಿಗೆ ನಾನು ಹೇಳಿದ ವಿಷಯವನ್ನು ಹೇಳಬೇಡ.

ತ್ವಯಾ ಮೇ ಮಂತ್ರಿತಂ ಯಚ್ಚ ತಥೇತ್ಯುಕ್ತ್ವಾ ಜಗಾಮ ಸಃ।
ತತೋ ರಾಜಾ ಸಮಾಜ್ಞಾಯ ಪ್ರಾಪ್ತೌ ಮುನಿವರೌ ತದಾ ॥ ೨೯ ॥

ಮಂಗಳೈರ್ವಿವಿಧೈರ್ಭದ್ರೈರಯೋಧ್ಯಾಂ ಧ್ವಜಮಾಲಿನೀಂ ।
ಮಂಡಯಾಮಾಸ ಲಾಜೈಶ್ಚ ಪುಷ್ಪೈಶ್ಚೈವ ಸಮನ್ತತಃ ॥ ೩೦ ॥

ಅಭಿಷಿಕ್ತಗೃಹದ್ವಾರಾಂ ಸಿಕ್ತಾಂಗಣಮಹಾಪಥಾಂ ।
ದಿವ್ಯಗಂಧರಸೋಪೇತಾಂ ಧೂಪಿತಾಂ ದಿವ್ಯಧೂಪಕೈಃ ॥ ೩೧ ॥

ಕೃತ್ವಾ ಚ ನಗರೀಂ ರಾಜಾ ಮಂಡಯಾಮಾಸ ತಾಂ ಸಭಾಂ ।
ದಿವ್ಯಗಂಧೈಸ್ತಥಾಧೂಪೈ ರತ್ನೈಶ್ಚ ವಿವಿಧೈಸ್ತಥಾ ॥ ೩೨ ॥

ಅಲಂಕೃತಾಂ ಮಣಿಸ್ತಂಭೈಃ ನಾನಾಮಾಲ್ಯೋಪಶೋಭಿತೈಃ ।
ಪರಾರ್ಧ್ಯಾಸ್ತರಣೋಪೇತೈಃ ದಿವ್ಯಭದ್ರಾಸನೈರ್ವೃತಾಂ ॥ ೩೩ ॥

---

೨೯. ಆ ಪರ್ವತನು ಹಾಗೇ ಆಗಲೆಂದು ಅಯೋಧ್ಯೆಗೆ ಹೋದನು. ಆಗ ರಾಜನಾದ ಅಂಬರೀಷನು ಆ ನಾರದ ಪರ್ವತರಿಬ್ಬರೂ ತನ್ನ ಊರಿಗೆ ಬಂದುದನ್ನು ನೋಡಿದನು.

೩೦. ಆ ಅಂಬರೀಷನು ನಾನಾ ಬಗೆಯ ಮಂಗಳಕರವಾದ ತೋರಣಗಳಿಂದಲೂ ಧ್ವಜಗಳಿಂದಲೂ ಹೂವು ಅರಳು ಮುಂತಾದುವುಗಳಿಂದಲೂ ಆ ಪಟ್ಟಣವನ್ನು ಅಲಂಕರಿಸಿದನು.

೩೧. ಮನೆ ಬಾಗಿಲುಗಳನ್ನೆಲ್ಲಾ ಸಾರಿಸಿದರು. ದೊಡ್ಡ ದೊಡ್ಡ ಚೌಕಗಳನ್ನೆಲಾ ನೀರನ್ನು ಹಾಕಿ ಅಲಂಕರಿಸಿದರು. ಒಳ್ಳೆ ಧೂಪವನ್ನು ಹಾಕಿ ಎಲ್ಲಾ ಕಡೆಯಲ್ಲಿಯೂ ಸುವಾಸನೆಬರುವಂತೆ ಮಾಡಿದರು.

೩೨. ಆ ರಾಜನು ಪಟ್ಟಣವೆಲ್ಲವನ್ನೂ ಹೀಗೆ ಅಲಂಕರಿಸಿ ಸಭೆಯನ್ನೂ ಕೂಡ ಗಂಧದಿಂದಲೂ ಧೂಪದಿಂದಲೂ ಸುವಾಸನೆ ಬರುವಂತೆ ಮಾಡಿ ರತ್ನಗಳಿಂದ ಅಲಂಕರಿಸಿದನು.

೩೩. ಅನೇಕವಾದ ಬಗೆಬಗೆಯ ಮಣಿಯ ಕಂಬಗಳಿಂದಲೂ ಮಾಲೆಗಳಿಂದಲೂ ಅಲಂಕರಿಸದನು. ಉತ್ತಮವಾದ ರತ್ನಗಳೇ ಮುಂತಾದ ಹಾಸುವ ಪದಾರ್ಥಗಳಿಂದ ನೆಲವನ್ನು ಅಲಂಕರಿಸಿದನು. ಅನೇಕವಾದ ಭದ್ರಾಸನಗಳನ್ನೂ ಹಾಕಿಸಿದನು.

ನಾನಾಜನಸಮಾವೇಶೈರ್ನರೇಂದ್ರೈರಭಿಸಂವೃತಾಂ ।
ಕೃತ್ವಾ ನೃಪೇಂದ್ರಸ್ತಾಂ ಕನ್ಯಾಮಾದಾಯ ಪ್ರವಿವೇಶ ಹ ॥ ೩೪ ॥

ಸರ್ವಾಭರಣಸಂಪನ್ನಾ ಶ್ರೀರಿವಾಯತಲೋಚನಾ ।
ಕರಸಮ್ಮಿತಮಧ್ಯಾಂಗೀ ಪಂಚಸ್ನಿಗ್ಧಾ ಶುಭಾನನಾ ।
ಸ್ತ್ರೀಭಿಃ ಪರಿವೃತಾ ದಿವ್ಯಾ ಶ್ರೀಮತೀ ಸಂಸ್ಥಿತಾ ಸತೀ ॥ ೩೫ ॥

ಸಭಾ ತು ಸಾ ಭೂಮಿಪತೇಃ ಸಮೃದ್ಧಾ ಮಣಿಪ್ರವೇಕೋತ್ತಮರತ್ನಚಿತ್ರಾ
ನ್ಯಸ್ತಾಸನಾ ಮಾಲ್ಯವತೀ ಸುಗಂಧಾ ತಾಮನ್ವಯುಸ್ತೇ ಸುರರಾಜವರ್ಯಾಃ ॥

---

೩೪. ಹೀಗೆ ಅಲಂಕರಿಸಿ ಸಭೆಗೆ ಅನೇಕ ಜನಗಳನ್ನು ಕರೆಸಿದನು. ಅನೇಕ ಜನ ರಾಜರನ್ನೂ ರಾಜಪುತ್ರರನ್ನೂ ಕರೆಸಿದನು. ಎಲ್ಲರನ್ನೂ ಸೇರಿಸಿ ತನ್ನ ಮಗಳಿಗೆ ಅಲಂಕಾರಮಾಡಿ ಆ ಸಭೆಗೆ ಕರೆತಂದನು.

೩೫. ಆ ಶ್ರೀಮತಿಯು ಎಲ್ಲಾ ಆಭರಣಗಳನ್ನೂ ತೊಟ್ಟುಕೊಂಡಿದ್ದಳು. ಕಣ್ಣುಗಳು ದೀರ್ಘವಾಗಿದ್ದುವು. ಲಕ್ಷ್ಮಿಯಂತೆ ಸುಂದರಿಯಾಗಿದ್ದಳು. ನಡುವು ಮುಷ್ಟಿಯಿಂದ ಹಿಡಿಯುವಷ್ಟು ಸಣ್ಣಗಿದ್ದಿತು. ಮುಖವು ಅಗಲವಾಗಿ ನುಣ್ಣಗೆ ಮನೋಹರವಾಗಿದ್ದಿತು. ಇಂತಹ ಶ್ರೀಮತಿಯು ಹೆಂಗಸರ ಜೊತೆಯಲ್ಲಿ ಕುಳಿತಿದ್ದಳು.

೩೬. ಆ ರಾಜನ ಸಭೆಯು ಎಲ್ಲಾ ವಿಷಯಗಳಿಂದಲೂ ಪರಿಪೂರ್ಣವಾಗಿದ್ದಿತು. ಮಣಿಗಳಿಂದಲೂ ರತ್ನಚಿತ್ರಗಳಿಂದಲೂ ಚಿತ್ರಿತವಾಗಿದ್ದಿತು. ಎಲ್ಲ ಕಡೆಯಲ್ಲಿಯೂ ಆಸನಗಳನ್ನು ಹಾಕಿದ್ದರು. ಮಾಲೆಗಳಿಂದ ಅಲಂಕರಿಸಿದ್ದರು. ಗಂಧದಿಂದ ವಾಸನೆಬರುವಂತೆ ಮಾಡಿದ್ದರು. ಇಂತಹ ಸಭೆಗೆ ದೇವರಾಜನೇ ಮುಂತಾದವರೆಲ್ಲರೂ ಬಂದರು.

**ಅಥಾಯಯೌ ಬ್ರಹ್ಮವರಾತ್ಮಜೋ ಮಹಾನ್ ತ್ರೈವಿದ್ಯವೃದ್ಧೋ ಭಗವಾನ್ ಮಹಾತ್ಮಾ।**
**ಸ ಪರ್ವತೋ ಬ್ರಹ್ಮವಿದಾಂ ವರಿಷ್ಠೋ ಮಹಾಮುನಿರ್ನಾರದ ಆಜಗಾಮ ॥ ೩೭ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ನಾರದ ಪರ್ವತಸಭಾಪ್ರವೇಶೋ**
**ನಾಮ ತೃತೀಯ ಸ್ಸರ್ಗಃ**

೩೭. ಅನಂತರ ಬ್ರಹ್ಮನ ಮಾನಸಪುತ್ರನಾದ ಮಹಾತ್ಮನಾದ ಮೂರು ವೇದಗಳಲ್ಲಿಯೂ ನಿಪುಣನಾದ ನಾರದನೂ ಬ್ರಹ್ಮವನ್ನು ತಿಳಿದ ಬ್ರಹ್ಮಜ್ಞಾನಿಗಳಲ್ಲಿ ನಿಪುಣನಾದ ಪರ್ವತನೂ ಬಂದರು.

ಇಂತು ವಾಲ್ಮೀಕಿ ಮಹರ್ಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣ
ದಲ್ಲಿ ಅದ್ಭುತೋತ್ತರಕಾಂಡದಲ್ಲಿ ನಾರದ ಪರ್ವತರು ಸಭೆಗೆ ಪ್ರವೇಶಿಸಿದರೆಂಬ
ಮೂರನೆಯ ಸರ್ಗವು.



ಶ್ರೀಃ

---

# ಅ ದ್ಭು ತ ರಾ ಮಾ ಯ ಣೇ

## ಅಥ ಚತುರ್ಥಃ ಸರ್ಗಃ



ತಾವಾಗತೌ ಸಮೀಕ್ಷ್ಯಾಥ ರಾಜಾ ಸಂಭ್ರಾಂತಮಾನಸಃ ।
ದಿವ್ಯಮಾಸನಮಾದಿಶ್ಯ ಪೂಜಯಾಮಾಸ ತಾವುಭೌ ॥ ೧ ॥

ಉಭೌ ದೇವಋಷೀ ದಿವ್ಯೌ ನಿತ್ಯಜ್ಞಾನವತಾಂ ವರೌ ।
ಸಮಾಸೀನೌ ಮಹಾತ್ಮಾನೌ ಕನ್ಯಾರ್ಥೇ ಮುನಿಸತ್ತಮೌ ॥ ೨ ॥

ತಾವುಭೌ ಪ್ರಣಿಪತ್ಯಾಗ್ರೇ ಕನ್ಯಾಂ ತಾಂ ಶ್ರೀಮತೀಂ ಶುಭಾಂ ।
ಸ್ಥಿತಾಂ ಕಮಲಪತ್ರಾಕ್ಷೀಂ ಪ್ರಾಹ ರಾಜಾ ಯಶಸ್ವಿನೀಂ ॥ ೩ ॥

---

## ನಾಲ್ಕನೆಯ ಸರ್ಗವು.

೧. ಆ ನಾರದ ಪರ್ವತರು ಬಂದುದನ್ನು ನೋಡಿ ರಾಜನು ಮನಸ್ಸಿನಲ್ಲಿ ಕಳವಳಗೊಂಡು ಅವರಿಬ್ಬರಿಗೆ ಒಳ್ಳೆಯ ಆಸನವನ್ನು ಕೊಟ್ಟು, ಆ ಇಬ್ಬರನ್ನೂ ಪೂಜಿಸಿದನು.

೨. ಅವರಿಬ್ಬರೂ ದೇವಋಷಿಗಳು ದೇವಲೋಕದವರು. ನಿತ್ಯಜ್ಞಾನವುಳ್ಳ ವರಲ್ಲಿ ಉತ್ತಮರು, ಮಹಾತ್ಮರು. ಇವರಿಬ್ಬರೂ ಕನ್ಯೆಗೋಸ್ಕರ ಅಲ್ಲಿ ಕುಳಿತು ಕೊಂಡರು.

೩. ಆಗ ಆ ಅಂಬರೀಷನು ಅವರಿಬ್ಬರಿಗೂ ನಮಸ್ಕರಿಸಿ ಆ ಶ್ರೀಮತಿಯೆಂಬ ಕನ್ಯೆಯನ್ನು ಕುರಿತು ಅವರೆದುರಿಗೆ ಇಂತೆಂದು ಹೇಳಿದನು.

**ಅನಯೋರ್ಯಂ ವರಂ ಭದ್ರೇ ಮನಸಾ ತ್ವಮಿಹೇಚ್ಛಸಿ ।**
**ತಸ್ಮೈ ಮಾಲಾಮಿಮಾಂ ದೇಹಿ ಪ್ರಣಿಪತ್ಯ ಯಥಾವಿಧಿ ॥ ೪ ॥**

**ಏವಮುಕ್ತಾ ತು ಸಾ ಕನ್ಯಾ ಸ್ತ್ರೀಭಿಃ ಪರಿವೃತಾ ತದಾ ।**
**ಮಾಲಾಂ ಹಿರಣ್ಮಯೀಂ ದಿವ್ಯಾಮಾದಾಯ ಶುಭಲೋಚನಾ ॥ ೫ ॥**

**ತಸ್ಥೌ ತಾಮಾಹರಾಜಾಸೌ ವತ್ಸೇ ಕಿಂ ತ್ವಂ ಕರಿಷ್ಯಸಿ ॥ ೬ ॥**

**ಅನಯೋರೇಕಮುದ್ದಿಶ್ಯ ದೇಹಿ ಮಾಲಾಮಿಮಾಂ ಶುಭೇ ।**
**ಸಾ ಪ್ರಾಹ ಪಿತರಂ ತ್ರಸ್ತಾ ಇಮೌ ತು ವಾನರಾನನೌ ॥ ೭ ॥**

**ಮುನಿಶ್ರೇಷ್ಠೌ ನ ಪಶ್ಯಾಮಿ ನಾರದಂ ಪರ್ವತಂ ತಥಾ ।**
**ಅನಯೋರ್ಮಧ್ಯತಸ್ತ್ವೇಕಂ ವರಂ ಷೋಡಶವಾರ್ಷಿಕಂ ॥ ೮ ॥**

೪. ಎಲೈ ಮಂಗಳಾಂಗಿಯೆ! ಇವರಿಬ್ಬರಲ್ಲಿ ನಿನಗೆ ಯಾವನು ಇಚ್ಛೆಯಾಗುವನೋ ಅವನಿಗೆ ನಮಸ್ಕರಿಸಿ ಈ ಮಾಲೆಯನ್ನು ಶಾಸ್ತ್ರರೀತಿಯಿಂದ ಹಾಕು.

೫. ತಂದೆಯು ಹೀಗೆ ಹೇಳಲು ಆ ಕನ್ಯೆಯು ಸಖಿಯರೊಡಗೂಡಿ ಉತ್ತಮವಾದ ಚಿನ್ನದ ಮಾಲೆಯನ್ನು ತೆಗೆದುಕೊಂಡು ಹೊರಟಳು. ಮತ್ತು ಹಾಗೆಯೇ ನಿಂತುಬಿಟ್ಟಳು. ಹಾಗೆ ಅವಳು ನಿಂತುಬಿಡಲು ರಾಜನು ಆಕೆಯನ್ನು ಕುರಿತು "ಅಮ್ಮಾ ಇದೇನು ಮಾಡುತ್ತೀಯೆ."

೬-೭. ಇವರಿಬ್ಬರಲ್ಲಿ ಒಬ್ಬನಿಗೆ ನಿನಗೆ ಬೇಕಾದವನಿಗೆ ಈ ಮಾಲೆಯನ್ನು ಹಾಕು, ಎಂದನು. ಆಗ ಈಕೆಯು ತಂದೆಯನ್ನು ಕುರಿತು "ಅಪ್ಪ ಇವರಿಬ್ಬರಿಗೂ ಕಪಿಯ ಮುಖದಂತೆ ಮುಖವಿದೆ."

೮-೧೦. ಮುನಿಶ್ರೇಷ್ಠನಾದ ನಾರದನನ್ನಾಗಲಿ ಪರ್ವತನನ್ನಾಗಲಿ ಇಲ್ಲಿ ಕಾಣುವುದಿಲ್ಲ. ಈ ಕಪಿಯ ಮುಖದ ಇವರಿಬ್ಬರ ಮಧ್ಯದಲ್ಲಿ ಒಬ್ಬನು ಹದಿನಾರು ವರುಷದ ಯುವಕನು ಕುಳಿತಿರುವನು. ಎಲ್ಲಾ ಆಭರಣಗಳನ್ನು ಹಾಕಿಕೊಂಡಿರುವನು

**ಸರ್ವಾಭರಣಸಂಯುಕ್ತಮತಸೀಪುಷ್ಪಸನ್ನಿಭಂ ।**
**ದೀರ್ಘಬಾಹುಂ ವಿಶಾಲಾಕ್ಷಂ ತುಂಗೋರಸ್ಥಲಮುತ್ತಮಂ ॥ ೯ ॥**

**ಚಾಮೀಕರಾಂಧಂಕರಣಪಟಯುಗ್ಮಕಶೋಭಿತಂ ।**
**ವಿಭಕ್ತತ್ರಿವಲೀಯುಕ್ತನಾಭಿಂ ವ್ಯಕ್ತಕೃಶೋದರಂ ॥ ೧೦ ॥**

**ಹಿರಣ್ಯಾಭರಣೋಪೇತಂ ಸುರಂಗಕನಖಂ ಶುಭಂ ।**
**ಪದ್ಮಾಕಾರಕರಂ ತ್ವೇನಂ ಪದ್ಮಾಸ್ಯಂ ಪದ್ಮಲೋಚನಂ ॥ ೧೧ ॥**

**ಪದ್ಮಾಂಘ್ರಿಂ ಪದ್ಮಹೃದಯಂ ಪದ್ಮನಾಭಿಂ ಶ್ರಿಯಾವೃತಂ ।**
**ದಂತಪಂಕ್ತಿಭಿರತ್ಯರ್ಥಂ ಕುಂದಕುಟ್ಮಲಸನ್ನಿಭಂ ॥ ೧೨ ॥**

**ಹಸಂತಂ ಮಾಂ ಸಮಾಲೋಕ್ಯ ದಕ್ಷಿಣಂ ಚ ಪ್ರಸಾರ್ಯ ವೈ ।**
**ಪಾಣಿಂ ಸ್ಥಿತಮಿಮಂ ಛನ್ನಂ ಪಶ್ಯಾಮಿ ಶುಭಮೂರ್ಧಜಂ ॥ ೧೩ ॥**

---

ಕಪ್ಪು ಅಗಸೆಯ ಹೂವಿನ ಬಣ್ಣಕ್ಕಿರುವನು. ತೋಳಗಳು ಉದ್ದವಾಗಿವೆ. ಕಣ್ಣುಗಳು ವಿಶಾಲವಾಗಿವೆ. ಎದೆ ಉಬ್ಬಿಕೊಂಡು ಮುಂದಕ್ಕೆ ಬಂದಿದೆ. ಚಿನ್ನವನ್ನು ತಿರಸ್ಕರಿಸುವಂತಹ ಎರಡು ಹೊಂಬಣ್ಣದ ಬಟ್ಟೆಗಳನ್ನು ಧರಿಸಿರುವನು. ಹೊಟ್ಟೆಯ ಮೇಲೆ ಮೂರು ಮಡಿಕೆಗಳು ಕಾಣುತ್ತಿರುವುವು. ಹೊಕ್ಕಳು ಆಳವಾಗಿರುವುದು. ಅಲ್ಲದೆ ಸಣ್ಣವಾಗಿರುವುದು.

೧೧–೧೩. ಚಿನ್ನದ ಆಭರಣಗಳನ್ನು ಧರಿಸಿದ್ದಾನೆ. ಶುಭವಾದ ಉಗುರುಗಳಿಗೆ ಬಣ್ಣಗಳನ್ನು ಹಾಕಿಕೊಂಡಿರುವನು. ಪದ್ಮದಂತೆ ಕೈಗಳಿವೆ. ಪದ್ಮದಂತೆ ಮುಖವಿದೆ. ಪದ್ಮದಂತೆ ಕಣ್ಣುಗಳಿವೆ. ಪದ್ಮದಂತೆ ಹೆಜ್ಜೆಗಳಿವೆ. ಪದ್ಮದಂತೆ ಎದೆಯಿದೆ. ಪದ್ಮದಂತೆ ಹೊಕ್ಕುಳಿದೆ. ಒಳ್ಳೆಯ ಕಾಂತಿಯಿಂದ ಕೂಡಿರುವನು. ಅವನ ಹಲ್ಲುಗಳು ಕಾಡುಮಲ್ಲಿಗೆಯ ಮೊಗ್ಗುಗಳಂತಿವೆ. ಬಲಗೈಯನ್ನು ನೀಡಿಕೊಂಡು ನನ್ನನ್ನು ನೋಡಿ ನಗುತ್ತಿರುವನು. ತಲೆಗೂದಲು ಬಲು ಚೆನ್ನಾಗಿವೆ. ಈ ರೀತಿಯಾಗಿ ಇಲ್ಲೊಬ್ಬನು ಒಬ್ಬರಿಗೂ ಕಾಣದಂತೆ ಕುಳಿತಿರುವನು. ಇವನು ನನಗೆ ಕಾಣುತ್ತಿರುವನು.

**ಏವಮುಕ್ತೇ ಮುನಿಃ ಪ್ರಾಹ ನಾರದಃ ಸಂಶಯಂ ಗತಃ ।**
**ಕಿಯಂತೋ ಬಾಹವಸ್ತಸ್ಯ ಕನ್ಯೇ ವದ ಯಥಾತಥಂ ॥ ೧೪ ॥**

**ಬಾಹುದ್ವಯಂ ಚ ಪಶ್ಯಾಮೀತ್ಯಾಹ ಕನ್ಯಾ ಸುವಿಸ್ಮಿತಾ ।**
**ಪ್ರಾಹ ತಂ ಪರ್ವತಸ್ತತ್ರ ತಸ್ಯ ವಕ್ಷಸ್ಥಲೇ ಶುಭೇ ॥ ೧೫ ॥**

**ಕಿಂ ಚ ಪಶ್ಯಸಿ ಮೇ ಬ್ರೂಹಿ ಕರೇ ಕಿಂ ಧಾರಯತ್ಯಪಿ ।**
**ಕನ್ಯಾ ತಮಾಹ ಮಾಲಾಂ ವೈ ಚಂಚದ್ರೂಪಾಮನುತ್ತಮಾಂ ॥ ೧೬ ॥**

**ವಕ್ಷಸ್ಥಲೇಽಸ್ಯ ಪಶ್ಯಾಮಿ ಕರೇ ಕಾರ್ಮುಕಸಾಯಕೌ ।**
**ಏವಮುಕ್ತೌ ಮುನಿಶ್ರೇಷ್ಠೌ ಪರಸ್ಪರಮನುತ್ತಮೌ ॥ ೧೭ ॥**

**ಮನಸಾ ಚಿಂತಯಂತೌ ತೌ ಮಾಯೇಯಂ ಕಸ್ಯ ಚಿದ್ಭವೇತ್ ।**
**ಮಾಯಾವೀ ತಸ್ಕರೋ ನೂನಂ ಸ್ವಯಮೇವ ಜನಾರ್ದನಃ ॥ ೧೮ ॥**

೧೪. ಆ ಹುಡುಗಿಯು ತಂದೆಯನ್ನು ಕುರಿತು ಹೀಗೆ ಹೇಳುತ್ತಲೂ ನಾರದನು ಇದನ್ನು ಕೇಳಿ ಸಂಶಯಗೊಂಡು ಎಲೈ ಕನ್ಯೆಯೇ ಇವನಿಗೆ ಎಷ್ಟು ಕೈಗಳಿವೆ? ಸರಿಯಾಗಿ ನೋಡಿ ಹೇಳು. ಎಂದನು.

೧೫-೧೭. ಆಕೆಯು ನಾರದನನ್ನು ಕುರಿತು ಅವನಿಗೆ ಎರಡು ತೋಳುಗಳಿವೆ ಎಂದಳು. ಆಗ ಪರತ್ವನು ಅವನ ಎದೆಯಲ್ಲಿ ಏನಿದೆ? ಕೈಯ್ಯಲ್ಲಿ ಏನನ್ನು ಹಿಡಿದಿದ್ದಾನೆ? ಎನ್ನಲು ಆಗ ಆ ಕನ್ಯೆಯು ಆ ಪರ್ವತನನ್ನು ಕುರಿತು ಮಾಲೆಯನ್ನು ಧರಿಸಿದ್ದಾನೆ. ಕೈಯ್ಯಲ್ಲಿ ಬಿಲ್ಲು ಬಾಣಗಳಿವೆ. ಹೀಗೆ ಆಕೆಯು ಅವರಿಗೆ ಉತ್ತರವನ್ನು ಕೊಟ್ಟಳು.

೧೮. ಆಗ ಪರ್ವತನಾರದರಿಬ್ಬರೂ ಇದು ಯಾರದೋ ಮಾಯೆಯಿರಬೇಕೆಂದು ಯೋಚಿಸಿದರು. ಅದು ಮತ್ತಾರದೂ ಅಲ್ಲ. ಈ ಮಾಯಾವಿಯೂ ಕಳ್ಳನೂ ಆ ಜನಾರ್ದನನೇ ಆಗಿರಬೇಕು.

ಆಗತೋ ನಾನ್ಯಥಾ ಕುರ್ಯಾತ್ ಕಥಂ ಮೇನ್ಯೋ ಮುಖಂ ತ್ವಿದಂ ।
ಗೋಲಾಂಗೂಲೀಯಮಿತ್ಯೇವಂ ಚಿಂತಯಾಮಾಸ ನಾರದಃ ॥ ೧೯ ॥

ಪರ್ವತೋಽಪಿ ತಥೈವೈತತ್ ವಾನರತ್ವಂ ಕಥಂ ಮಯಾ ।
ಪ್ರಾಪ್ತಮಿತ್ಯೇವ ಸಹಸಾ ಚಿಂತಾಮಾಪೇದಿವಾಂಸ್ತಥಾ ॥ ೨೦ ॥

ತತೋ ರಾಜಾ ಪ್ರಣಮ್ಯಾಸೌ ನಾರದಂ ಪರ್ವತಂ ತಥಾ ।
ಭವದ್ಭ್ಯಾಂ ಕಿಮಿದಂ ಭದ್ರೌ ಕೃತಂ ಬುದ್ಧಿವಿಮೋಹನಂ ॥ ೨೧ ॥

ಸ್ವಸ್ಥೌ ಭವಂತೌ ತಿಷ್ಠೇತಂ ಯದಿ ಕನ್ಯಾರ್ಥಮುದ್ಯತೌ ।
ಏವಮುಕ್ತೌ ಮುನಿಶ್ರೇಷ್ಠೌ ನೃಪಮೂಚತುರುಲ್ಬಣೌ ॥ ೨೨ ॥

ತ್ವಮೇವ ಮೋಹಂ ಕುರುಷೇ ನಾವಾಮಿಹ ಕಥಂ ಚ ನ ।
ಆವಯೋರೇಕಮೇಷಾ ತೇ ವರಯತ್ವೇವ ಭಾಮಿನಿ ॥ ೨೩ ॥

---

೧೯. ಆ ಕೃಷ್ಣನು ಬಂದಿರುವುದರಿಂದಲೇ ನನ್ನ ಮುಖವು ಕೊಂಡೇಮುಸುವನ ಮುಖದಂತಾಗಿರಬೇಕು. ಅವನಿಂದಲ್ಲದೆ ಮತ್ತಾರಿಂದಲೂ ಹೀಗೆ ಮಾಡಲು ಸಾಧ್ಯವಿಲ್ಲ ಎಂದು ನಾರದನು ಅಂದುಕೊಂಡನು.

೨೦. ಆ ಜನಾರ್ದನನ ಕೆಲಸವೇ ಇದಿರಬೇಕು. ಹಾಗಿಲ್ಲದಿದ್ದರೆ ನನಗೆ ಈ ಕಪಿ ಮುಖವು ಬರಲು ಕಾರಣವೇನು. ಎಂಬದಾಗಿ ಪರ್ವತನು ಯೋಚಿಸತೊಡಗಿದನು.

೨೧. ಆಗ ರಾಜನು ನಾರದನನ್ನೂ ಪರ್ವತನನ್ನೂ ನಮಸ್ಕರಿಸಿ ಸ್ವಾಮಿ ನೀವು ಕನ್ಯೆಯನ್ನು ಮದುವೆಯಾಗಲು ಬಂದಿದ್ದರೆ ಸುಮ್ಮನೆ ಕುಳಿತಿರದೆ ಇದೇನು ಕೆಲಸವನ್ನು ಮಾಡುತ್ತಿರುವಿರಿ? ಸುಮ್ಮನೆ ಕುಳಿತುಕೊಳ್ಳಿರಿ.

೨೨-೨೩. ರಾಜನು ಹೀಗೆಂದೆನ್ನುತ್ತಲೂ ಆ ಇಬ್ಬರು ಋಷಿಗಳಿಗೂ ಕೋಪ ಬಂದು ಎಲೈ ರಾಜನೆ! ಈಗ ನೀನೇ ನಮ್ಮನ್ನು ಹೀಗೆ ಮೋಸಪಡಿಸುತ್ತಲಿದ್ದೀಯೆ. ನಾವುಗಳು ಮೋಸಮಾಡುತ್ತಿಲ್ಲ. ನಿನ್ನ ಈ ಮಗಳು ನಮ್ಮಿಬ್ಬರಲ್ಲಿ ಒಬ್ಬನನ್ನು ವರಿಸಲಿ ಎಂದರು.

ತತಃ ಸಾ ಕನ್ಯಕಾ ಭೂಯಃ ಪ್ರಣಿಪತ್ಯ ಚ ದೇವತಾಂ ।
ಪಿತ್ರಾ ನಿಯುಕ್ತಾ ಸಹಸಾ ಮುನಿಶಾಪಭಯಾದ್ದ್ವಿಜ ॥ ೨೪ ॥

ಮಾಲಾಮಾದಾಯ ತಿಷ್ಠಂತೀ ತಯೋರ್ಮಧ್ಯೇ ಸಮಾಹಿತಾ ।
ಪೂರ್ವವತ್ಪುರುಷಂ ದೃಷ್ಟ್ವಾ ಮಾಲ್ಯಂ ತಸ್ಮೈ ದದೌ ಹಿ ಸಾ ॥ ೨೫ ॥

ಅನಂತರಂ ಚ ಸಾ ಕನ್ಯಾ ದೃಷ್ಟಾ ನ ಮನುಜೈಃ ಪುರಃ ।
ತತೋ ನಾದಃ ಸಮುಭಿವತ್ ಕಿಮೇತದಿತಿ ವಿಸ್ಮಯಾತ್ ॥ ೨೬ ॥

ತಾಮಾದಾಯ ಗತೋ ವಿಷ್ಣುಃ ಸ್ವಸ್ಥಾನಂ ಪುರುಷೋತ್ತಮಃ ।
ಪುರಾತದರ್ಥ ಮನಿಶಂ ತಪಸ್ತಪ್ತ್ವಾ ವರಾಂಗನಾ ॥ ೨೭ ॥

ಶ್ರೀಮತೀಯಂ ಸಮುತ್ಪನ್ನಾ ಸಾ ಗತಾ ಚ ತಥಾ ಹರಿಂ ।
ತಾವುಭೌ ಮುನಿಶಾರ್ದೂಲೌ ಧಿಕ್ತ್ವಾಮಿತ್ಯೇವ ದುಃಖಿತೌ ॥ ೨೮ ॥

---

೨೪–೨೫. ಆಗ ಆ ದೊರೆಯು ಋುಷಿಗಳ ಶಾಪದ ಭಯದಿಂದ ಮತ್ತೆ ಮಗಳಿಗೆ ಹೋಗಿ ಯಾರಾದರೂ ಒಬ್ಬರನ್ನು ವರಿಸೆಂದು ಹೇಳಲು ಆಕೆಯು ದೇವರಿಗೆ ನಮಸ್ಕರಿಸಿ ಮತ್ತೆ ಮಾಲೆಯನ್ನು ತೆಗೆದುಕೊಂಡು ಹೊರಟು ಮೊದಲಿನಂತೆ ಅವರ ಮಧ್ಯದಲ್ಲಿ ಒಬ್ಬ ಸುಂದರನು ಕಂಡು ಬರಲು ಅವನಿಗೆ ಆ ಮಾಲೆಯನ್ನು ಹಾಕಿದಳು.

೨೬. ಅನಂತರ ಆ ಕನ್ಯೆಯು ಅಲ್ಲಿರುವ ಮನುಷ್ಯರಾರಿಗೂ ಗೋಚರ ಳಾಗಲೇ ಇಲ್ಲ. ನಾರದನು ಆಶ್ಚರ್ಯಪಡುತ್ತ ಇದೇನಾಯಿತು? ಎಂದು ಯೋಚಿ ಸುತ್ತಿದ್ದನು.

೨೭. ವಿಷ್ಣುವು ಆಕೆಯನ್ನು ಕರೆದುಕೊಂಡು ತನ್ನ ಸ್ಥಾನವಾದ ವೈಕುಂಠಕ್ಕೆ ಹೊರಟು ಹೋದನು. ಹಿಂದೆ ಒಬ್ಬಳು ಉತ್ತಮ ಹೆಂಗಸು ವಿಷ್ಣುವನ್ನು ಹೊಂದ ಬೇಕೆಂದು ತಪಸ್ಸುಮಾಡುತ್ತಿದ್ದು ಈ ಶ್ರೀಮತಿಯಾಗಿ ಹುಟ್ಟಿದ್ದಳು. ಅಂತೆಯೇ ಅವಳು ಹರಿಯನ್ನು ಸೇರಿದಳು.

೨೮-೨೯. ಅನಂತರ ದೇವರ್ಷಿಗಳಿಬ್ಬರೂ ಅಂಬರೀಷನನ್ನು ನಿನಗೆ ಧಿಕ್ಕಾರ ವಿರಲಿ ಎಂದು ಹೇಳಿ ತಾವು ದುಃಖಪಡುತ್ತ ವಾಸುದೇವನನ್ನು ನೋಡಲು ವೈಕುಂಠಕ್ಕೆ

ವಾಸುದೇವಂ ಪ್ರತಿ ತದಾ ಜಗ್ಮತುರ್ಭವನಂ ಹರೇಃ ।
ತಾವಾಗತೌ ಸಮೀಕ್ಷ್ಯಾಹ ಶ್ರೀಮತೀಂ ಭಗವಾನ್ ಹರಿಃ ॥ ೨೯ ॥

ಮುನಿಶ್ರೇಷ್ಠೌ ಸಮಾಯಾತೌ ಗೂಹಸ್ವಾತ್ಮಾನಮತ್ರ ವೈ ।
ತಥೇತ್ಯುಕ್ತ್ವಾ ಚ ಸಾ ದೇವೀ ಪ್ರಹಸಂತೀ ಚಕಾರ ಹ ॥ ೩೦ ॥

ನಾರದಃ ಪ್ರಣಿಪತ್ಯಾಗ್ರೇ ಪ್ರಾಹ ದಾಮೋದರಂ ಹರಿಂ ।
ಕಿಮಿದಂ ಕೃತವಾನದ್ಯ ಮಮ ತ್ವಂ ಪರ್ವತಸ್ಯ ಚ ॥ ೩೧ ॥

ತ್ವಮೇವ ನೂನಂ ಗೋವಿಂದ ಕನ್ಯಾಂ ತಾಂ ಹೃತವಾನಸಿ ।
ತಚ್ಛ್ರುತ್ವಾ ಪುರುಷೋ ವಿಷ್ಣುಃ ಪಿಧಾಯ ಶ್ರೋತ್ರಮುಚ್ಯತಃ ॥ ೩೨ ॥

ಪಾಣಿಭ್ಯಾಂ ಪ್ರಾಹ ಭಗವಾನ್ ಭವತಾ ಕಿಮುದೀರಿತಂ ।
ಕಾಮಪಾದೋ ನ ಭಾವೋಽಯಂ ಮುನಿವೃತ್ತೇರಹೋ ಕಿಲ ॥ ೩೩ ॥

---

ಹೋದರು. ಅವರಿಬ್ಬರೂ ಬಂದುದನ್ನು ನೋಡಿ ಭಗವಂತನಾದ ಹರಿಯು ಶ್ರೀಮತಿಯನ್ನು ಕರೆದು ಇಂತೆಂದನು.

೩೦. ಎಲೈ ಶ್ರೀಮತಿಯೇ! ಆ ಮುನಿಶ್ರೇಷ್ಠರು ಬಂದರೆ, ನೀನು ಇಲ್ಲಿ ಎಲ್ಲಿಯಾದರೂ ಅವರಿಗೆ ಕಾಣದಂತೆ ಮರೆಯಾಗಿರು ಎನ್ನಲು ಆಕೆಯು ನಗುತ್ತ ಹಾಗೆ ಆಗಲೆಂದು ಹೇಳಿ ಅಂತೆಯೇ ಮಾಡಿದಳು.

೩೧. ನಾರದನು ಆ ವಿಷ್ಣುವಿಗೆ ನಮಸ್ಕರಿಸಿ ಎಲೈ ದಾಮೋದರನೆ! ನನಗೂ ಪರ್ವತನಿಗೂ ನೀನು ಏನುಮಾಡಿ ಬಿಟ್ಟೆ?

೩೨. ಎಲೈ ಗೋವಿಂದನೆ! ಆ ಕನ್ಯೆಯನ್ನು ನೀನೇ ಅಪಹರಿಸಿದ್ದೀಯೆ ಎಂದನು. ಅದನ್ನು ಕೇಳಿ ವಿಷ್ಣುವು ಕೈಗಳಿಂದ ಕಿವಿಯನ್ನು ಮುಚ್ಚಿಕೊಂಡು ನಾರದನೆ! ನೀವೇನೇನನ್ನು ಹೇಳಿದೆ?

೩೩. ಇದು ನೀನು ಸುಮ್ಮನೆ ಹೇಳಿದ ಮಾತಷ್ಟೆ? ಮುನಿಗೆ ಯೋಗ್ಯವಲ್ಲದ ಮಾತು ತಾನೆ? ಎಂದನು. ಇದನ್ನು ಕೇಳಿ ನಾರದನು ವಾಸುದೇವನನ್ನು ಕುರಿತು ಇಂತೆಂದನು.

ಏವಮುಕ್ತೋ ಮುನಿಃ ಪ್ರಾಹ ವಾಸುದೇವಂ ಸ ನಾರದಃ ।
ಕರ್ಣಮೂಲೇ ಮಮ ಕಥಂ ಗೋಲಾಂಗೂಲ ಮುಖಂತ್ವಿತಿ ॥ ೩೪ ॥

ತದಾಕರ್ಣ್ಯ ಮಹಾಬುದ್ಧಿಃ ದೇವೋ ನಾರಾಯಣೋ ಹರಿಃ ।
ಕರ್ಣಮೂಲೇ ತಮಾಹೇದಂ ವಾನರಾಸ್ಯಂ ಕೃತಂ ಮಯಾ ॥ ೩೫ ॥

ಪರ್ವತಸ್ಯ ತಥಾ ವಿಪ್ರ ಗೋಲಾಂಗೂಲಮುಖಂ ತವ ।
ಯಥಾ ಭವಾನ್ ತಥಾ ಸೋಽಪಿ ಪ್ರಾರ್ಥಯಾಮಾಸ ನಿರ್ಜನೇ ॥ ೩೬ ॥

ಮಾಮೇವಂ ಭಕ್ತಿವಶಗಸ್ತಥಾಸ್ಮ್ಯಕರವಂ ಮುನೇ ।
ನ ಸ್ವೇಚ್ಛಯಾ ಕೃತಂ ತದ್ವಾಂ ಪ್ರಿಯಾರ್ಥಂ ನಾನ್ಯಥಾತ್ವಿತಿ ॥ ೩೭ ॥

ಯಾಚತೇ ಯಚ್ಚ ಯಶ್ಚೈವ ತಚ್ಚ ತಸ್ಯ ದದಾಮ್ಯಹಂ ।
ನ ದೋಷೋತ್ರ ಗುಣೋ ವಾಪಿ ಯುವಯೋರ್ಮಮ ವಾ ದ್ವಿಜ ॥ ೩೮ ॥

---

೩೪-೩೬. ಆ ಸ್ವಾಮಿಯು ಕಿವಿಯಲ್ಲಿ ನನಗೇಕೆ ಕೊಂಡೆಮುಸುವನ ಮುಖವಾಯಿತು? ಎಂದನು. ಅದನ್ನು ಕೇಳಿ ಮಹಾ ಬುದ್ಧಿಯುಳ್ಳ ವಿಷ್ಣುವು ಅವನ ಕಿವಿಯಲ್ಲಿ ನಿನ್ನ ಮಾತಿನಂತೆ ಆ ಪರ್ವತನಿಗೆ ಕಪಿಯ ಮುಖವನ್ನೂ ಅವನ ಮಾತಿನಂತೆ ನಿನಗೆ ಕೊಂಡೇಮುಸುವನ ಮುಖವನ್ನೂ ಮಾಡಿದೆನು. ನೀವಿಬ್ಬರೂ ನನಗೆ ಭಕ್ತರು. ನೀವಿಬ್ಬರೂ ಬಂದು ನನ್ನನ್ನು ಕೇಳಿಕೊಂಡಿರುವಿರಿ. ನನಗೆ ಅವನ ಹಾಗೆ ನೀನು. ನಿನ್ನ ಹಾಗೆ ಅವನೂ ಕೂಡ ಅಲ್ಲವೆ? ನೀವಿಬ್ಬರೂ ನನ್ನನ್ನು ಗುಟ್ಟಾಗಿ ಒಬ್ಬರೂ ಇಲ್ಲದಿರುವಾಗ ಕೇಳಿಕೊಂಡಿರಿ.

೩೭. ನಾನು ಭಕ್ತರಿಗೆ ಅಧೀನನು ನನ್ನನ್ನು ನೀವು ಕೇಳಿಕೊಂಡುದರಿಂದಲೇ ಹಾಗೆ ಮಾಡಿದೆನು. ಸ್ವೇಚ್ಛೆಯಿಂದ ಮಾಡಲಿಲ್ಲ. ನಿನಗೆ ಒಳ್ಳೆಯದಾಗಲೆಂದು ಮಾಡಿದೆನೇ ಹೊರತು ಬೇರೆ ತಿಳಿಯಬೇಡಿ.

೩೮. ನಾನು ಭಕ್ತಪರಾಧೀನನಾದುದರಿಂದ ಯಾವನು ಯಾವುದನ್ನು ಕೇಳುತ್ತಾನೆಯೋ ಅವನಿಗೆ ಅದನ್ನು ಕೊಡುತ್ತೇನೆ. ಇದರಲ್ಲಿ ನಿಮ್ಮದಾಗಲಿ ನನ್ನದಾಗಿ ದೋಷವಾಗಲಿ ಗುಣವಾಗಲಿ ಯಾವುದೂ ಇರುವುದಿಲ್ಲ.

ಪರ್ವತೋಽಪಿ ತಥಾ ಪ್ರಾಹ ತಸ್ಯಾಪ್ಯೇವಂ ಜಗಾದ ಸಃ ।
ಶೃಣ್ವತೋರುಭಯೋಸ್ತತ್ರ ಪ್ರಾಹ ದಾಮೋದರೋ ವಚಃ ॥ ೩೯ ॥

ಪ್ರಿಯಂ ಭವತೋ ಕೃತವಾನ್ ಸತ್ಯೇನಾಯುಧಮಾಲಭೇ ।
ನಾರದಃ ಪ್ರಾಹ ಧರ್ಮಾತ್ಮಾ ಆವಯೋರ್ಮಧ್ಯತಃ ಸ್ಥಿತಃ ॥ ೪೦ ॥

ಧನುಷ್ಪಾಣಿ ದ್ವಿಭುಜಃ ಕೋ ನು ತಾಂ ಹೃತ್ವಾ ಗತವಾನ್ ಕಿಲ ।
ತಚ್ಛ್ರುತ್ವಾ ವಾಸುದೇವೋಽಸೌ ಪ್ರಾಹ ತೌ ಮುನಿಸತ್ತಮೌ ॥ ೪೧ ॥

ಮಾಯಾವಿನೋ ಮಹಾತ್ಮಾನೌ ಬಹವಃ ಸಂತಿ ಸತ್ತಮೌ ।
ತತ್ರ ಸಾ ಶ್ರೀಮತೀ ದೇವೀ ಹೃತಾ ಕೇನಾಪಿ ಸುವ್ರತೌ ॥ ೪೨ ॥

ಚಕ್ರಪಾಣಿರಹಂ ನಿತ್ಯಂ ಚತುರ್ಬಾಹುರಿತಿಸ್ಥಿತಿಃ ।
ತಸ್ಮಾನ್ನಾಹಮತಥ್ಯಂ ವೈ ಭವದ್ಭ್ಯಾಂ ವಿದಿತಂ ಹಿ ತತ್ ॥ ೪೩ ॥

---

೩೯. ಪರ್ವತನೂ ಕೂಡ ಸ್ವಾಮಿಯನ್ನು ಹೀಗೆ ಕೇಳಲು ಅವನಿಗೂ ಆ ಸ್ವಾಮಿಯು ಹೀಗೆಯೇ ಹೇಳಿದನು. ಅವರಿಬ್ಬರ ಮಾತನ್ನೂ ಕೇಳಿ ಇಬ್ಬರನ್ನೂ ಕುರಿತು ಹರಿಯು ಇಂತೆಂದು ಹೇಳಿದನು.

೪೦-೪೧. ಎಲೈ ಮುನಿಗಳಿರ! ನಿಮಗೆ ಅನುಕೂಲವನ್ನೇ ಮಾಡಿದ್ದೇನೆ. ಸತ್ಯವಾಗಿಯೂ ಆಯುಧವನ್ನು ಮುಟ್ಟಿ ಹೇಳುತ್ತೇನೆ. ಎನ್ನಲು ನಾರದನು ಅದನ್ನು ಕೇಳಿ ನಮ್ಮಗಳ ಮಧ್ಯದಲ್ಲಿ ಧನುಸ್ಸನ್ನು ಹಿಡಿದುಕೊಂಡು ಎರಡು ಭುಜಗಳನ್ನು ಹೊಂದಿ ಇದ್ದುಕೊಂಡಿದ್ದು ಆಕೆಯನ್ನು ಅಪಹರಿಸಿಕೊಂಡು ಹೋದನಲ್ಲ ಅವನಾರು ? ಎಂದನು. ಅದನ್ನು ಕೇಳಿ ವಾಸುದೇವನು ಇಂತೆಂದನು.

೪೨. ಎಲೈ ಮಹಾತ್ಮರಾದ ಋಷಿವರ್ಯರೆ! ಲೋಕದಲ್ಲಿ ಮಾಯಾವಿಗಳಾದವರು ಬಹುಜನರಿರುವರು. ಅವರಲ್ಲಿ ಯಾವನೋ ಆ ಶ್ರೀಮತಿಯನ್ನು ಅಪಹರಿಸಿಕೊಂಡು ಹೋಗಿರಬೇಕು.

೪೩. ನಾನು ಯಾವಾಗಲೂ ಚಕ್ರವನ್ನೇ ಹಿಡಿದಿರುತ್ತೇನೆ. ನನಗೆ ನಾಲ್ಕು ತೋಳುಗಳಿವೆ. ಆದ್ದರಿಂದ ಅವನು ನಾನಲ್ಲ. ಇದು ಸುಳ್ಳಲ್ಲ. ಇದೆಲ್ಲವೂ ನಿಮಗೇ ಗೊತ್ತಿದೆ.

ಇತ್ಯುಕ್ತೌ ಪ್ರಣಿಪತ್ಯೈನಮೂಚತುಃ ಪ್ರೀತಮಾನಸೌ ।
ಕೋತ್ರದೋಷಸ್ತ್ವವ ವಿಭೋ ನಾರಾಯಣ ಜಗತ್ಪತೇ ॥ ೪೪ ॥

ದೌರಾತ್ಮ್ಯಂ ತು ನೃಪಸ್ಯೈವ ಮಾಯಾಂ ಹಿ ಕೃತವಾನಸೌ ।
ಇತ್ಯುಕ್ತ್ವಾ ಜಗ್ಮತುಸ್ತಸ್ಮಾನ್ಮುನೀ ನಾರದ ಪರ್ವತೌ ॥ ೪೫ ॥

ಅಂಬರೀಷಂ ಸಮಾಸಾದ್ಯ ಶಾಪೇನೈನಮಯೋಜಯತ್ ।
ನಾರದಃ ಪರ್ವತಶ್ಚೈವ ಯಸ್ಮಾದಾವಾಮಿಹಾಗತೌ ॥ ೪೬ ॥

ಆಹೂಯ ಪಶ್ಚಾದನ್ಯಸ್ಮೈ ಕನ್ಯಾಂ ತ್ವಂ ದತ್ತವಾನಸಿ ।
ಮಾಯಾಯೋಗೇನ ತಸ್ಮಾತ್ತ್ವಾಂ ತಮೋಽಜ್ಞಾಭಿಭವಿಷ್ಯತಿ ॥ ೪೭ ॥

ತೇನ ನಾತ್ಮಾನಮತ್ಯರ್ಥಂ ಯಥಾವತ್ತ್ವಂ ಹಿ ವೇತ್ಸ್ಯಸಿ ।
ಏವಂ ಶಾಪೇ ಪ್ರವೃತ್ತೇ ತು ತಮೋರಾಶಿರಥೋತ್ಥಿತಃ ॥ ೪೮ ॥

---

೪೪–೪೫. ಆಗ ಅವರಿಬ್ಬರೂ ಸಂತೋಷಪಟ್ಟುಕೊಂಡು ಸ್ವಾಮಿಯನ್ನು ಕುರಿತು ಎಲೈ ಜಗತ್ಪತಿಯಾದ ನಾರಾಯಣನೇ! ನಿನ್ನದೇನು ತಪ್ಪಿದೆ? ಈ ದುಷ್ಟತನವು ರಾಜನದೇ ಇರಬೇಕು. ಅವನೇ ಏನೋ ಮಾಯೆಯನ್ನು ಮಾಡಿರುವನು ಎಂದು ಹೇಳಿ ಆವನಿಗೆ ನಮಸ್ಕರಿಸಿ ಅವರು ಅಲ್ಲಿಂದ ಹೊರಟರು.

೪೬. ಅಲ್ಲಿಂದ ಅಂಬರೀಷನ ಬಳಿಗೆ ಬಂದು ಅವನಿಗೆ ಶಾಪವನ್ನ ಕೊಟ್ಟರು. ನಾವು ಯೋಗ್ಯರೂ ಮಹಿಮರೂ ಆದ ಪರ್ವತ ನಾರದರು ಬಂದಿದ್ದೆವು. ಇಂತಹ ನಮ್ಮನ್ನು ಕನ್ಯೆಯನ್ನು ಕೊಡುತ್ತೇನೆಂದು ಬರಹೇಳಿ ಬೇರೆಯೊಬ್ಬನಿಗೆ ಕೊಟ್ಟಿದ್ದೀಯೆ.

೪೭. ನೀನು ಈ ರೀತಿಯಾಗಿ ಮಾಯೆಯನ್ನು ಮಾಡಿದುದರಿಂದ ನಿನ್ನನ್ನು ತಮಸ್ಸು (ಕತ್ತಲೆಯೂ) ಅಜ್ಞಾನವೂ ಹೊಂದಿಕೊಳ್ಳುತ್ತವೆ. ಅದರಿಂದ ನಿನ್ನನ್ನು ನೀನೇ ತಿಳಿದುಕೊಳ್ಳಲಾರದಂತಾಗು. ಯಥಾರ್ಥ ಜ್ಞಾನದ ಅರಿವಾಗಬೇಡ.

೪೮. ಅವರು ಹೀಗೆ ಶಾಪವನ್ನು ಕೊಡಲು ಒಡನೆಯೇ ಅಲ್ಲಿ ಕತ್ತಲೆಯ ರಾಶಿಯೇ ಎದ್ದಿತು. ಆ ರಾಜನನ್ನು ಆವರಿಸಿಕೊಳ್ಳಲು ಬಂದಿತು. ಆಗ ವಿಷ್ಣು ಚಕ್ರವು ವಿಷ್ಣುವಿನ ವರದಂತೆ ಆ ರಾಜನನ್ನು ಕಾಯಲು ಪ್ರತ್ಯಕ್ಷವಾಗಿ ಬಂದಿತು.

ನೃಪಂ ಪ್ರತಿ ತತಶ್ಚಕ್ರಂ ವಿಷ್ಣೋಃ ಪ್ರಾದುರಭೂತ್ ಕ್ಷಣಾತ್ |
ಚಕ್ರವಿತ್ರಾಸಿತಂ ಘೋರಂ ತಾವುಭಾವಭ್ಯಗಾತ್ತಮಃ || ೪೯ ||

ತತಸ್ಸಂತ್ರಸ್ತ ಸರ್ವಾಂಗೌ ಧಾವಮಾನೌ ಮಹಾಮುನೇ |
ಪೃಷ್ಠತಶ್ಚಕ್ರಮಾಲೋಕ್ಯ ತನೋರಾಶಿಂ ಚ ದುರ್ಮದಂ || ೫೦ ||

ಕನ್ಯಾಸಿದ್ಧಿರಹೋ ಪ್ರಾಪ್ತಾಸ್ತ್ಯಾವಯೋರಿತಿವೇಗಿತೌ |
ಲೋಕಾಲೋಕಾಂತಮನಿಶಂ ಧಾವಮಾನೌ ತನೋರ್ದಿತೌ || ೫೧ ||

ತ್ರಾಹಿ ತ್ರಾಹೀತಿ ಗೋವಿಂದಂ ಭಾಷಮಾಣೌ ಭಯಾರ್ದಿತೌ |
ವಿಷ್ಣುಲೋಕಂ ತತೋ ಗತ್ವಾ ನಾರಾಯಣ ಜಗತ್ಪತೇ || ೫೨ ||

ವಾಸುದೇವ ಹೃಷೀಕೇಶ ಪದ್ಮನಾಭ ಜನಾರ್ದನಃ|
ತ್ರಾಹ್ಯಾವಾಂ ಪುಂಡರೀಕಾಕ್ಷ ನಾಥೋಸಿ ಪುರುಷೋತ್ತಮ || ೫೩ ||

---

೪೯-೫೦. ಆ ಚಕ್ರವು ಮೇಲಕ್ಕೆದ್ದು ಕತ್ತಲೆಯನ್ನು ತೊಂದರೆಪಡಿಸಲು ಆ ಕಗ್ಗತ್ತಲೆಯು ಆ ಋಷಿಗಳಿಬ್ಬರನ್ನೂ ಆವರಿಸಿಕೊಳ್ಳಲು ಹೋಯಿತು. ಈ ಕತ್ತಲೆಯು ತಮ್ಮನ್ನು ಆವರಿಸಿಕೊಳ್ಳಲು ಬರುತ್ತಿರುವುದನ್ನು ನೋಡಿ ಓಡಲು ಮೊದಲಿಟ್ಟರು. ಹಿಂದು ಹಿಂದಕ್ಕೆ ನೋಡುತ್ತಿರಲು ಆ ಕತ್ತಲೆಯು ತಮ್ಮನ್ನೂ ಚಕ್ರವು ಕತ್ತಲೆಯನ್ನೂ ಓಡಿಸಿಕೊಂಡು ಬರುತ್ತಲಿರುವುದನ್ನು ನೋಡಿದರು.

೫೧-೫೨. ಓಹೋ ನಮಗೆ ಕನ್ಯೆಯ ಸಿದ್ಧಿಯು ಉಂಟಾಯಿತು ಎಂಬದಾಗಿ ಹೇಳುತ್ತ ವೇಗದಿಂದ ಒಂದು ಲೋಕದಿಂದ ಮತ್ತೊಂದು ಲೋಕಕ್ಕೂ ಅಲ್ಲಿಂದ ಮುಂದಿನ ಲೋಕಕ್ಕೂ ನಿಲ್ಲದೆ ಓಡಿಯಾಡುತ್ತ ಇದ್ದರು. ಆದರೂ ಆ ತಮಸ್ಸಿನ ಭಯವು ತಪ್ಪಲೇ ಇಲ್ಲ. ಕೊನೆಗೆ ಈ ಭಯದಿಂದ ವಿಷ್ಣುಲೋಕಕ್ಕೆ ಓಡಿಹೋಗಿ ಎಲೈ ನಾರಾಯಣನೆ! ಜಗತ್ಪತಿಯೇ ತ್ರಾಹಿ, ತ್ರಾಹಿ, ಕಾಪಾಡು ಕಾಪಾಡು ಎಂದು ಕೂಗಿಕೊಳ್ಳುತ್ತಿದ್ದರು.

೫೩. ವಾಸುದೇವನೆ! ಹೃಷೀಕೇಶನೆ! ಪದ್ಮನಾಭನೆ! ಜನಾರ್ದನನೆ! ಪುಂಡರೀಕಾಕ್ಷನೆ! ಪುರುಷೋತ್ತಮನೆ! ನಮ್ಮಿಬ್ಬರನ್ನೂ ಕಾಪಾಡು ಎಂಬದಾಗಿ ಆ ನಾರದ ಪರ್ವತರು ಬೇಡಿಕೊಂಡರು.

**ಇತ್ಯೂಚತುರ್ವಾಸುದೇವಂ ಮುನೀ ನಾರದಪರ್ವತೌ ।**
**ತತೋ ನಾರಾಯಣೋಽಚಿಂತ್ಯಃ ಶ್ರೀಮಾನ್ ಶ್ರೀವತ್ಸಲಾಂಛನಃ ॥ ೩೪ ॥**

**ನಿವಾರ್ಯ ಚಕ್ರಂ ಧ್ವಾಂತಂ ಚ ಭಕ್ತಾನುಗ್ರಹಕಾಮ್ಯಯಾ ।**
**ಅಂಬರೀಷಶ್ಚ ಮದ್ಭಕ್ತಸ್ತಥೇಮೌ ಮುನಿಸತ್ತಮೌ ॥ ೩೫ ॥**

**ಅನಯೋರ್ನೃಪಸ್ಯ ಚ ತಥಾ ಹಿತಂ ಕಾರ್ಯಂ ಮಯಾ ಪುನಃ ।**
**ಆಹೂಯ ತೌ ತತಃ ಶ್ರೀಮಾನ್ ಗಿರಾ ಪ್ರಹ್ಲಾದಯನ್ ಹರಿಃ ॥ ೩೬ ॥**

**ಉವಾಚ ಭಗವಾನ್ ವಿಷ್ಣುಃ ಶ್ರೂಯತಾಮಿತಿ ಮೇ ವಚಃ ।**
**ಶ್ರೂಯತಾಂ ಮುನಿಶಾರ್ದೂಲೌ ಭಕ್ತಸಂರಕ್ಷಣಾಯ ಮೇ ॥ ೩೭ ॥**

**ಅಪರಾದ್ಧಂ ಚ ಚಕ್ರೇಣ ಕ್ಷಮಾಶೀಲಾ ಹಿ ಸಾಧವಃ ।**
**ತತಸ್ತೌ ಮುನಿಶಾರ್ದೂಲೌ ಮಾಯಾಂ ತಸ್ಯಾವಬುದ್ಧ್ಯ ಚ ॥ ೩೮ ॥**

---

೩೪. ಆಗ ಅಚಿಂತ್ಯ ಪ್ರಭಾವವುಳ್ಳ ಶ್ರೀವತ್ಸನೆಂಬ ಲಾಂಛನವನ್ನು ಹೊಂದಿರುವ ಶ್ರೀಮನ್ನಾರಾಯಣನು ಆ ಚಕ್ರವನ್ನೂ ಘೋರಾಂಧಕಾರವನ್ನೂ ಭಕ್ತರಿಗೆ ಅನುಗ್ರಹಮಾಡಬೇಕೆಂಬ ಇಚ್ಛೆಯಿಂದ ನಿವಾರಣೆ ಮಾಡಿದನು.

೩೫. ಅಂಬರೀಷನು ನನಗೆ ಭಕ್ತನು. ಅವನಂತೆಯೇ ಈ ಮುನಿಗಳಿಬ್ಬರೂ ನನಗೆ ಭಕ್ತರು. ಇವರಿಗೂ ಆ ರಾಜನಿಗೂ ಹಿತವನ್ನುಂಟುಮಾಡಬೇಕು ಎಂದು ಯೋಚಿಸಿದನು.

೩೬–೩೭. ಆಗ ಆ ಹರಿಯು ಆ ಮುನಿಗಳನ್ನು ಕರೆದು ಒಳ್ಳೆಯ ಸಂತೋಷಕರವಾದ ಮಾತುಗಳನ್ನಾಡುತ್ತ ಎಲೈ ಋಷಿಗಳೇ! ಈ ನನ್ನ ಮಾತನ್ನು ಕೇಳಿರಿ. ಈ ನನ್ನ ಭಕ್ತರನ್ನು ರಕ್ಷಿಸುವುದಕ್ಕೋಸ್ಕರ ಈ ಚಕ್ರವು ಅಪರಾಧವನ್ನು ಮಾಡಿದೆ. ತಾವುಗಳು ಅದನ್ನು ಕ್ಷಮಿಸಿರಿ. ಸಾಧುಗಳು ಕ್ಷಮೆಯನ್ನೇ ಧನವಾಗಿ ಉಳ್ಳವರಷ್ಟೆ!

೩೮. ಆಗ ಆ ಋಷಿಗಳಿಬ್ಬರೂ ಇದು ವಿಷ್ಣುವಿನ ಮಾಯೆಯೆಂದು ತಿಳಿದು ಕೋಪಗೊಂಡು ಆತನನ್ನು ಕುರಿತು ಇಂತು ಶಾಪವನ್ನು ಕೊಟ್ಟರು.

ದದತುಶ್ಚ ತತಶ್ಶಾಪಂ ವಿಷ್ಣುಮುದ್ದಿಶ್ಯ ಕೋಪನೌ ।
ಶ್ರೀಮತೀ ಹರಣಂ ವಿಷ್ಣೋ ಯತ್ಕೃತಂ ಛದ್ಮನಾ ತ್ವಯಾ ॥ ೫೯ ॥

ಯಯಾ ಮೂರ್ತ್ಯಾ ತಥೈವ ತ್ವಂ ಜಾಯೇಥಾ ಮಧುಸೂದನ ।
ಅಂಬರೀಷಸ್ಯಾನ್ವವಾಯೇ ರಾಜ್ಞೋ ದಶರಥಸ್ಯ ಹಿ ॥ ೬೦ ॥

ಪುತ್ರಸ್ತ್ವಂ ಭವಿತಾ ಪುತ್ರೀ ಶ್ರೀಮತೀ ಧರಣೀಪ್ರಜಾ ।
ಭವಿಷ್ಯತಿ ವಿದೇಹಶ್ಚ ಪ್ರಾಪ್ಯ ತಾಂ ಪಾಲಯಿಷ್ಯತಿ ॥ ೬೧ ॥

ರಾಕ್ಷಸಾಪಶದಃ ಕಶ್ಚಿತ್ತಾಂ ತೇ ಭಾರ್ಯಾಂ ಹರಿಷ್ಯತಿ ।
ಯತೋ ರಾಕ್ಷಸ ಧರ್ಮೇಣ ಹೃತಾ ಚ ಶ್ರೀಮತೀ ಶುಭಾ ॥ ೬೨ ॥

ಅತಸ್ತೇ ರಕ್ಷಸಾ ಭಾರ್ಯಾ ಹರ್ತವ್ಯಾ ಛದ್ಮನಾಚ್ಯುತ ।
ಯಥಾ ಪ್ರಾಪ್ತಂ ಮಹದ್ದುಃಖಮಾವಾಭ್ಯಾಂ ಶ್ರೀಮತೀ ಕೃತೇ ॥ ೬೩ ॥

---

೫೯. ಎಲೈ ವಿಷ್ಣುವೆ! ನೀನು ಕಪಟದಿಂದ ಶ್ರೀಮತಿಯ ಹರಣವನ್ನು ಮಾಡಿದ್ದೀಯೆ. ಯಾವರೀತಿಯಾದ ಮೂರ್ತಿಯಿಂದ ಈಕೆಯನ್ನು ಕದ್ದಿರುವೆಯೋ ಅದೇರೀತಿಯಾಗಿ ಭೂಮಿಯಲ್ಲಿ ಜನ್ಮವನ್ನು ತಾಳು.

೬೦. ಅಂಬರೀಷನ ವಂಶದಲ್ಲಿ ಹುಟ್ಟಿದ ರಾಜನಾದ ದಶರಥನಿಗೆ ನೀನು ಮಗನಾಗಿ ಹುಟ್ಟುತ್ತೀಯೆ. ಶ್ರೀಮತಿಯು ಭೂದೇವಿಯ ಮಗಳಾಗಿ ಹುಟ್ಟಿ ವಿದೇಹನಿಗೆ ಸಿಕ್ಕುತ್ತಾಳೆ. ಆತನು ಆಕೆಯನ್ನು ಕಾಪಾಡುತ್ತಾನೆ.

೬೨. ನೀನು ಆ ಶ್ರೀಮತಿಯನ್ನು ರಾಕ್ಷಸರು ಕದಿಯುವ ರೀತಿಯಲ್ಲಿ ಅಧರ್ಮದಿಂದ ಕದ್ದಿರುವೆಯಾದುದರಿಂದ ನಿನಗೆ ಹೆಂಡತಿಯಾದ ಆ ವಿದೇಹನ ಮಗಳನ್ನು ಒಬ್ಬ ಅಯೋಗ್ಯನಾದ ರಾಕ್ಷಸನು ಕದ್ದುಕೊಂಡು ಹೋಗುತ್ತಾನೆ.

(ಕಪಟದಿಂದ ಕದ್ದವನ ಹೆಂಡತಿಯನ್ನು ಕಪಟದಿಂದ ಕದಿಯುವುದು ಸ್ವಭಾವವೇ ಆಗಿರುವುದು ಆದ್ದರಿಂದಲೇ ನಿನ್ನ ಹೆಂಡತಿಯನ್ನು ಕಪಟದಿಂದ ಆ ರಾಕ್ಷಸನು ಕದಿಯಬೇಕು.)

೬೩–೬೪. ಶ್ರೀಮತಿಗೋಸ್ಕರವಾಗಿ ನಾವು ಹಾಹಾ ಎಂಬದಾಗಿ ಅಳುತ್ತ ಎಷ್ಟು ದುಃಖವನ್ನು ಪಟ್ಟಿವೋ ಅವಳಿಗೋಸ್ಕರ ನೀನು ಅಷ್ಟು ದುಃಖವನ್ನು

ಹಾಹೇತಿ ರುದತಾಲಭ್ಯಂ ತಥಾ ದುಃಖಂ ಚ ತತ್ಕೃತೇ ।
ಇತ್ಯುಕ್ತವಂತೌ ತೌ ವಿಪ್ರೌ ಪ್ರೋವಾಚ ಮಧುಸೂದನಃ ॥ ೬೪ ॥

ಅಂಬರೀಷಸ್ಯಾನ್ವವಾಯೇ ಭವಿಷ್ಯತಿ ಮಹಾಯಶಾಃ ।
ಶ್ರೀಮಾನ್ ದಶರಥೋ ನಾಮ ಭೂಮಿಪಾಲೋತಿಧಾರ್ಮಿಕಃ ॥ ೬೫

ತಸ್ಯಾಹಮಗ್ರಜಃ ಪುತ್ರೋ ರಾಮೋ ನಾಮ ಭವಾಮ್ಯಹಂ ।
ತತ್ರ ಮೇ ದಕ್ಷಿಣೋ ಬಾಹುರ್ಭರತೋ ಭವಿತಾ ಕಿಲ ॥ ೬೬ ॥

ಶತ್ರುಘ್ನೋ ವಾಮಬಾಹುಶ್ಚ ಶೇಷೋಸೌ ಲಕ್ಷ್ಮಣಃ ಸ್ವಯಂ ।
ಋಷಿಶಾಪೋ ನ ಚೈವ ಸ್ಯಾದನ್ಯಥಾ ಚಕ್ರ ಗಮ್ಯತಾಂ ॥ ೬೭ ॥

ಋಷಿಶಾಪ ತಮೋರಾಶೇ ಯದಾ ರಾಮೋ ಭವಾಮ್ಯಹಂ ।
ತತ್ರ ಮಾಂ ಸಮುಪಾಗಚ್ಛ ಗಚ್ಛೇದಾನೀಂ ನೃಪಂ ವಿನಾ ॥ ೬೮ ॥

ತ್ಯಕ್ತ್ವಾಪಿ ಚ ಮುನಿಶ್ರೇಷ್ಠಾವಿತಿ ಸ್ಮ ಪ್ರಾಹ ಮಾಧವಃ ।
ಏವಮುಕ್ತೇ ತಮೋನಾಶಂ ತತ್ ಕ್ಷಣಾಚ್ಚ ಜಗಾಮ ವೈ ॥ ೬೯ ॥

---

ಹೊಂದುವವನಾಗು. ಎಂಬದಾಗಿ ಆ ಮುನಿಗಳು ಶಪಿಸಲು ಮಧುಸೂದನನು ಅವರನ್ನು ನೋಡಿ ಇಂತೆಂದನು.

೬೫-೬೭. ಅಂಬರೀಷನ ವಂಶದಲ್ಲಿ ಯಶಸ್ವಿಯಾದ ಧರ್ಮಿಷ್ಠನಾದ ದಶರಥನೆಂಬ ರಾಜನು ಹುಟ್ಟುವನು. ಅವನಿಗೆ ನಾನು ಮೊದಲನೆಯ ಮಗನಾಗಿ ಹುಟ್ಟಿ ರಾಮನೆಂಬ ಹೆಸರಿನಿಂದ ಪ್ರಸಿದ್ಧನಾಗುವೆನು. ಆಗ ನನ್ನ ಈ ಬಲತೋಳು ಭರತನೆಂಬ ತಮ್ಮನಾಗಿಯೂ ಎಡದ ತೋಳು ಶತ್ರುಘ್ನನೆಂಬ ತಮ್ಮನಾಗಿ ಹುಟ್ಟುವುವು. ಈ ಶೇಷನೇ ಲಕ್ಷ್ಮಣನೆಂಬ ತಮ್ಮನಾಗಿ ಹುಟ್ಟುವನು. ಎಲೈ ಚಕ್ರವೇ! ಋಷಿಯ ಶಾಪವು ವ್ಯರ್ಥವಾಗುವುದಿಲ್ಲ. ನೀನು ಹೋಗು.

೬೮-೬೯. ಎಲೈ ಋಷಿಶಾಪವೆಂಬ ಘೋರವಾದ ಕತ್ತಲೆಯೇ! ನಾನು ರಾಮಾವತಾರವನ್ನು ಮಾಡಿದಾಗ ನನ್ನನ್ನು ಬಂದು ಹೊಂದು. ಈಗ ಆ ಅಂಬರೀಷನಿಗೆ ಹೋಗಿ ಆವರಿಸಬೇಡ. ಹೀಗೆನ್ನಲು ಒಡನೆಯೇ ಆ ಕಗ್ಗತ್ತಲೆಯು ಹೊರಟು ಹೋಯಿತು.

ಆತ್ಮಾರ್ಥಂ ಸಂಚಿತಂ ತೇನ ಪ್ರಭುಣಾ ಭಕ್ತರಕ್ಷಿಣಾ ।
ನಿವಾರಿತಂ ಹರೇಶ್ಚಕ್ರಂ ಯಥಾ ಪೂರ್ವಮತಿಷ್ಠತ ॥ ೭೦ ॥

ಮುನಿಶ್ರೇಷ್ಠೌ ಭಯಾನ್ಮುಕ್ತೌ ಪ್ರಣಿಪತ್ಯ ಜನಾರ್ದನಂ ।
ನಿರ್ಗತೌ ಶೋಕಸಂತಪ್ತೌ ಊಚತುಸ್ತೌ ಪರಸ್ಪರ ॥ ೭೧ ॥

ಅದ್ಯಪ್ರಭೃತಿ ದೇಹಾಂತಮಾವಾಂ ಕನ್ಯಾಪರಿಗ್ರಹಂ ।
ನ ಕರಿಷ್ಯಾವ ಇತ್ಯುಕ್ತ್ವಾ ಪ್ರತಿಜ್ಞಾಯ ಚ ತಾವೃಷೀ ॥ ೭೨ ॥

ಮೌನಧ್ಯಾನಪರೌ ಶುದ್ಧೌ ಯಥಾಪೂರ್ವಂ ವ್ಯವಸ್ಥಿತೌ ।
ಅಂಬರೀಷೋಽಪಿ ರಾಜಾಸೌ ಪರಿಪಾಲ್ಯ ಚ ಮೇದಿನೀಂ ॥ ೭೩ ॥

ಸಭೃತ್ಯಜ್ಞಾತಿಬಂಧೋ ವಿಷ್ಣುಲೋಕಂ ಜಗಾಮ ವೈ ।
ಮಾನಾರ್ಥಮಂಬರೀಷಸ್ಯ ತಥೈವ ಮುನಿಸಿಂಹಯೋಃ ॥ ೭೪ ॥

೭೦. ಭಕ್ತರನ್ನು ರಕ್ಷಿಸುವುದಕ್ಕೋಸ್ಕರ ಪ್ರಯತ್ನಪಟ್ಟು ಆ ಸ್ವಾಮಿಯು ಆ ಮಹರ್ಷಿಗಳ ಶಾಪವನ್ನು ತಾನೇ ತೆಗೆದುಕೊಂಡನು. ಹರಿಯಿಂದ ತಡೆಯಲ್ಪಟ್ಟ ಚಕ್ರವು ಮೊದಲಿನಂತೆ ಅವನನ್ನು ಕಾಪಾಡುತ್ತಲಿದ್ದಿತು.

೭೧. ಈ ಮುನಿ ಶ್ರೇಷ್ಠರು ತಾವು ಹೊಂದಿದ್ದ ತೊಂದರೆಯಿಂದ ಬಿಡಲ್ಪಟ್ಟವರಾಗಿ ಆ ಸ್ವಾಮಿಗೆ ನಮಸ್ಕರಿಸಿ ಹೊರಟುಹೋದರು. ಮತ್ತು ದುಃಖಗೊಂಡ ಅವರಿಬ್ಬರೂ ಒಬ್ಬರಿಗೊಬ್ಬರು ಈ ರೀತಿಯಾಗಿ ಪ್ರತಿಜ್ಞೆ ಮಾಡಿಕೊಂಡರು.

೭೨. ನಾವುಗಳು ಇಲ್ಲಿಂದ ಮೊದಲುಗೊಂಡು ಈ ದೇಹವು ನಾಶವಾಗುವವರೆಗೂ ಮದುವೆಯನ್ನು ಮಾಡಿಕೊಳ್ಳುವುದಿಲ್ಲ. ಎಂಬದಾಗಿ ಪ್ರತಿಜ್ಞೆ ಮಾಡಿ ಶುದ್ಧರಾಗಿ ಮೌನಧ್ಯಾನಗಳಲ್ಲಿ ಆಸಕ್ತರಾಗಿ ಇದ್ದುಕೊಂಡಿದ್ದರು.

೭೩. ರಾಜನಾದ ಅಂಬರೀಷನು ರಾಜ್ಯವನ್ನು ಸುಖವಾಗಿ ಆಳಿ ಅನಂತರ ಜ್ಞಾತಿಗಳು, ಬಂಧುಗಳು, ಆಳುಗಳು ಇವರೊಡನೆ ಸುಖವಾಗಿ ವೈಕುಂಠವನ್ನು ಹೊಂದಿದನು.

೭೪. ಶ್ರೀಮನ್ನಾರಾಯಣನು ಅಂಬರೀಷನಿಗೆ ಗೌರವ ಕೊಡುವುದಕ್ಕೂ ಆ ಋಷಿಗಳ ಶಾಪವನ್ನು ತಿರಸ್ಕರಿಸದಿರುವುದಕ್ಕೂ ದಶರಥನ ಹೊಟ್ಟೆಯಲ್ಲಿ ಹುಟ್ಟಿ ರಾಮನೆಂದು ಪ್ರಸಿದ್ಧನಾಗಿ ಅಜ್ಞಾನದಿಂದ ಬುದ್ಧಿಗೆಟ್ಟನು.

**ರಾಮೋ ದಾಶರಥಿರ್ಭೂತ್ವಾ ತಮಸಾಲುಪ್ತಬುದ್ಧಿಕಃ ।**
**ಕದಾಚಿತ್ಕಾರ್ಯವಶತಃ ಸ್ಮೃತಿಃ ಸ್ಯಾದಾತ್ಮನಃ ಪ್ರಭೋಃ ॥ ೭೫ ॥**

**ಪೂರ್ಣಾರ್ಥೋಽಪಿ ಮಹಾಬಾಹುರಪೂರ್ಣಾರ್ಥ ಇವ ಪ್ರಭುಂ ।**
**ಅನುಗ್ರಹಾಯ ಭಕ್ತಾನಾಂ ಪ್ರಭೂಣಾಮೀದೃಶೀ ಗತಿಃ ॥ ೭೬ ॥**

**ಮಾಯಾಂ ಕೃತ್ವಾ ಮಹೇಶಸ್ಯ ಪ್ರೋತ್ಥಿತಾ ಮಾನುಷೀ ತನುಃ ।**
**ತಸ್ಮಾನ್ಮಾಯಾ ನ ಕರ್ತವ್ಯಾ ವಿದ್ವದ್ಭಿಃ ದೋಷದರ್ಶಿಭಿಃ ॥ ೭೭ ॥**

**ಏತತ್ತೇ ಕಥಿತಂ ಸರ್ವಂ ರಾಮಜನ್ಮಕಥಾಶ್ರಯಂ ।**
**ಅಂಬರೀಷಸ್ಯ ಮಾಹಾತ್ಮ್ಯಂ ಮಾಯಾವಿತ್ವಂ ಚ ವೈ ಹರೇಃ ॥ ೭೮ ॥**

**ಯಃ ಪಠೇಚ್ಛೃಣುಯಾದ್ವಾಪಿ ಮಾಯಾವಿತ್ವಂ ಹರೇರ್ವಿಭೋಃ ।**
**ಮಾಯಾಂ ವಿಸೃಜ್ಯ ಪುಣ್ಯಾತ್ಮಾ ವಿಷ್ಣುಲೋಕಂ ಸ ಗಚ್ಛತಿ ॥ ೭೯ ॥**

---

೭೫-೭೬. ಆ ಪ್ರಭುವಿಗೆ ತನಗೆ ಕಾರ್ಯವಾಗಬೇಕಾದಾಗ ತಾನು ಸ್ವಾಮಿ ಯೆಂಬ ಜ್ಞಾನವು ಬರುವುದು. ಕಾರ್ಯವಿಲ್ಲದಾಗ ಆ ಅಜ್ಞಾನವು ಆವರಿಸಿರುವುದು. ಆ ಸ್ವಾಮಿಯು ಸಂಪೂರ್ಣ ಪ್ರಯೋಜನವುಳ್ಳವನಾದರೂ ಎಲ್ಲರಂತೆಯೂ ಏನೂ ಇಲ್ಲದಂತೆಯೂ ಕಡಿಮೆಯಾಗಿರುವಂತೆಯೂ ಇದ್ದು ಭಕ್ತರಿಗೆ ಅನುಗ್ರಹ ಮಾಡುವುದ ಕ್ಕೋಸ್ಕರ ಈ ರೀತಿಯಾದನು. ಲೋಕದಲ್ಲಿ ಪ್ರಭುಗಳಾದವರ ಸ್ಥಿತಿಯೇ ಹೀಗಿರು ವುದು.

೭೭. ಆ ಸ್ವಾಮಿಯೂ ಕೂಡ ಮಾಯೆಯನ್ನು ಅನುಸರಿಸಿದುದರಿಂದ ಮನು ಷ್ಯನಾಗಿ ಹುಟ್ಟಬೇಕಾಗಿ ಬಂದಿತು. ಆದ್ದರಿಂದ ದೋಷವನ್ನು ತಿಳಿದುಕೊಂಡು ತಿಳಿವಳಿಕೆಯುಳ್ಳವರು ಮಾಯೆಯನ್ನಾಚರಿಸಬಾರದು.

೭೮. ಎಲೈ ಭರದ್ವಾಜನೆ! ರಾಮನ ಜನ್ಮಕ್ಕೆ ಆಶ್ರಯಭೂತವಾದ ಕಥೆಯೂ ಅಂಬರೀಷನ ಮಹಿಮೆಯೂ ಹರಿಯ ಮಾಯಾವಿತನವೂ ಈ ರೀತಿಯಾದುದೆಂದು ನಿನಗೆ ವಿವರಿಸಿದ್ದೇನೆ.

೭೯. ಸ್ವಾಮಿಯಾದ ಈ ಹರಿಯ ಈ ಮಾಯೆಯ ವಿಷಯವನ್ನು ಕೇಳಿ ದವನೂ ಓದಿದವನೂ ಮಾಯೆಯನ್ನು ಕಳೆದುಕೊಂಡು ಪುಣ್ಯವಂತನಾಗಿ ವೈಕುಂಠ ವನ್ನು ಹೊಂದುತ್ತಾನೆ.

**ದಶರಥಸುತಜನ್ಮಕಾರಣಂ ಯಃ ಪಠತಿ ಶೃಣೋತ್ಯನುಮೋದತೇ ದ್ವಿಜೇಂದ್ರಃ**
**ವ್ರಜತಿ ಸ ಭಗವದ್ಗೃಹಾತಿಥಿತ್ವಂ ನ ಹಿ ಶಮನಸ್ಯ ಭಯಂ ಕುತಶ್ಚಿದಸ್ಯ ॥೪೦॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ಶ್ರೀರಾಮ ಜನ್ಮೋಪಕ್ರಮ**
**ಚತುರ್ಥಃ ಸರ್ಗಃ**

೪೦. ದಶರಥನ ಮಗನಾದ ಶ್ರೀ ರಾಮನ ಜನ್ಮಕ್ಕೆ ಕಾರಣವನ್ನು ಯಾವನು ಓದುತ್ತಾನೆಯೋ ಕೇಳುತ್ತಾನೆಯೋ ಒಪ್ಪಿಕೊಳ್ಳುತ್ತಾನೆಯೋ ಅವನು ಭಗವಂತನಿಗೆ ಅತಿಥಿಯಾಗಿ ವೈಕುಂಠಕ್ಕೆ ಹೋಗುತ್ತಾನೆ. ಯಮನ ಭಯವು ಅವನಿಗೆ ಯಾವಾಗಲೂ ಇರುವುದೇ ಇಲ್ಲ.

ಇಂತು ವಾಲ್ಮೀಕಿ ಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾ
ಯಣದ ಅದ್ಭುತೋತ್ತರ ಕಾಂಡದಲ್ಲಿ ಶ್ರೀ ರಾಮ ಜನ್ಮ
ಉಪಕ್ರಮವೆಂಬ ನಾಲ್ಕನೆಯ ಸರ್ಗವು ಮುಗಿದುದು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅದ್ಭುತ ರಾಮಾಯಣೇ

## ಅಥ ಪಂಚಮಃ ಸರ್ಗಃ



ಭರದ್ವಾಜ ಶೃಣುಷ್ವಾಥ ಸೀತಾಜನ್ಮನಿ ಕಾರಣಂ ।
ಪುರಾ ತ್ರೇತಾಯುಗೇ ಕಶ್ಚಿತ್ ಕೌಶಿಕೋ ನಾಮ ವೈ ದ್ವಿಜಃ ॥ ೧ ॥

ವಾಸುದೇವ ಪರೋ ನಿತ್ಯಂ ನಾಮಗಾನರತಃ ಸದಾ ।
ಭೋಜನಾಸನ ಶಯ್ಯಾಸು ಸದಾ ತದ್ಗತಮಾನಸಃ
ಉದಾರ ಚರಿತಂ ವಿಷ್ಣೋಃ ಗಾಯಮಾನಃ ಪುನಃ ಪುನಃ ॥ ೨ ॥

---

## ಐದನೆಯ ಸರ್ಗ

೧. ಎಲೈ ಭರದ್ವಾಜನೇ ! ಸೀತೆಯು ಜನ್ಮವನ್ನು ತಾಳಲು ಕಾರಣವನ್ನು ಹೇಳುತ್ತೇನೆ. ಕೇಳು. ಪೂರ್ವದಲ್ಲಿ ತ್ರೇತಾಯುಗದಲ್ಲಿ ಕೌಶಿಕನೆಂಬ ಬ್ರಾಹ್ಮಣನೊಬ್ಬನಿದ್ದನು.

೨. ಅವನು ವಿಷ್ಣು ಭಕ್ತನು. ಯಾವಾಗಲೂ ವಾಸುದೇವನನ್ನೇ ಸ್ಮರಿಸುತ್ತಾ ಅವನ ನಾಮಗಳನ್ನೇ ಹಾಡುತ್ತ, ಕೂತಾಗ, ಮಲಗಿದಾಗ, ಊಟ ಮಾಡುವಾಗ ಎಲ್ಲಾ ಕಾಲಗಳಲ್ಲಿಯೂ ಆ ಸ್ವಾಮಿಯಾದ ವಿಷ್ಣುವನ್ನೇ ಧ್ಯಾನಿಸುತ್ತಿದ್ದನು.

ವಿಷ್ಣುಸ್ಥಲಂ ಸಮಾಸಾದ್ಯ ಹರೇಃ ಕ್ಷೇತ್ರಮನುತ್ತಮಂ ।
ಅಗಾಯತ ಹರಿಂ ತತ್ರ ತಾಲವಲ್ಗುಲಯಾನ್ವಿತಂ ॥ ೩ ॥

ಮೂರ್ಛನಾ ಮೂರ್ಛಯೋಗೇನ ಶ್ರುತಿಮಂಡಲವೇದಿತಂ ।
ಭಕ್ತಿಯೋಗ ಸಮಾಪನ್ನೋ ಭಿಕ್ಷಾಮಶ್ನಾತಿ ತತ್ರ ವೈ ॥ ೪ ॥

ತತ್ರೈವಂ ಗಾಯಮಾನಂ ಚ ದೃಷ್ಟ್ವಾ ಕಶ್ಚಿದ್ದ್ವಿಜಸ್ತದಾ ।
ಪದ್ಮಾಕ್ಷ ಇತಿ ವಿಖ್ಯಾತಸ್ತಸ್ಮೈ ಚಾನ್ನಂ ದದೌ ಸದಾ ॥ ೫ ॥

ಸ ಕುಟುಂಬೋ ಮಹಾತೇಜಾ ಅಶ್ನನ್ನನ್ನಂ ಚ ತಸ್ಯ ವೈ ।
ಕೌಶಿಕೋ ಹಿ ತದಾ ಹೃಷ್ಟೋ ಗಾಯನ್ನಾಸ್ತೇ ಹರಿಂ ಪ್ರಭುಂ ॥ ೬ ॥

ಶೃಣ್ವನ್ನಾಸ್ತೇ ಸ ಪದ್ಮಾಕ್ಷಃ ಕಾಲೇ ಕಾಲೇ ಚ ಭಕ್ತಿತಃ ।
ಕಾಲಯೋಗೇನ ಸಂಪ್ರಾಪ್ತಾಃ ಶಿಷ್ಯಾ ವೈ ಕೌಶಿಕಸ್ಯ ಚ ॥ ೭ ॥

೩-೪. ಒಂದು ಉತ್ತಮವಾದ ಹರಿಯ ಕ್ಷೇತ್ರಕ್ಕೆ ಹೋಗಿ ಅಲ್ಲಿ ಆ ವಿಷ್ಣುವಿನ ನಾಮಗಳನ್ನು ತಾಳ ಲಯಗಳಿಗನುಗುಣವಾಗಿ ಮೂರ್ಛನೆಗಳ ರೀತಿಯಿಂದ ಶ್ರುತಿಯನ್ನು ಬಿಡದೆ ಭಕ್ತಿಯಿಂದ ಹಾಡುತ್ತಿದ್ದನು. ಇದರಿಂದಲೇ ಭಿಕ್ಷೆಯನ್ನು ಮಾಡಿಕೊಂಡು ಬಂದು ಆ ಅನ್ನವನ್ನು ತಿನ್ನುತ್ತಿದ್ದನು.

೫. ಅಲ್ಲಿ ಪದ್ಮಾಕ್ಷನೆಂಬ ಮತ್ತೊಬ್ಬ ಬ್ರಾಹ್ಮಣನಿದ್ದನು. ಅವನು ಹಾಡುತ್ತಿರುವ ಈ ವಿಷ್ಣು ಭಕ್ತನನ್ನು ನೋಡಿ ಇವನಿಗೆ ನಿತ್ಯವೂ ಅನ್ನವನ್ನು ಹಾಕುತ್ತಿದ್ದನು.

೬. ಈ ಕೌಶಿಕನು ಹೆಂಡತಿ ಮಕ್ಕಳೊಡನೆ ಅವನ ಅನ್ನವನ್ನು ತಿನ್ನುತ್ತ ಯಾವಾಗಲೂ ಆ ಸ್ವಾಮಿಯಾದ ವಿಷ್ಣುವನ್ನು ಸಂತೋಷದಿಂದ ಗಾನಮಾಡುತ್ತಿರುವನು.

೭. ಆ ಪದ್ಮಾಕ್ಷನು ಆಗಾಗ ಈತನು ಹಾಡುವ ದೇವರನಾಮಗಳನ್ನು ಭಕ್ತಿಯಿಂದ ಕೇಳುತ್ತಲಿರುವನು. ಹೀಗಿರುತ್ತಿರಲು ಆ ಕೌಶಿಕನಿಗೆ ಕೆಲವರು ಶಿಷ್ಯರು ಬಂದೊದಗಿದರು.

ಸಪ್ತರಾಜನ್ಯ ವೈಶ್ಯಾನಾಂ ವಿಪ್ರಾಣಾಂ ಕುಲ ಸಂಭವಾಃ ।
ಜ್ಞಾನವಿದ್ಯಾಧಿಕಾಶ್ಶುದ್ಧಾಃ ವಾಸುದೇವಪರಾಯಣಾಃ ॥ ೮ ॥

ತೇಷಾಮಪಿ ತಥಾನ್ನಾದ್ಯಂ ಪದ್ಮಾಕ್ಷಃ ಪ್ರದದೌ ಸ್ವಯಂ ।
ಶಿಷ್ಯೈಶ್ಚ ಸಹಿತೋ ನಿತ್ಯಂ ಕೌಶಿಕೋ ಹೃಷ್ಟಮಾನಸಃ ॥ ೯ ॥

ವಿಷ್ಣುಸ್ಥಳೇ ಹರಿಂ ತತ್ರ ಆಸ್ತೆ ಗಾಯನ್ ಯಥಾವಿಧಿ ।
ತತ್ರೈವ ಮಾಲವೋ ನಾಮ ವೈಶ್ಯೋ ವಿಷ್ಣುಪರಾಯಣಃ ॥ ೧೦ ॥

ದೀಪಮಾಲಾಂ ಹರೇರ್ನಿತ್ಯಂ ಕರೋತಿ ಪ್ರೀತಮಾನಸಃ ।
ಮಾಲತೀನಾಮ ಭಾರ್ಯಾಸೀತ್ತಸ್ಯ ನಿತ್ಯಂ ಪತಿವ್ರತಾ ॥ ೧೧ ॥

ಗೋಮಯೇನ ಸಮಾಲಿಪ್ಯ ಹರೇಃ ಕ್ಷೇತ್ರಂ ಸಮಂತತಃ ।
ಭರ್ತ್ರಾಸಹಾಸ್ತೇ ಸಂಪ್ರೀತಾ ಶೃಣ್ವತೀ ಗಾನಮುತ್ತಮಂ ॥ ೧೨ ॥

೮. ಬ್ರಾಹ್ಮಣ, ಕ್ಷತ್ರಿಯ ವೈಶ್ಯರ ಜಾತಿಯವರು ಒಟ್ಟು ಏಳು ಜನ ಶಿಷ್ಯರು ಬಂದು ಸೇರಿದರು. ಅವರು ಒಳ್ಳೆಯ ಜ್ಞಾನಿಗಳಾಗಿಯೂ ಹೆಚ್ಚು ವಿದ್ಯಾವಂತರಾಗಿಯೂ ಶುದ್ಧರಾಗಿಯೂ ಇದ್ದುಕೊಂಡು ವಿಷ್ಣು ಭಕ್ತರಾಗಿ ಆ ಸ್ವಾಮಿಯ ನಾಮವನ್ನೆ ಗಾನ ಮಾಡುತ್ತಿದ್ದರು.

೯. ಆ ಪದ್ಮಾಕ್ಷನು ಆ ಶಿಷ್ಯರಿಗೂ ತಾನೇ ಅನ್ನ ಹಾಕುತ್ತ ಅವರಿಗೆ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಟ್ಟನು. ಈ ಕೌಶಿಕನು ಸಂತೋಷದಿಂದ ಆ ಶಿಷ್ಯರೊಡನೆ ಅಲ್ಲಿರುತ್ತಿದ್ದನು.

೧೦. ಅಲ್ಲಿರುವ ವಿಷ್ಣುಸ್ಥಳವಾದ ದೇವಸ್ಥಾನದಲ್ಲಿ ಈತನು ಈ ಶಿಷ್ಯರೊಡನೆ ಗಾನಮಾಡುತ್ತಲಿದ್ದನು. ಆ ಊರಿನಲ್ಲಿಯೇ ಮಾಲವನೆಂಬ ಹೆಸರುಳ್ಳ ಒಬ್ಬ ವೈಶ್ಯನಿದ್ದನು ಅವನು ವಿಷ್ಣು ಭಕ್ತನು.

೧೧-೧೨. ಅವನು ನಿತ್ಯವೂ ಆ ದೇವಸ್ಥಾನದಲ್ಲಿ ಹರಿಗೆ ದೀಪಗಳನ್ನೂ ಸಾಲುಸಾಲಾಗಿ ಹತ್ತಿಸುವನು. ಅವನಿಗೊಬ್ಬಳು ಮಾಲತಿಯೆಂಬ ಹೆಸರಿನ ಹೆಂಡತಿ ಇರುವಳು. ಅವಳು ಪತಿವ್ರತೆಯು. ಆಕೆಯು ನಿತ್ಯವೂ ಆ ದೇವಸ್ಥಾನವನ್ನು ಸಗಣಿಯಿಂದ ಸಾರಿಸಿ ಗುಡಿಸಿ ರಂಗವಲ್ಲಿಗಳನ್ನಿಡುತ್ತಾ ಗಂಡನೊಡನೆ ಆ ಗಾನವನ್ನು ಕೇಳುತ್ತ ಸಂತೋಷದಿಂದಿದ್ದುಕೊಂಡಿದ್ದಳು.

ಕುಶಸ್ಥಳೀ ಸಮುತ್ಪನ್ನಾ ಬ್ರಾಹ್ಮಣಾಃ ಸಂಶಿತವ್ರತಾಃ ।
ಪಂಚಾಶದ್ವೈ ಸಮಾಪನ್ನಾ ಹರೇರ್ಗಾನಾರ್ಥಮುತ್ತಮಾಃ ॥ ೧೩ ॥

ಸಾಧಯಂತೋ ಹಿ ಕಾರ್ಯಾಣಿ ಕೌಶಿಕಸ್ಯ ಮಹಾತ್ಮನಃ ।
ಗಾನವಿದ್ಯಾರ್ಥತತ್ವಜ್ಞಾಃ ಶೃಣ್ವಂತೋ ಹ್ಯವಸಂಸ್ತು ತೇ ॥ ೧೪ ॥

ಖ್ಯಾತಮಾಸೀತ್ತದಾ ತಸ್ಯ ಗಾನಂ ಪೈ ಕೌಶಿಕಸ್ಯ ಚ ।
ಶ್ರುತ್ವಾ ರಾಜಾ ಸಮಭ್ಯೇತ್ಯ ಕಾಲಿಂಗೋ ವಾಕ್ಯಮಬ್ರವೀತ್ ॥ ೧೫ ॥

ಕೌಶಿಕಾದ್ಯಗಣೈಃ ಸಾರ್ಧಂ ಗಾಯೆಸ್ವೇಹ ಚ ಮಾಂ ಪುನಃ ।
ಶೃಣುಧ್ವಂ ಚ ತಥಾ ಯೂಯಂ ಕುಶಸ್ಥಲ ಜನಾ ಅಪಿ ॥ ೧೬ ॥

---

೧೩. ಕುಶಸ್ಥಳೀ ಎಂಬಲ್ಲಿನ ಕೆಲವರು ಬ್ರಾಹ್ಮಣರು ವಿಷ್ಣು ಭಕ್ತರು. ಒಳ್ಳೆಯ ಸಿಷ್ಯರು. ಅವರು ಐವತ್ತು ಜನರು ಹರಿಯ ನಾಮ ಸ್ಮರಣೆಯ ಗಾನವನ್ನು ಕೇಳಲು ಬಂದರು.

೧೪. ಅವರೆಲ್ಲರೂ ತಾವು ತಮ್ಮೂರಿಂದ ಹೊರಟು ಅಲ್ಲಲ್ಲಿ ಈ ಗಾನವನ್ನು ಕೇಳುತ್ತ ತಮ್ಮ ಕೆಲಸಗಳನ್ನು ಮಾಡಿಕೊಂಡು ಈ ಕೌಶಿಕನಿದ್ದಲ್ಲಿಗೆ ಬಂದು ಈತನ ಗಾನಗಳನ್ನು ಕೇಳಿದರು. ಅವರು ಗಾನ ವಿದ್ಯೆಯಲ್ಲಿ ಬಹು ನಿಪುಣರಾದುದರಿಂದ ಈತನ ವಿದ್ಯೆಯಲ್ಲಿನ ತತ್ವವನ್ನು ಬಹುವಾಗಿ ಮೆಚ್ಚಿ ಇಲ್ಲಿಯೇ ನಿಂತರು.

೧೫. ಈ ರೀತಿ ಇರುತ್ತಿರಲು ಈ ಕೌಶಿಕನ ಗಾನವು ಎಲ್ಲ ಕಡೆಯಲ್ಲಿಯೂ ಹರಡಿತು. ಆ ಕಲಿಂಗ ದೇಶದ ರಾಜನು ಇದನ್ನು ಕೇಳಿ ಅವನನ್ನು ಕುರಿತು ಇಂತೆಂದನು.

೧೬. ಎಲೈ ಕೌಶಿಕನೆ! ನಿನ್ನ ಜೊತೆಯವರೊಡನೆ ನನ್ನನ್ನು ಕುರಿತು ಗಾನವನ್ನು ಮಾಡು. ಅದನ್ನು ಇಲ್ಲಿರುವವರೆಲ್ಲರೂ ಮತ್ತು ಈ ಬಂದಿರುವ ಕುಶಸ್ಥಲದ ಜನರೂ ಕೇಳಲಿ.

ತಚ್ಛ್ರುತ್ವಾ ಕೌಶಿಕಃ ಪ್ರಾಹ ರಾಜಾನಂ ಸಾಂತ್ವಯನ್ ಗಿರಾ ।
ನ ಜಿಹ್ವಾಗ್ರೇ ಮಹಾರಾಜ ವಾಣೀ ಚ ಮಮ ಸರ್ವದಾ ॥ ೧೭ ॥

ಹರೇರನ್ಯಮಪೀಂದ್ರಂ ವಾ ಸ್ತೌತಿ ನಾಪಿ ನ ವಕ್ತಿ ಚ ।
ಏವಮುಕ್ತೇ ಚ ತಚ್ಛಿಷ್ಯಾ ವಸಿಷ್ಠೋ ಗೌತಮೋಽರುಣಿಃ ॥ ೧೮ ॥

ಸಾರಸ್ವತ ಸ್ತಥಾ ವೈಶ್ಯಶ್ಚಿತ್ರಮಾಲಸ್ತಥಾ ಶಿಶುಃ ।
ಊಚುಸ್ತಂ ಪಾರ್ಥಿವಂ ತತ್ತ್ವಂ ಯಥಾ ಪ್ರಾಹ ಸ ಕೌಶಿಕಃ ॥ ೧೯ ॥

ಶ್ರೀಕರಾಶ್ಚ ತಥಾ ಪ್ರೋಚುಃ ಪಾರ್ಥಿವಾ ವಿಷ್ಣುತತ್ಪರಾಃ ।
ಶ್ರೋತ್ರಾಣೀಮಾನಿ ಶೃಣ್ವಂತಿ ಹರೇರನ್ಯಂ ನ ಪಾರ್ಥಿವ ॥ ೨೦ ॥

ಮಾ ತೇ ಕೀರ್ತಿಂ ವಯಂ ತಸ್ಮಾತ್ ಶ್ರುಣುಮೋ ನೈವ ವಾ ಸ್ತುತಿಂ ।
ತಚ್ಛ್ರುತ್ವಾ ಪಾರ್ಥಿವೋ ರುಷ್ಟೋ ಗೀಯತಾಮಿತಿ ಚಾಬ್ರವೀತ್ ॥ ೨೧ ॥

---

೧೭. ಅದನ್ನು ಕೇಳಿ ಕೌಶಿಕನು ಒಳ್ಳೆಯ ಮಾತುಗಳನ್ನು ಹೇಳುತ್ತ ರಾಜ ಸಿಗಿಂತೆಂದನು. ಎಲೈ ದೊರೆಯೇ! ನನ್ನ ನಾಲಿಗೆಯ ತುದಿಯಲ್ಲಿ ಯಾವಾಗಲೂ ಈ ಸರಸ್ವತಿ ಇರುವುದಿಲ್ಲ. ಅವಳಿರುವಾಗ ಹರಿಯೊಬ್ಬನನ್ನು ಬಿಟ್ಟು ಇಂದ್ರನನ್ನು ಕೂಡ ಸ್ತುತಿಸುವುದಿಲ್ಲ. ಅವನ ವಿಷಯವನ್ನು ಹೇಳುವುದೂ ಇಲ್ಲ. ಎಂದನು.

೧೮-೧೯. ಆ ಕೌಶಿಕನು ಇಂತೆನ್ನಲು ಅವನ ಶಿಷ್ಯರಾದ ವಸಿಷ್ಠ, ಗೌತಮ, ಅರುಣಿ, ಸಾರಸ್ವತ, ಚಿತ್ರಮೂಲ, ಶಿಶು ಇವರೆಲ್ಲರೂ ಅ ಕೌಶಿಕನು ಹೇಳಿದ ವಿಷ ಯವು ನಿಶ್ಚಯವಾದುದು. ಎಂದರು.

೨೦. ಶ್ರೀಕರನೇ ಮುಂತಾದ ವಿಷ್ಣು ಭಕ್ತರು ರಾಜನನ್ನು ಕುರಿತು ನಮ್ಮ ಕಿವಿಗಳು ಹರಿಯ ಸ್ತೋತ್ರವನ್ನು ಹೊರತಾಗಿ ಬೇರೆಯವರ ಸ್ತುತಿಯನ್ನು ಕೇಳುವು ದಿಲ್ಲ. ಆದ್ದರಿಂದ ಅವನು ನಿನ್ನ ಕೀರ್ತಿಯನ್ನು ಹಾಡಲೂ ಬೇಡ. ನಾವು ಕೇಳು ವುದೂ ಇಲ್ಲ. ಎಂದರು.

೨೧-೨೨. ಆಗ ರಾಜನು ತನ್ನ ಆಳುಗಳನ್ನು ಕರೆದು ಈ ಬ್ರಾಹ್ಮಣರು ನನ್ನ

ಸ್ವಭೃತ್ಯಾ ಬ್ರಾಹ್ಮಣಾ ಹ್ಯೇತೇ ಕೀರ್ತಿಂ ಶೃಣ್ವಂತಿ ವೈ ಯಥಾ ।
ನ ಶೃಣ್ವಂತಿ ಕಥಂ ತಸ್ಮಾದ್ಗೀಯಮಾನಾಂ ಸಮಂತತಃ ॥ ೨೨ ॥

ಏವಮುಕ್ತಾಸ್ತತೋ ಭೃತ್ಯಾಃ ಜಗುಃ ಪಾರ್ಥಿವಸತ್ತಮಂ ।
ನಿರುದ್ಧಕರ್ಣಾ ವಿಪ್ರಾಸ್ತೇ ಗಾನೇ ವೃತ್ತಾಸ್ಸುದುಃಖಿತಾಃ ॥ ೨೩ ॥

ಕಾಷ್ಠಶಂಕುಭಿರನ್ಯೋನ್ಯ ಶ್ರೋತ್ರಾಣಿ ಬಿಭಿದುಃ ಕಿಲ ।
ಕೌಶಿಕಾದ್ಯಾಸ್ತು ತಾಂ ಜ್ಞಾತ್ವಾ ಮನೋವೃತ್ತಿಂ ನೃಪಸ್ಯ ವೈ ॥ ೨೪ ॥

ನಿರ್ಬಂಧಂ ಕುರುತೇ ತಸ್ಮಾತ್ ಸ್ವಗಾನೇಸೌ ನೃಪಃ ಸ್ಥಿರಂ ।
ಇತ್ಯುಕ್ತ್ವಾ ತೇ ಸುನಿಯತಾ ಜಿಹ್ವಾಗ್ರಂ ಚಿಚ್ಛಿದುಃ ಸ್ವಕಂ ॥ ೨೫ ॥

ತತೋ ರಾಜಾ ಸುಸಂಕ್ರುದ್ಧಃ ಸ್ವದೇಶಾತ್ತಾನ್ ನ್ಯವಾಸಯತ್ ।
ಆದಾಯ ವಿತ್ತಂ ಸರ್ವೇಷಾಂ ತತಸ್ತೇ ಜಗ್ಮುರುತ್ತರಾಂ ॥ ೨೬ ॥

---

ಕೀರ್ತಿಯನ್ನು ಕೇಳಲಿ. ಆರೀತಿಯಾಗಿ ಗಾನ ಮಾಡಿರಿ. ಎಲ್ಲ ಕಡೆಗೂ ಗಾನವು ಕೇಳುವಂತೆ ಹಾಡಿದರೆ ಇವರು ಹೇಗೆ ತಾನೆ ಕೇಳದಿದ್ದಾರು ?

೨೩. ಆಳುಗಳಿಗೆ ರಾಜನು ಹೀಗೆ ಅಪ್ಪಣೆ ಮಾಡಲು ರಾಜನ ಕೀರ್ತಿಯನ್ನು ಅವರು ಹಾಡಿದರು. ಆ ರೀತಿ ರಾಜನಕೀರ್ತಿಯನ್ನು ಗಾನಮಾಡುತ್ತಿರಲು ಆ ಕೌಶಿಕಾದಿಗಳು ದುಃಖಪಡುತ್ತ ಕಿವಿಯನ್ನು ಮುಚ್ಚಿಕೊಂಡರು.

೨೪. ಆಗ ಆ ಕುಶಸ್ಥಲಿಯ ಜನರು ಈ ನರಸ್ತುತಿಯ ಗಾನವನ್ನು ಕೇಳಲಾರದೆ ಕಡ್ಡಿಗಳಿಂದಲೂ ಗೂಟಗಳಿಂದಲೂ ತಮ್ಮ ತಮ್ಮ ಕಿವಿಗಳಲ್ಲಿ ಸದ್ದು ತಿಳಿಯದಂತೆ ಕರ್ಣೇಂದ್ರಿಯವನ್ನು ನಾಶಮಾಡಿಕೊಂಡರು. ಆಗ ಕೌಶಿಕನೇ ಮೊದಲಾದ ಇಲ್ಲಿಯವರು ರಾಜನ ಮನೋಭಾವವನ್ನು ತಿಳಿದುಕೊಂಡರು.

೨೫. ಈ ರಾಜನು ತನ್ನ ಕೀರ್ತಿಯನ್ನು ಗಾನ ಮಾಡುವುದಕ್ಕೇತಕ್ಕೆ ನಿರ್ಬಂಧ ಪಡಿಸುವನೋ ತಿಳಿಯದಲ್ಲ ? ಎಂದೆನ್ನುತ್ತಾ ತಮ್ಮ ತಮ್ಮ ನಾಲಿಗೆಯ ತುದಿಯನ್ನು ಕತ್ತರಿಸಿಕೊಂಡರು.

೨೬. ಆಗ ಆ ರಾಜನಿಗೆ ಕೋಪ ಬಂದಿತು. ಒಡನೆಯೇ ಅವರ ಆಸ್ತಿಯನ್ನೆಲ್ಲವನ್ನೂ ಕಿತ್ತುಕೊಂಡು ಅವರನ್ನು ತನ್ನ ದೇಶದಿಂದ ಓಡಿಸಿಬಿಟ್ಟನು. ಆಗ ಅವರು ಉತ್ತರ ದಿಕ್ಕಿಗೆ ಹೋದರು.

ದಿಶಮಾಸಾದ್ಯ ಕಾಲೇನ ಕಾಲಧರ್ಮೇಣ ಯೋಜಿತಾಃ ।
ತಾನಾಗತಾನ್ ಯಮೋ ದೃಷ್ಟ್ವಾ ಕಿಂ ಕರ್ತವ್ಯಮಿತಿ ಸ್ಮ ಹ ॥ ೨೭ ॥

ವಿಸ್ಮಿತಃ ತತ್ ಕ್ಷಣೇ ವಿಪ್ರ ಬ್ರಹ್ಮಾ ಪ್ರಾಹ ಸುರಾಧಿಪಾನ್ ।
ಕೌಶಿಕಾದೀನ್ ದ್ವಿಜಾನದ್ಯ ವಾಸುದೇವಪರಾಯಣಾನ್ ॥ ೨೮ ॥

ಗಾನಯೋಗೇನ ಯೇ ನಿತ್ಯಂ ಪೂಜಯಂತಿ ಜನಾರ್ದನಂ ।
ತಾನಾನಯತ ಭದ್ರಂ ವೋ ಯದಿ ದೇವತ್ವಮಿಚ್ಛಥ ॥ ೨೯ ॥

ಇತ್ಯುಕ್ತಾ ಲೋಕಪಾಲಾಸ್ತೇ ಕೌಶಿಕೇತಿ ಪುನಃ ಪುನಃ ।
ಮಾಲತೀತಿ ತಥಾ ಕೇಚಿತ್ ಪದ್ಮಾಕ್ಷೇತಿ ತಥಾ ಪರೇ ॥ ೩೦ ॥

ಕ್ರೋಶಮಾನಾಸ್ಸಮುಭ್ಯೇತ್ಯ ತಾನಾದಾಯ ವಿಹಾಯಸಾ ।
ಬ್ರಹ್ಮಲೋಕಂ ಗತಾಶ್ಶೀಘ್ರಂ ಮುಹೂರ್ತಾರ್ಧೇನ ವೈ ಸುರಾಃ ॥ ೩೧ ॥

೨೭-೨೯. ಹೀಗೆ ಉತ್ತರ ದಿಕ್ಕಿಗೆ ಹೋಗಿ ಅಲ್ಲಿರುತ್ತಾ ಕೆಲವು ಕಾಲದ ಮೇಲೆ ಮನುಷ್ಯರಾದವರಿಗೆ ಒದಗತಕ್ಕ ಮೃತಿಯನ್ನು ಹೊಂದಿದರು. ಯಮ ದೂತರು ಯಮ ಲೋಕಕ್ಕೆ ಕರೆದುಕೊಂಡು ಹೋಗಲು ಯಮನು ಅವರು ಬಂದು ದನ್ನು ನೋಡಿ ಆಶ್ಚರ್ಯಪಡುತ್ತ ಏನು ಮಾಡಬೇಕೆಂಬುದಾಗಿ ಯೋಚಿಸುತ್ತಿದ್ದನು. ಆಗ ಬ್ರಹ್ಮನು ದೇವತೆಗಳಲ್ಲಿ ಹಿರಿಯರನ್ನು ನೋಡಿ ಎಲೈ ದೇವಾಧಿಪರಿರಾ! ನೀವು ದೇವತೆಗಳಾಗಿರಬೇಕಾಗಿದ್ದ ಪಕ್ಷದಲ್ಲಿ ನಿತ್ಯವೂ ಗಾನಯೋಗದಿಂದ ವಾಸುದೇವ ನನ್ನು ಪೂಜಿಸುತ್ತಿದ್ದ ಆ ಕೌಶಿಕನನ್ನು ಕರೆದುಕೊಂಡು ಬನ್ನಿರಿ. ಅದಿಲ್ಲದಿದ್ದರೆ ನಿಮಗೆ ತೊಂದರೆಬರುವುದು ಖಂಡಿತವು. ಎಂದನು.

೩೦-೩೧. ಬ್ರಹ್ಮನು ಹಾಗೆನ್ನಲು ಲೋಕಪಾಲರು ಕೌಶಿಕನನ್ನು, ಕೌಶಿಕ ನನ್ನು, ಮಾಲತಿಯನ್ನು, ಮಾಲತಿಯನ್ನು, ಪದ್ಮಾಕ್ಷನನ್ನು, ಪದ್ಮಾಕ್ಷನನ್ನು, ಎಂದೆಂದು ಒಬ್ಬೊಬ್ಬರು ಒಂದೊಂದು ಬಗೆಯಾಗಿ ಕೂಗುತ್ತ ಹೋಗಿ ಅವರನ್ನು ಆಕಾಶಮಾರ್ಗದಿಂದಲೇ ಕರೆದುಕೊಂಡು ಅರ್ಧ ಮುಹೂರ್ತದಲ್ಲಿಯೇ ಬ್ರಹ್ಮ ಲೋಕಕ್ಕೆ ಹೋದರು.

ಕೌಶಿಕಾದೀನ್ ತಥಾ ದೃಷ್ಟ್ವಾ ಬ್ರಹ್ಮಾಲೋಕಪಿತಾಮಹಃ ।
ಪ್ರತ್ಯಾಗಮ್ಯ ಯಥಾನ್ಯಾಯಂ ಸ್ವಾಗತೇನಾಭ್ಯಪೂಜಯತ್ ॥ ೩೨ ॥

ತತಃ ಕೋಲಾಹಲಶ್ಚಾಭೂದತಿಗೌರವಮುಲ್ಬಣಂ ।
ಬ್ರಹ್ಮಣಾ ಚ ಕೃತಂ ದೃಷ್ಟ್ವಾ ದೇವಾನಾಂ ದ್ವಿಜಸತ್ತಮ ॥ ೩೩ ॥

ಹಿರಣ್ಯಗರ್ಭೋ ಭಗವಾನ್ ತಾನ್ ನಿವಾರ್ಯ ಸುರೋತ್ತಮಾನ್ ।
ಕೌಶಿಕಾದೀನ್ ತದಾದಾಯ ಮುನಿದೇವೈಸ್ಸಮಾವೃತಃ ॥ ೩೪ ॥

ವಿಷ್ಣುಲೋಕಂ ಯಯೌ ಶೀಘ್ರಂ ವಾಸುದೇವಪರಾಯಣಃ ।
ತತ್ರ ನಾರಾಯಣೋ ದೇವಃ ಶ್ವೇತದ್ವೀಪನಿವಾಸಿಭಿಃ ॥ ೩೫ ॥

ಜ್ಞಾನಯೋಗೇಶ್ವರೈಸ್ಸಿದ್ಧೈಃ ವಿಷ್ಣುಭಕ್ತಿಪರಾಯಣೈಃ ।
ನಾರಾಯಣ ಸಮೈರ್ದಿವ್ಯೈಃ ಚತುರ್ಬಾಹುಧರೈಃ ಶುಭೈಃ ॥ ೩೬ ॥

---

೩೨. ಲೋಕ ಪಿತಾಮಹನಾದ ಬ್ರಹ್ಮನು ಆ ಕೌಶಿಕಾದಿಗಳು ಬಂದುದನ್ನು ನೋಡಿ ಅವರನ್ನು ಎದುರುಗೊಂಡು ಸುಖಾಗಮನವನ್ನು ಕೇಳಿ ಗೌರವಿಸಿದನು.

೩೩-೩೪. ಆ ಬ್ರಹ್ಮ ಲೋಕದಲ್ಲಿ ಬ್ರಹ್ಮನು ಕೌಶಿಕಾದಿಗಳಿಗೆ ಈರೀತಿಯಾಗಿ ಗೌರವಿಸುದುದನ್ನು ನೋಡಿ ದೇವತೆಗಳು ಬಹುವಾಗಿ ಆಶ್ಚರ್ಯಪಡುತ್ತ ಇವನೇನು ಮಾಡಿರಬಹುದೆಂದು ಎನ್ನುತ್ತಾ ಕೂಗಲು ಮೊದಲಿಟ್ಟರು. ಮತ್ತು ತಾವೂ ಪೂಜಿಸಲುಪಕ್ರಮಿಸಿದರು. ಬ್ರಹ್ಮನು ಅವರನ್ನು ತಡೆದು ಕೌಶಿಕನನ್ನೂ ಅವನ ಜೊತೆಯವರನ್ನೂ ಜೊತೆಗೆ ದೇವಮುನಿಗಳನ್ನೂ ಕರೆದುಕೊಂಡು ವಿಷ್ಣುವನ್ನು ಸ್ಮರಿಸುತ್ತ ವೈಕುಂಠಕ್ಕೆ ಹೋದನು.

೩೫-೩೬. ಅಲ್ಲಿ ನಾರಾಯಣನಿದ್ದನು. ಅಲ್ಲಿ ಶ್ವೇತದ್ವೀಪನಿವಾಸಿಗಳು ಅನೇಕರಿದ್ದರು. ಅವರೆಲ್ಲರೂ ಜ್ಞಾನಯೋಗಿಗಳು. ಸಿದ್ಧರು. ವಿಷ್ಣುಭಕ್ತಿಯಲ್ಲಿ ಆಸಕ್ತರು. ನಾರಾಯಣನಿಗೆ ಸಮರಾದವರು. ನಾಲ್ಕು ತೋಳುಗಳನ್ನು ಹೊಂದಿರುವವರು. ವಿಷ್ಣುವಿನ ಚಿಹ್ನೆಗಳೆಲ್ಲವೂ ಅವರಲ್ಲಿವೆ. ಬಹುವಾಗಿ ಕಾಂತಿಯುಳ್ಳವರು.

ವಿಷ್ಣುಚಿಹ್ನಸಮಾಸನ್ನೈಃ ದೀಪ್ಯಮಾನೈರಕಲ್ಮಷೈಃ ।
ಅಷ್ಟಾಶೀತಿಸಹಸ್ರೈಸ್ತು ಸೇವ್ಯಮಾನೋ ಮನೋಜವೈಃ ॥ ೩೭ ॥

ಅಸ್ಮಾಭಿರ್ನಾರದಾದ್ಯೈಶ್ಚ ಸನಕಾದ್ಯೈರಕಲ್ಮಷೈಃ ।
ಭೂತೈರ್ನಾನಾವಿಧೈಶ್ಚೈವ ದಿವ್ಯಸ್ತ್ರೀಭಿಸ್ಸಮಂತತಃ ॥ ೩೮ ॥

ಸೇವ್ಯಮಾನೋಥ ಮಧ್ಯೇ ವೈ ಸಹಸ್ರದ್ವಾರಸಂವೃತೇ ।
ಸಹಸ್ರಯೋಜನಾಯಾಮೇ ದಿವ್ಯೇ ಮಣಿಮಯೇ ಶುಭೇ ॥ ೩೯ ॥

ವಿಮಾನೇ ವಿಮಲೇ ಚಿತ್ರೇ ಭದ್ರಪೀಠಾಸನೇ ಹರಿಃ ।
ಲೋಕಕಾರ್ಯಪ್ರಸಕ್ತಾನಾಂ ದತ್ವಾ ದೃಷ್ಟಿಂ ಸಮಾಸ್ಥಿತಃ ॥ ೪೦ ॥

ತಸ್ಮಿನ್ ಕಾಲೇಥ ಭಗವಾನ್ ಕೌಶಿಕಾದ್ಯೈಶ್ಚ ಸಂವೃತಃ ।
ಆಗಮ್ಯ ಪ್ರಣಿಪತ್ಯಾಗ್ರೇ ತುಷ್ಟಾವ ಗರುಡಧ್ವಜಂ ॥ ೪೧ ॥

---

ಕಲ್ಮಷವಿಲ್ಲದವರು. ಇಂತಹವರು ಎಂಭತ್ತೆಂಟುಸಾವಿರ ಜನರಿರುವರು. ಇವರಿಂದ ಆ ವಿಷ್ಣುವು ಅಲ್ಲಿ ಸೇವಿಸಲ್ಪಡುತ್ತಲಿದ್ದಾನೆ.

೩೮-೪೦. ನಾರದನೇ ಮುಂತಾದ ಋಷಿಗಳಿಂದಲೂ ಸನಕಾದಿಗಳಿಂದಲೂ ಇನ್ನೂ ಅನೇಕ ವಿಧದ ಪ್ರಾಣಿಗಳಿಂದಲೂ ಉತ್ತಮವಾದ ಹೆಂಗಸರಿಂದಲೂ ಎಲ್ಲಾ ಕಡೆಯಲ್ಲಿಯೂ ಸೇವಿಸಲ್ಪಡುತ್ತ ಕುಳಿತಿರುವನು. ಆ ಹರಿಯು ಸಾವಿರ ಬಾಗಿಲುಗಳುಳ್ಳ ಸಾವಿರ ಯೋಜನಗಳ ಉದ್ದ ಅಗಲಗಳುಳ್ಳ ಒಂದು ದಿವ್ಯವಾದ ಮಂಡಪದ ಸಭೆಯಲ್ಲಿ ಬಹು ಚಿತ್ರವಾಗಿಯೂ ಬಹು ಬೆಲೆಯುಳ್ಳದಾಗಿಯೂ ಇರುವ ಭದ್ರಾಸನವನ್ನು ಹಾಕಿಕೊಂಡು ಅದರಲ್ಲಿ ಕುಳಿತಿರುವನು. ಆ ಸಭೆಯಲ್ಲಿ ಯಾರು ಯಾರು ಲೋಕಹಿತದಲ್ಲಿ ಅವರ ಕಾರ್ಯದಲ್ಲಿ ಆಸಕ್ತರಾಗಿರುವರೋ ಅವರನ್ನು ಆ ಲೋಕಕಾರ್ಯಕ್ಕೋಸ್ಕರವಾಗಿ ನೋಡಿ ಮಾತನಾಡುತ್ತ ಕುಳಿತಿದ್ದನು.

೪೧. ಆ ಸಮಯದಲ್ಲಿ ಆ ಬ್ರಹ್ಮನು ಈ ಕೌಶಿಕನೇ ಮುಂತಾದವರೊಡನೆ ಬಂದು ಸ್ವಾಮಿಯ ಎದುರಿನಲ್ಲಿ ನಮಸ್ಕರಿಸಿ ಆ ಸ್ವಾಮಿಯನ್ನು ಸ್ತುತಿಸಿದನು.

ತತೋಽವಲೋಕ್ಯ ಭಗವಾನ್ ಹರಿರ್ನಾರಾಯಣಃ ಪ್ರಭುಃ ।
ಕೌಶಿಕೇತ್ಯಾಹ ಸಂಪ್ರೀತ್ಯಾ ತಾನ್ ಸರ್ವಾಂಶ್ಚ ಯಥಾಕ್ರಮಂ ॥ ೪೨ ॥

ಜಯಘೋಷೋ ಮಹಾನಾಸೀನ್ಮಹಾಶ್ಚರ್ಯೇ ಸಮಾಗತೇ ।
ಬ್ರಹ್ಮಾಣಮಾಹ ವಿಶ್ವಾತ್ಮಾ ಶೃಣು ಬ್ರಹ್ಮನ್ ಯಥೋದಿತಂ ॥ ೪೩ ॥

ಕೌಶಿಕಸ್ಯ ಚ ಯೇ ವಿಪ್ರಾಃ ಸಾಧ್ಯಸಾಧನತತ್ಪರಾಃ ।
ಹಿತಾಯ ಸಂಪ್ರವೃತ್ತಾ ವೈ ಕುಶಸ್ಥಲ ನಿವಾಸಿನಃ ॥ ೪೪ ॥

ಮತ್ಕೀರ್ತಿಶ್ರವಣೇ ಯುಕ್ತಾ ಗಾನತತ್ವಾರ್ಥಕೋವಿದಾಃ ।
ಅನನ್ಯದೇವತಾ ಭಕ್ತಾಃ ಸಾಧ್ಯಾ ದೇವಾ ಭವಂತ್ವಿಮೇ ॥ ೪೫ ॥

ಮತ್ಸಮೀಪೇ ತಥಾಸ್ತ್ಯಸ್ಯ ಪ್ರವೇಶಂ ದೇಹಿ ಸರ್ವದಾ ।
ಏವಮುಕ್ತ್ವಾ ಪುನರ್ದೇವಃ ಕೌಶಿಕಂ ಪ್ರಾಹ ಮಾಧವಃ ॥ ೪೬ ॥

---

೪೨. ಆ ಪ್ರಭುವಾದ ನಾರಾಯಣನು ಆಗ ಅವರೆಲ್ಲರನ್ನೂ ನೋಡಿ ಪ್ರೀತಿಯಿಂದ "ಕೌಶಿಕ" ಎಂಬದಾಗಿ ಕೂಗಿದನು ಮತ್ತು ಮಿಕ್ಕವರನ್ನು ಕ್ರಮವಾಗಿ ಮಾತನಾಡಿಸಿದನು.

೪೩. ಆಗ ಜಯ ಜಯ ಎಂಬ ಕೂಗು ಬಹುವಾಗಿ ಉಂಟಾಯಿತು. ಈ ರೀತಿಯಾಗಿ ಎಲ್ಲರಿಗೂ ಆಶ್ಚರ್ಯವಾಗುತ್ತಿರಲು ಆ ವಿಶ್ವಾತ್ಮನಾದ ಸ್ವಾಮಿಯು ಬ್ರಹ್ಮನನ್ನು ಕುರಿತು ಇಂತೆಂದನು.

೪೪-೪೫. ಈ ಕುಶಸ್ಥಲದ ಮನುಷ್ಯರು ಕೌಶಿಕನಿಗೆ ಒಳ್ಳೆಯದನ್ನು ಮಾಡಲು ತಾವು ಮಾಡಬೇಕಾದ ಕೆಲಸದಲ್ಲಿ ತೊಡಗಿದರು. ಮತ್ತು ತಾವೂ ಒಳ್ಳೆಯ ವಿಷಯದಲ್ಲಿ ಹೊರಟು ಮೋಕ್ಷವನ್ನು ಹೊಂದಬೇಕೆಂದು ಉದ್ದೇಶಪಟ್ಟರು. ಅವರು ನನ್ನ ಕೀರ್ತಿಯನ್ನು ಕೇಳುತ್ತ ಗಾನತತ್ವದಲ್ಲಿ ಆಸಕ್ತರಾಗಿದ್ದರು. ಮತ್ತು ಬೇರೆಯ ದೇವರಲ್ಲಿ ಭಕ್ತಿಯನ್ನೇ ಇಟ್ಟಿರಲಿಲ್ಲ. ಆದ್ದರಿಂದ ಅವರು ಸಾಧ್ಯರೆಂಬ ದೇವತಾ ವಿಶೇಷರಾಗಲಿ.

೪೬. ಇವರು ಬೇಕಾದಾಗ ನನ್ನ ಹತ್ತಿರಕ್ಕೆ ಬರಬಹುದು. ಎಂದು ಹೇಳಿ ಆ ಮಾಧವನು ಕೌಶಿಕನನ್ನು ಕುರಿತು ಇಂತೆಂದನು.

ಸ್ವಶಿಷ್ಯೈಸ್ತ್ವಂ ಮಹಾಪ್ರಾಜ್ಞ ದಿಗ್ಬಲೋ ನಾಮ ವೈ ಸದಾ ।
ಗಣಾಧಿಪತ್ಯಮಾಪನ್ನೋ ಯತ್ರಾಹಂ ತತ್ರಮಾಸ್ವ ವೈ ॥ ೪೭ ॥

ಮಾಲತೀ ಮಾಲವಂ ಚೇತಿ ಪ್ರಾಹ ದಾನೋದರೋ ವಚಃ ।
ಮಮ ಲೋಕೇ ಯಥಾ ಕಾಮಂ ಭಾರ್ಯಯಾ ಸಹ ಮಾಲವ ॥ ೪೮ ॥

ದಿವ್ಯರೂಪಧರಃ ಶ್ರೀಮಾನ್ ಶೃಣ್ವನ್ ಗಾನಮಿಹಾನುಗೈಃ ।
ಆಸ್ವ ನಿತ್ಯಂ ಯಥಾ ಕಾಮಂ ಯಾವಲ್ಲೋಕಾ ಭವಂತಿ ವೈ ॥ ೪೯ ॥

ಪದ್ಮಾಕ್ಷಮಾಹ ಭಗವಾನ್ ಧನದೋ ಭವ ಮಾನದ ।
ಧನಾನಾಮೀಶ್ವರೋ ಭೂತ್ವಾ ವಿಹರಸ್ವ ಯಥಾಸುಖಂ ॥ ೫೦ ॥

ಬ್ರಹ್ಮಾಣಂ ಚ ತತಃ ಪ್ರಾಹ ಕೌಶಿಕೋಭೂದ್ಗಣಾಧಿಪಃ ।
ಗಣಾಃ ಸ್ತೋಷ್ಯಂತಿ ತಂ ಚಾಶು ಪ್ರಾಪ್ತೋ ಮೇಸ್ತಿ ಸಲೋಕತಾಂ ॥ ೫೧ ॥

---

೪೭. ಎಲೈ ಪ್ರಾಜ್ಞನಾದ ಕೌಶಿಕನೇ! ನೀನು ದಿಗ್ಬಲನೆಂಬ ಹೆಸರುಳ್ಳವನಾಗಿ ಗಣಗಳಿಗೆ ಅಧಿಪತಿಯಾಗಿ ನಾನಿರುವಲ್ಲಿಯೇ ಯಾವಾಗಲೂ ಇರು.

೪೮-೪೯. ಮಾಧವನು ಮಾಲತಿ ಮಾಳವರನ್ನು ಕುರಿತು ಇಂತೆಂದನು. ಎಲೈ ಮಾಳವನೆ! ನೀನು ನಿನ್ನ ಹೆಂಡತಿಯೊಡನೆ ನನ್ನ ಲೋಕದಲ್ಲಿ ಇಷ್ಟಬಂದಂತೆ ದಿವ್ಯ ರೂಪಗಳನ್ನು ಹೊಂದಿ ನಿನ್ನ ಜೊತೆಯವರೊಡನೆ ಗಾನವನ್ನು ಕೇಳುತ್ತ ಈ ಲೋಕಗಳು ಇರುವವರೆಗೂ ನಿತ್ಯವೂ ಸುಖವಾಗಿರು.

೫೦. ಆ ವಿಷ್ಣುವು ಪದ್ಮಾಕ್ಷನನ್ನು ಕುರಿತು ಎಲೈ ಮಹಾನುಭಾವನೆ! ನೀನು ಕುಬೇರನಾಗು. ಬೊಕ್ಕಸದ ಅಧಿಕಾರಿಯಾಗಿ ಸುಖವಾಗಿ ವಿಹರಿಸು.

೫೧. ವಿಷ್ಣುವು ಬ್ರಹ್ಮನನ್ನು ಕುರಿತು ಈ ಕೌಶಿಕನು ಗಣಗಳಿಗೆ ಅಧಿಪತಿ ಯಾದನು. ನನ್ನ ಜೊತೆಯನ್ನು ಹೊಂದಿದನು. ಗಣಗಳು ಅವನನ್ನು ಸಂತೋಷ ಪಡಿಸುತ್ತವೆ.

ಏತೇ ಚ ವಿಪ್ರಾ ನಿಯತಂ ಮಮ ಭಕ್ತಾ ಯಶಸ್ವಿನಃ ।
ಶ್ರೋತ್ರಚ್ಛಿದ್ರಂ ಯಥಾ ಹತ್ಯ ಶಂಕುಭಿರ್ನ್ಯೈ ಪರಸ್ಪರಂ ॥ ೫೨ ॥

ಶ್ರೋಷ್ಯಾಮೋ ನೈವ ಚಾನ್ಯದ್ವೈ ಹರೇಃ ಕೀರ್ತಿಂ ವಿನೇತಿ ಯೇ ।
ಮಹಾವ್ರತಧರಾ ವಿಪ್ರಾ ಮಮ ಭಕ್ತಿ ಪರಾಯಣಾಃ ॥ ೫೩ ॥

ಏತೇ ಪ್ರಾಪ್ತಾಶ್ಚ ದೇವತ್ವಂ ಮಮ ಸಾನ್ನಿಧ್ಯಮೇವ ಚ ।
ಮಾಲವೋ ಭಾರ್ಯಯಾ ಸಾರ್ಧಂ ಮತ್ ಕ್ಷೇತ್ರಂ ಪರಿಗೃಹ್ಯ ವೈ ॥ ೫೪ ॥

ಗಾನಮಾನಾದಿಭಿರ್ನಿತ್ಯಂ ಅಭ್ಯರ್ಚ್ಯ ಸತತಂ ಹಿ ಮಾಂ ।
ಗಾನಂ ಶೃಣೋತಿ ನಿಯತೋ ಮತ್ಕೀರ್ತಿ ಚರಿತಾನ್ವಿತಂ ॥ ೫೫ ॥

ತೇನಾಸೌ ಪ್ರಾಪ್ತವಾನ್ ಲೋಕಂ ಮಮ ಬ್ರಹ್ಮ ಸನಾತನಂ ।
ಪದ್ಮಾಕ್ಷೋಽಸೌ ಮಹಾಭಾಗಃ ಕೌಶಿಕಸ್ಯ ಮಹಾತ್ಮನಃ ॥ ೫೬ ॥

---

೫೨-೫೩. ಈ ಭಕ್ತರು ನಿಯಮವುಳ್ಳವರು. ಯಶಸ್ವಿಗಳು. ಇವರು ಕಿವಿಯ ರಂಧ್ರವನ್ನು ಮುಚ್ಚಿಕೊಂಡು ಕಡ್ಡಿಗಳಿಂದ ಚುಚ್ಚಿಕೊಂಡು ಹರಿಯ ಕೀರ್ತಿಯನ್ನು ಹೊರತಾಗಿ ಮತ್ತೊಂದನ್ನು ಕೇಳುವುದಿಲ್ಲ ಎಂದು ನನ್ನಲ್ಲಿ ಭಕ್ತಿಯನ್ನಿಟ್ಟು ದೊಡ್ಡ ವ್ರತವನ್ನು ಧರಿಸಿದ್ದರು. ಇವರು ದೇವತ್ವವನ್ನು ಹೊಂದಿ ನನ್ನ ಜೊತೆಯಲ್ಲಿಯೇ ಇರುವರು.

೫೪-೫೫. ಮಾಲವನು ಹೆಂಡತಿಯೊಡನೆ ನನ್ನ ಕ್ಷೇತ್ರಗಳಲ್ಲಿದ್ದು ಅಲ್ಲಿ ನನ್ನನ್ನು ಗಾನಮಾನಗಳಿಂದ ಯಾವಾಗಲೂ ಪೂಜಿಸುತ್ತ ನನ್ನ ಕೀರ್ತಿಯಿಂದಲೂ ಚರಿತ್ರೆಯಿಂದಲೂ ಕೂಡಿರುವ ಗಾನವನ್ನು ಕೇಳುತ್ತಿದ್ದನು.

೫೬-೫೭. ಆದ್ದರಿಂದ ಅವನು ನನ್ನ ಸನಾತನವಾದ ಲೋಕವನ್ನು ಹೊಂದಿದನು. ಈ ಪದ್ಮಾಕ್ಷನು ಕೌಶಿಕನ ಭಂಡಾರಕ್ಕೆ ಯಜಮಾನನಾಗಿದ್ದುದರಿಂದ ಅವನು ಇಲ್ಲಿಯೂ ಬೊಕ್ಕಸಕ್ಕೆ ಅಧಿಕಾರಿಯಾದನು. ಮತ್ತು ನನ್ನ ಬಳಿಯಲ್ಲಿಯೇ

**ಧನೇಶತ್ವಮವಾಪ್ನೋಽಸೌ ಮಮ ಸಾನ್ನಿಧ್ಯಮೇವ ಚ ।**
**ಏವಮುಕ್ತ್ವಾ ಹರಿಸ್ತತ್ರ ಸಮಾಸ್ತೇ ಲೋಕಪೂಜಿತಃ ॥ ೫೭ ॥**

**ತತೋ ಹರಿರ್ಭಕ್ತಜನೈಃ ಸಮಾವೃತಃ ಸುಖೇನ ತಸ್ಥೌ ಕನಕಾಸನೇ ಶುಭೇ।**
**ಭಕ್ತೈಕಗಮ್ಯೋ ನಿಜಭಕ್ತಲೋಕಾನ್ ಸ ಲಾಲಯನ್ ಪಾಣಿಸರೋರುಹೇಣ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ಕೌಶಿಕಾದಿ ವೈಕುಂಠಗಮನಂ**
**ನಾಮ ಪಂಚಮಃ ಸರ್ಗಃ**



ಇರುವನು. ಹರಿಯು ಬ್ರಹ್ಮನಿಗೆ ಹೀಗೆಂದು ಹೇಳಿ ಲೋಕಪೂಜಿತನಾಗಿ ಅಲ್ಲಿದ್ದನು.

೫೮. ಭಕ್ತರಿಗೆ ಸುಲಭನಾದ ಆ ಹರಿಯು ಭಕ್ತಜನಗಳಿಂದ ಕೂಡಿಕೊಂಡು ಚಿನ್ನದ ಪೀಠದಲ್ಲಿ ಸುಖವಾಗಿ ಕುಳಿತುಕೊಂಡು ಎಲ್ಲರನ್ನೂ ತನ್ನ ಕಮಲದಂತಿರುವ ಕೈಗಳಿಂದಲೇ ಲಾಲಿಸುತ್ತ ಸುಖವಾಗಿರುವನು.

ಇಂತು ವಾಲ್ಮೀಕಿ ಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಕೌಶಿಕಾದಿಗಳು ವೈಕುಂಠಕ್ಕೆ
ಹೋದರೆಂಬ ಐದನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ಅಥ ಷಷ್ಠಃ ಸರ್ಗಃ



ತಸ್ಮಿನ್ ಕ್ಷಣೇ ಸಮಾರಬ್ಧೋ ಮಧುರಾಕ್ಷರಪೇಶಲೈಃ ।
ಮಹಾಮಹೋತ್ಸವಸ್ತತ್ರ ಕೌಶಿಕಪ್ರೀತಯೇದ್ಭುತಃ ॥ ೧ ॥

ವಿಪಂಚೀಗುಣತತ್ವಜ್ಞೈರ್ವಾದ್ಯವಿದ್ಯಾವಿಶಾರದೈಃ ।
ತತಸ್ತಚ್ಛ್ರವಣಾಯಾಲಂ ಚೇಟೀಕೋಟಿಸಮಾವೃತಾ ॥ ೨ ॥

ಗಾಯಮಾನಾ ಸಮಾಯಾತಾ ಲಕ್ಷ್ಮೀಃ ವಿಷ್ಣುಪರಿಗ್ರಹಃ ।
ವೃತಾ ಸಹಸ್ರಕೋಟೀಭಿಃ ವೇತ್ರಪಾಣಿಭಿರಾಶುಗೈಃ ॥ ೩ ॥

## ಆರನೆಯ ಸರ್ಗವು

೧. ಆಗ ಅಲ್ಲಿ ಈ ಕೌಶಿಕನಲ್ಲಿರುವ ಪ್ರೀತಿಯನ್ನು ತೋರಿಸಲು ಮಧುರವಾದ ಮಾತುಗಳುಳ್ಳ ಒಂದು ಮಹೋತ್ಸವವು ನಡೆಯಿತು. ಅದು ಅದ್ಭುತವಾಗಿದ್ದಿತು.

೨-೩. ಆಗ ಆ ಮಹೋತ್ಸವದಲ್ಲಿ ವೀಣೆಯೇ ಮುಂತಾದುವನ್ನು ಬಲ್ಲ ವಾದ್ಯ ವಿದ್ಯಾ ವಿಶಾರದರು ಹಾಡುವುದಕ್ಕೂ ವಾದ್ಯವನ್ನು ಬಾರಿಸುವುದಕ್ಕೂ ಸಿದ್ಧರಾದರು. ಅನಂತರ ಆ ಗಾನವನ್ನು ಕೇಳಲು ಅನೇಕ ಕೋಟಿ ಜನ ಚೇಟಿಯರಿಂದ ಕೂಡಿಕೊಂಡು ವಿಷ್ಣುವಿನ ಹೆಂಡತಿಯಾದ ಲಕ್ಷ್ಮಿಯು ಬಂದಳು. ಆಗ ಅನೇಕಜನ ಆ ಲಕ್ಷ್ಮಿಯ ಸೇವಕರು ಕೈಯ್ಯಲ್ಲಿ ಬೆತ್ತವನ್ನು ಹಿಡಿದುಕೊಂಡು ಜಾಗ್ರತೆಯಾಗಿ ಮುಂದೆ ಬರುತ್ತಿದ್ದರು.

ಬ್ರಹ್ಮಾದಿಸುರಸಂಘಾನಾಂ ಘನಂ ದೃಷ್ಟ್ವಾ ಸಮಾಗಮಂ ।
ಚೇಟೀಗಣಾಧಿಪಾ ರುಷ್ಟಾ ಭುಶುಂಡಿಪರಿಘಾನ್ವಿತಾಃ ॥ ೪ ॥

ಬ್ರಹ್ಮಾದೀನ್ ತರ್ಜಯಂತ್ಯಸ್ತಾನ್ ಮುನೀಂಶ್ಚಾಪಿ ಸಮಂತತಃ ।
ಉತ್ಸಾರ್ಯ ದೂರಂ ಸಂಹೃಷ್ಟಾ ನಿಷ್ಠಿತಾಃ ಪರ್ವತೋಪಮಾಃ ॥ ೫ ॥

ಸರ್ವೇ ಬಹಿರ್ವಿನಿರ್ಯಾತಾಃ ಸಾರ್ಧಂ ವೈ ಬ್ರಹ್ಮಣಾ ಸುರಾಃ ।
ಯುಕ್ತಮಿತ್ಯೇವ ಭಾಷಂತಃ ಪ್ರಭೋರಗ್ರೇ ವಯಂ ತು ಕೇ ॥ ೬ ॥

ತಸ್ಥುಃ ಪ್ರಾಂಜಲಯಃ ಸರ್ವೇ ತ್ರಿದಶಾ ಗತಮನ್ಯವಃ ।
ತಸ್ಮಿನ್ ಕ್ಷಣೇ ಸಮಾಹೂತಃ ತುಂಬುರುರ್ಮಾನಪೂರ್ವಕಂ ॥ ೭ ॥

ಪ್ರವಿವೇಶ ಸಮೀಪಂ ವೈ ದೇವ್ಯಾ ದೇವಸ್ಯ ಚೈವ ಹಿ ।
ತತ್ರಾಸೀನೋ ಯಥಾಯೋಗಂ ನಾನಾಮೂರ್ಛಾಕ್ಷರಾನ್ವಿತಂ ॥ ೮ ॥

೪-೫. ಬ್ರಹ್ಮನೇ ಮುಂತಾದವರು ಅಲ್ಲಿ ಗುಂಪು ಕೂಡಿಕೊಂಡಿರಲು ಆ ಗುಂಪನ್ನು ನೋಡಿ ಆಳುಗಳ ಯಜಮಾನರು ಕೋಪಗೊಂಡು ಭುಶುಂಡಿ ಪರಿಘ ಗಳೆಂಬ ಆಯುಧಗಳನ್ನು ತೆಗೆದುಕೊಂಡು ಅವರನ್ನೂ ಮುನೀಶ್ವರರನ್ನೂ ಗದರಿಸುತ್ತ ದೂರವಾಗಿ ಓಡಿಸಿದರು. ಎಲ್ಲರನ್ನೂ ದೂರಕಳುಹಿಸಿದೆವೆಂದು ಸಂತೋಷದಿಂದ ನೋಡುವುದಕ್ಕೆ ಪರ್ವತದಂತಿರುತ್ತ ಅಲ್ಲಲ್ಲಿ ಕಾಯುತ್ತ ನಿಂತರು.

೬. ಆಗ ಬ್ರಹ್ಮನೂ ಅವರೊಡನೆ ದೇವತೆಗಳೂ ಎಲ್ಲರೂ ಹೊರಗೆ ಬಂದರು. ಆವರೆಲ್ಲರೂ ಆಳುಗಳು ಕಳುಹಿಸುವುದು ಯುಕ್ತವಾಗಿಯೇ ಇದೆ. ಸ್ವಾಮಿಯ ಎದುರಿನಲ್ಲಿ ನಾವು ಎಷ್ಟರವರು? ಎಂದೆನ್ನುತ್ತಿದ್ದರು.

೭. ಆ ದೇವತೆಗಳೆಲ್ಲರೂ ಕೋಪವನ್ನು ಮಾಡದೆ ಕೈ ಮುಗಿದುಕೊಂಡಿದ್ದರು. ಆಗ ತುಂಬುರುವನ್ನು ಗೌರವಿಸಿ ಕರೆಯಲು ಅವನು ಆ ಸ್ವಾಮಿಯ ಮತ್ತು ಆತನ ಹೆಂಡತಿಯ ಎದುರಿಗೆ ಹೋಗಿ ನಿಂತನು.

೮-೯. ಆ ತುಂಬುರುವು ಅಲ್ಲಿ ತಾನು ಹಾಡಲು ಹೇಗೆ ಕುಳಿತರೆ ಅನುಕೂಲವೋ ಆ ರೀತಿಯಾಗಿ ಕುಳಿತುಕೊಂಡು ಅನೇಕವಾದ ಆಲಾಪಗಳಿಂದ ಕೂಡಿದ ಮನೋಹರವಾದ ಗಾನವನ್ನು ಹಾಡಲು ಮೊದಲು ಮಾಡಿದನು. ಮತ್ತು ವೀಣೆಯನ್ನು

ಜಗೌ ಕಲಪದಂ ಹೃಷ್ಟೋ ವಿಪಂಚೀಂಚಾಪ್ಯವಾದಯತ್ ।
ವಿಷ್ಣುನಾ ಕೌಶಿಕಪ್ರೀತ್ಯೈ ಪ್ರಯುಕ್ತೋ ಗಾಯಕೋತ್ತಮಃ ॥ ೯ ॥

ನಾನಾರತ್ನ ಸಮಾಯುಕ್ತೈಃ ದಿವ್ಯೈರಾಭರಣೋತ್ತಮೈಃ ।
ದಿವ್ಯಮಾಲ್ಯೈಶ್ಚ ವಸನೈಃ ಪೂಜಿತಾ ವಿಷ್ಣುಮಂದಿರಾತ್ ॥ ೧೦ ॥

ನಿರ್ಗತಾಸ್ತುಂಬುರುರ್ಹೃಷ್ಟೋ ಜಗಾಮ ಸ ಯಥಾಗತಂ ।
ಬ್ರಹ್ಮಾದ್ಯಾಸ್ತ್ರಿದಶಾಸ್ಸರ್ವೇ ಮುನಯಶ್ಚ ಯಥಾಗತಂ ॥ ೧೧ ॥

ಜಗ್ಮುರ್ವಿಷ್ಣುಂ ಪ್ರಣಮ್ಯೋಚ್ಚೈಃ ಜಯೇತಿಭಾಷಿಣಸ್ತತಃ ।
ನಾರದೋಥ ಮುನಿರ್ದೃಷ್ಟ್ವಾ ತುಂಬುರೋಃ ಸತ್ಕ್ರಿಯಾಂ ಹರೇಃ ॥ ೧೨ ॥

ಶೋಕಾವಿಷ್ಟೇನ ಮನಸಾ ಸಂತಪ್ತಹೃದಯೇಕ್ಷಣಃ ।
ಚಿಂತಾಮಾಪೇದಿವಾನ್ ತತ್ರ ಶೋಕಮೂರ್ಛಾಕುಲಾಂತರಃ ॥ ೧೩ ॥

ನುಡಿಸುತ್ತಿದ್ದನು. ಈ ರೀತಿಯಾದ ಉತ್ತಮವಾದ ಗಾನವು ವಿಷ್ಣುವಿನಿಂದ ಕೌಶಿಕನ ಪ್ರೀತಿಗೋಸ್ಕರ ಪ್ರಾರಂಭಿಸಲ್ಪಟ್ಟಿತು.

೧೦. ಬಗೆಬಗೆಯಾದ ರತ್ನಗಳಿಂದ ಕೂಡಿದ ಆಭರಣಗಳಿಂದಲೂ ಗಂಧ ಹೂವುಗಳಿಂದಲೂ ಬಟ್ಟೆಬರೆಗಳಿಂದಲೂ ಆ ಸಂಗೀತಗಾರರೇ ಮುಂತಾದವರನ್ನು ಗೌರವಿಸಲು ಅವರು ಆ ವಿಷ್ಣುವಿನ ಮನೆಯಿಂದ ಹೊರಟು ಹೋದರು. ತುಂಬುರುವೂ ಸಂತೋಷಗೊಂಡು ಹೊರಟುಹೋದನು.

೧೧. ಬ್ರಹ್ಮಾದಿ ದೇವತೆಗಳೂ ಮುನಿಗಳೂ ಕೂಡ ವಿಷ್ಣುವಿಗೆ ನಮಸ್ಕರಿಸಿ ಜಯಜಯಕಾರ ಮಾಡುತ್ತ ಹೊರಟು ಹೋದರು.

೧೨-೧೩. ನಾರದನು ಈ ತುಂಬುರುವಿಗೆ ವಿಷ್ಣುವು ಗೌರವಿಸಿದುದನ್ನು ನೋಡಿ ದುಃಖಗೊಂಡು ಬಹುವಾಗಿ ತಪಿಸಿದನು. ಶೋಕವು ಬಹು ಹೆಚ್ಚಲು ಆಗ ಬಹು ಚಿಂತೆಗೊಳಗಾದನು.

ತತಃ ಕ್ರೋಧೇನ ಮಹತಾ ಜಜ್ವಾಲ ಮುನಿಪುಂಗವಃ ।
ಲಕ್ಷ್ಮೀಂ ಶಶಾಪ ಸಹಸಾ ತದ್ದಾಸೀಭಿಸ್ತಿರಸ್ಕೃತಃ || ೧೪ ||

ಯದಹಂ ರಾಕ್ಷಸಂ ಭಾವಂ ಗೃಹೀತ್ವಾ ವಿಷ್ಣುಕಾಂತಯಾ ।
ಚೇಟೀಭಿರ್ದ್ವಾರಿತೋ ದೂರಂ ವೇತ್ರಾಘಾತೇನ ತಾಡಿತಃ ॥ ೧೫ ॥

ತಸ್ಮಾತ್ಸಂಜಾಯತಾಂ ಲಕ್ಷ್ಮೀಂ ರಕ್ಷಸಾಂ ಗರ್ಭಸಂಭವಾ ।
ಯತೋಽಹಂ ಬಹಿರಾಕ್ಷಿಪ್ತ ಶ್ಚೇಟೀಭಿಃ ಸಾವಹೇಳನಂ ॥ ೧೬ ॥

ಹೇಲಯಾ ರಾಕ್ಷಸೀ ಚ ತ್ವಾಂ ಬಹಿಃಕ್ಷೇಪ್ಸ್ಯತಿ ಭೂತಳೇ ।
ಇತ್ಯುಕ್ತೇ ನಾರದೇನಾಥ ಚಕಂಪೇ ಭುವನತ್ರಯಂ ॥ ೧೭ ॥

ಹಾಹಾಕಾರಂ ತತಶ್ಚಕ್ರುಃ ದೇವಗಂಧರ್ವದಾನವಾಃ ।
ನಾರದೋ ವಿಲಲಾಪಾಥ ಧಿಙ್ಮಾಂಧಿಙ್ಮಾಮಿತಿ ಬ್ರುವನ್ ॥ ೧೮ ॥

೧೪. ಈ ಅವಮಾನದಿಂದ ಅವನಿಗೆ ಕೋಪ ಬಂದು ಬಹುವಾಗಿ ಜ್ವಲಿಸಿದನು. ಆಗ ಆ ದಾಸಿಯರಿಂದ ತಿರಸ್ಕೃತನಾದುದನ್ನು ತಿಳಿದು ಯೋಚಿಸದೆ ಲಕ್ಷ್ಮಿಗೆ ಶಾಪವನ್ನು ಕೊಟ್ಟನು.

೧೫. ವಿಷ್ಣುಕಾಂತೆಯಾದ ಲಕ್ಷ್ಮಿಯು ರಾಕ್ಷಸಭಾವವನ್ನು ಹೊಂದಿ ಆ ಚೇಟಿಯರ ಕೈಯ್ಯಲ್ಲಿ ದೂರದಲ್ಲಿಯೇ ತಡೆಯಲ್ಪಟ್ಟವನಾಗಿ ಬೆತ್ತದಿಂದ ಹೊಡೆಸಲ್ಪಟ್ಟೆನಾದುದರಿಂದ ಆ ಲಕ್ಷ್ಮಿಯು ರಾಕ್ಷಸರ ಹೊಟ್ಟೆಯಲ್ಲಿ ಹುಟ್ಟಲಿ.

೧೬-೧೭. ನನ್ನನ್ನು ಆ ಲಕ್ಷ್ಮಿಯ ಸೇವಕಿಯರು ಅವಮಾನಮಾಡಿ ಹೊರಕ್ಕೆ ನೂಕಿದುದರಿಂದ ಆಕೆಯನ್ನು ಹೊರಗಡೆ ನೆಲದಮೇಲೆ ಎಸೆಯಲಿ. ಎಂಬುವಾಗಿ ನಾರದನು ಶಪಿಸಲು ಮೂರು ಲೋಕವೂ ನಡುಗಿತು.

೧೮. ಆಗ ದೇವ ಗಂಧರ್ವ ದಾನವರೆಲ್ಲರೂ ಹಾಹಾ ಎಂದು ಎನ್ನುತ್ತಿದ್ದರು. ನಾರದನೂ ಕೂಡ ನನಗೆ ಧಿಕ್ಕಾರವಿರಲಿ. ನನಗೆ ಧಿಕ್ಕಾರವಿರಲಿ. ನಾನು ಏನು ಮಾಡಿಬಿಟ್ಟೆ? ಎಂಬುದಾಗಿ ಗಟ್ಟಿಯಾಗಿ ಅಳಲು ಮೊದಲಿಟ್ಟನು.

ನಾರಾಯಣಸಮಾಯೋಗೇ ಮಹಾಲಕ್ಷ್ಮ್ಯೇಸಮೀಪತಃ ।
ಅಹೋ ತುಂಬುರಣಾ ಪ್ರಾಪ್ತೋ ಧಿಙ್ಮಾಂಮೂಢಮಚೇತನಂ ॥ ೧೯ ॥

ಯೋಽಯಂ ಹರೇಸ್ಸನ್ನಿಕಾಶಾದ್ದೂತೈರ್ನಿರ್ವಾಸಿತಃ ಕಥಂ ।
ಜೀವನ್ ಯಾಸ್ಯಾಮಿ ಕುತ್ರಾಹಂ ಕಿಂ ಮೇ ತುಂಬುರಣಾ ಕೃತಂ ॥ ೨೦ ॥

ರೋದಮಾನೋ ಮುಹುರ್ನಿದ್ವಾನ್ ಧಿಙ್ಮಾಮಿತಿ ಚ ಚಿಂತಯನ್ ।
ತತೋ ನಾರಾಯಣೋ ಲಕ್ಷ್ಮ್ಯಾಃ ಶಾಪಂ ಶ್ರುತ್ವಾ ಸುದಾರುಣಂ ॥ ೨೧ ॥

ಲಕ್ಷ್ಮ್ಯಾ ಸಹ ಹೃಷೀಕೇಶಃ ಆಜಗಾಮ ಯತೋ ಮುನಿಃ ।
ರಮಾ ಪ್ರಸಾದ್ಯ ತಂ ವಿಪ್ರಂ ಪ್ರತ್ಯುವಾಚ ಕೃತಾಂಜಲಿಃ ॥ ೨೨ ॥

ಯದುಕ್ತಂ ಭವತಾ ಮಹ್ಯಂ ತತ್ತಥಾ ನ ತದನ್ಯಥಾ ।
ತತ್ರ ಕಿಂಚಿತ್ಪ್ರಾರ್ಥಯಾಮಿ ಮುನೇ ತತ್ಕೃಪಯಾ ಕುರು ॥ ೨೩ ॥

೧೯. ಮಹಾಲಕ್ಷ್ಮಿಯ ಸಮೀಪದಲ್ಲಿ ಆ ಸ್ವಾಮಿಯಾದ ನಾರಾಯಣನ ಬಳಿ ಇರುವಿಕೆಯು ತುಂಬುರುವಿಗೆ ಸಿಕ್ಕಿತು. ನಾನು ದಡ್ಡನು. ಜ್ಞಾನಶೂನ್ಯನು. ನನಗೆ ಧಿಕ್ಕಾರವಿರಲಿ.

೨೦. ನನ್ನನ್ನು ಹರಿಯ ಬಳಿಯಿಂದ ದೂತರು ಓಡಿಸಿಬಿಟ್ಟರಲ್ಲ! ಏಕೆ ಓಡಿಸಿದರು? ಈ ಪ್ರಾಣವನ್ನಿಟ್ಟಿಕೊಂಡು ನಾನು ಎಲ್ಲಿ ತಾನೆ ಮಾನವಿಲ್ಲದೆ ಹೋಗಲಿ? ತುಂಬುರುವು ಏನು ಕೆಲಸವನ್ನು ಮಾಡಿಬಿಟ್ಟನು.

೨೧-೨೨. ತಿಳಿವಳಿಕೆಯುಳ್ಳವನಾದರೂ ಆ ನಾರದನು ನನಗೆ ಧಿಕ್ಕಾರವಿರಲಿ ಎಂಬದಾಗಿ ಅಳುತ್ತ ಯೋಚಿಸುತ್ತಿದ್ದನು. ಆಗ ನಾರಾಯಣನು ನಾರದನು ಲಕ್ಷ್ಮಿಗೆ ಶಾಪ ಕೊಟ್ಟದ್ದನ್ನು ತಿಳಿದು ಆ ಲಕ್ಷ್ಮಿಯೊಡನೆ ನಾರದನಿರುವಲ್ಲಿಗೆ ಬಂದನು. ಆಗ ಲಕ್ಷ್ಮಿಯು ಆ ನಾರದನನ್ನು ಸಮಾಧಾನಪಡಿಸಿ ಕೈ ಮುಗಿದುಕೊಂಡು ಇಂತೆಂದಳು

೨೩. ಎಲೈ ಮುನಿಯೇ! ನೀನು ಹೇಳಿದಂತೆಯೇ ಆ ಶಾಪವನ್ನು ಅನು ಭವಿಸಬೇಕು. ಅದನ್ನು ಮಾರ್ಪಡಿಸಲಾಗುವುದೇ ಇಲ್ಲ. ಆದರೆ ಅದರಲ್ಲಿ ಒಂದು ವಿಷಯವನ್ನು ಕೇಳಿಕೊಳ್ಳುತ್ತೇನೆ. ಎಲೈ ಮುನಿಯೇ! ಅದನ್ನು ಕೃಪೆಯಿಟ್ಟು ನಡಿಸಿಕೊಡು.

ಆರಣ್ಯಾನಾಂ ಮುನೀನಾಂ ವೈ ಸ್ತೋಕಂ ಸ್ತೋಕಂ ಚ ಶೋಣಿತಂ ।
ಕಲಶಾಪೂರಿತಂ ಭಕ್ಷ್ಯೇದ್ರಾಕ್ಷಸೀ ಯಾ ಚ ಕಾಮತಃ ॥ ೨೪ ॥

ತಸ್ಯಾ ಗರ್ಭೇ ಭವಿಷ್ಯಾಮಿ ತಚ್ಛೋಣಿತಸಮುದ್ಭವಾ ।
ಇತ್ಯುಕ್ತಂ ರಮಯಾ ಚಿಂತ್ಯಾಸಂಭವಾನ್ನೋ ಭವೇದಿತಿ ॥ ೨೫ ॥

ನಾರದಸ್ತು ತಥೇತ್ಯಾಹ ಅಸ್ಯಾಃ ಸರ್ವಂ ಹಿ ದಾರುಣಂ ।
ತತೋ ನಾರಾಯಣೋ ದೇವಃ ಪ್ರೋಕ್ತವಾನ್ನಾರದಂ ಮುನಿಃ ॥ ೨೬ ॥

ನಾಹಂ ದಾನೇನ ತಪಸಾ ನೇಜ್ಯಯಾ ನಾಪಿ ತೀರ್ಥತಃ ।
ಸಂತುಷ್ಯಾಮಿ ದ್ವಿಜಶ್ರೇಷ್ಠ ಯಥಾ ನಾಮ್ನಾಂ ಪ್ರಕೀರ್ತನಾತ್ ॥ ೨೭ ॥

ಗಾನೇನ ನಾಮಗುಣಯೋಃ ಮಮ ಸಾಯುಜ್ಯಮಾಪ್ನುಯಾತ್ ।
ನಿದರ್ಶನಂ ಕೌಶಿಕೋತ್ರ ಗಾನಾತ್ ಮಲ್ಲೋಕಮಾಪ್ತವಾನ್ ॥ ೨೮ ॥

೨೪. ಯಾವ ರಾಕ್ಷಸಿಯು ಅರಣ್ಯದಲ್ಲಿರುವ ಮುನಿಗಳ ಸ್ವಲ್ಪ ಸ್ವಲ್ಪ ರಕ್ತವನ್ನು ತೆಗೆದುಕೊಂಡು ಒಂದು ಬಿಂದಿಗೆಯಲ್ಲಿ ತುಂಬಿಕೊಂಡು ಕುಡಿಯುವಳೋ ಅವಳ ಗರ್ಭದಲ್ಲಿ ಆ ಮುನಿಗಳ ರಕ್ತದಿಂದ ನಾನು ಹುಟ್ಟುತ್ತೇನೆ.

೨೫. ಈ ವಿಷಯವು ನಡೆಯುವುದು ಅಸಂಭವವಾದುದರಿಂದ ನಾನು ಹುಟ್ಟಲಾರೆನೆಂದು ಯೋಚಿಸಿ ಇಂತೆಂದಳು. ನಾರದನೂ ಕೂಡ ಈಕೆಯು ಕೇಳಿದ ಆ ಅಸಾಧ್ಯವಾದುದನ್ನು ಹಾಗೆಯೇ ಆಗಲೆಂದು ಒಪ್ಪಿಕೊಂಡನು.

೨೬–೨೭. ಆಗ ಸ್ವಾಮಿಯಾದ ನಾರಾಯಣನು ನಾರದನನ್ನು ಕುರಿತು ಎಲೈ ನಾರದನೇ ! ನಾನು ನನ್ನ ಹೆಸರುಗಳನ್ನು ಹೇಳುವುದರಿಂದ ತೃಪ್ತಿಹೊಂದುವಂತೆ ದಾನದಿಂದಲಾಗಲಿ, ತಪಸ್ಸಿನಿಂದಾಗಲಿ ಪೂಜೆಯಿಂದಾಗಲಿ ತೀರ್ಥಸ್ನಾನದಿಂದಾಗಲಿ ಸಂತೋಷಗೊಳ್ಳುವುದಿಲ್ಲ.

೨೮. ಯಾವನಾದರೂ ಸರಿಯೇ. ನನ್ನ ನಾಮಗಳನ್ನಾಗಲಿ, ನನ್ನ ಗುಣಗಳನ್ನಾಗಲಿ, ಗಾನಮಾಡಿದರೆ ನನ್ನ ಸಾಯುಜ್ಯವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ನನ್ನ ಲೋಕವನ್ನು ಹೊಂದಿದ ಕೌಶಿಕನೇ ಉದಾಹರಣೆಯಾಗಿದ್ದಾನೆ.

ಮೂರ್ಛನಾದಿಯುತಂ ಗಾನಂ ನಾಮ್ನಾಮತಿ ಮಮ ಪ್ರಿಯಂ ।
ತುಂಬುರುಸ್ತತ್ಪ್ರಭಾವೇಣ ಪ್ರಿಯಸ್ತ್ವತ್ತೋಽಪಿ ಮೇ ದ್ವಿಜ ॥ ೨೯ ॥

ಮೂರ್ಛನಾ ತಾಳಯೋಗೇನ ಗಾನೇನ ತ್ವಂ ತಥಾ ಭವ ।
ಉಲೂಕಂ ಪಶ್ಯ ಗತ್ವಾ ತ್ವಂ ಯದಿ ಗಾನೇ ಮತಿಸ್ತವ ॥ ೩೦ ॥

ಮಾನಸೋತ್ತರಶೈಲೇ ತು ಗಾನಬಂಧುರಿತಿ ಸ್ಮೃತಃ ।
ತದ್ಗಚ್ಛ ಶೀಘ್ರಂ ಶೈಲೇಂದ್ರಂ ಗಾನರ್ವಾ ತ್ವಂ ಭವಿಷ್ಯಸಿ ॥ ೩೧ ॥

ಇತ್ಯುಕ್ತೋ ವಿಸ್ಮಯಾವಿಷ್ಟೋ ನಾರದೋ ವಾಗ್ವಿದಾಂ ವರಃ ।
ಮಾನಸೋತ್ತರಶೈಲೇ ತು ಗಾನಬಂಧುಂ ಜಗಾಮ ವೈ ॥ ೩೨ ॥

ಗಂಧರ್ವಾಃ ಕಿನ್ನರಾ ಯಕ್ಷಾಃ ತಥಾ ಚಾಪ್ಸರಸಾಂ ಗಣಾಃ ।
ಸಮಾಸೀನಾಸ್ತು ಪರಿತೋ ಗಾನಬಂಧುಶ್ಚ ಮಧ್ಯತಃ ॥ ೩೩ ॥

---

೨೯. ನನ್ನ ನಾಮಗುಣಗಳನ್ನು ಆಲಾಪನೆ ಮಾಡಿ ಗಾನಮಾಡಿದರೆ ಅದು ನನಗೆ ಬಹುಪ್ರಿಯವಾದುದು. ತುಂಬುರುವು ಆ ಆಲಾಪದ ಗಾನದ ಪ್ರಭಾವದಿಂದಲೇ ನಿನಗಿಂತಲೂ ನನಗೆ ಪ್ರಿಯನಾಗಿದ್ದಾನೆ.

೩೦. ಮೂರ್ಛನೆ, ತಾಳ, ಗಾನಗಳನ್ನು ಸರಿಯಾಗಿ ಕಲಿತು ನೀನೂ ಆ ತುಂಬುರುವಿನಂತೆ ಆಗು. ನಿನಗೆ ಗಾನದಲ್ಲಿ ಆಶೆಯಿದ್ದರೆ ಹೋಗಿ ಸಂಗೀತ ಪಂಡಿತ ನಾದ ಗೂಬೆಯನ್ನು ನೋಡು.

೩೧. ಅವನು ಮಾನಸೋತ್ತರ ಪರ್ವತದಲ್ಲಿದ್ದಾನೆ. ಅವನು ಗಾನಬಂಧು ವೆಂದು ಪ್ರಖ್ಯಾತನಾಗಿದ್ದಾನೆ. ಆದ್ದರಿಂದ ನೀನು ಆ ಮಾನಸೋತ್ತರ ಪರ್ವತಕ್ಕೆ ಹೋಗು. ಅಲ್ಲಿ ಹೋಗಿ ಅವನಿಂದ ಗಾನವನ್ನು ತಿಳಿದರೆ ನೀನೂ ಗಾನವಂತನಾಗಿ ಆಗುತ್ತೀಯೆ.

೩೨. ಬುದ್ಧಿವಂತನಾದ ನಾರದನು ಇದನ್ನು ಕೇಳಿ ಬಹುವಾಗಿ ಆಶ್ಚರ್ಯ ಗೊಂಡು ಮಾನಸೋತ್ತರ ಪರ್ವತದಲ್ಲಿರುವ ಆ ಗಾನಬಂಧುವಿನ ಬಳಿಗೆ ಹೋದನು.

೩೩. ಆ ಗಾನಬಂಧುವು ಮಧ್ಯದಲ್ಲಿ ಕುಳಿತಿರುವನು. ಗಂಧರ್ವರು, ಯಕ್ಷರು, ಕಿನ್ನರರು, ಅಪ್ಸರರೂ ಆತನ ಸುತ್ತಲೂ ಕುಳಿತಿರುವರು.

ಗಾನಶಿಕ್ಷಾ ಸಮಾಪನ್ನಾಃ ಶಿಕ್ಷಿತಾಸ್ತೇನ ಪಕ್ಷಿಣಾ ।
ಸ್ನಿಗ್ಧಕಂಠಸ್ವರಾಸ್ತತ್ರ ಸಮಾಸೀನಾ ಮುದಾನ್ವಿತಾಃ ॥ ೩೪ ॥

ತತೋ ನಾರದಮಾಲೋಕ್ಯ ಗಾನಬಂಧುರುವಾಚ ಹ ।
ಪ್ರಣಿಪತ್ಯ ಯಥಾನ್ಯಾಯ್ಯಂ ಸ್ವಾಗತೇನಾಭ್ಯಪೂಜಯತ್ ॥ ೩೫ ॥

ಕಿಮರ್ಥಂ ಭಗವನ್ನತ್ರ ಚಾಗತೋಸಿ ಮಹಾದ್ಯುತೇ ।
ಕಿಂ ಕಾರ್ಯಂ ಹಿ ಮಹಾ ಬ್ರಹ್ಮನ್ ಬ್ರೂಹಿ ಕಿಂ ಕರವಾಣಿ ತೇ ॥ ೩೬ ॥

ತಚ್ಛ್ರುತ್ವಾ ನಾರದೋ ಧೀಮಾನ್ ಪ್ರತ್ಯುವಾಚ ಸ ಪಕ್ಷಿಣಂ ।
ಉಲೂಕೇಂದ್ರ ಮಹಾಪ್ರಾಜ್ಞ ಶೃಣು ಸರ್ವಂ ಯಥಾ ತಥಂ ॥ ೩೭ ॥

ಮಮ ವೃತ್ತಂ ಪ್ರವಕ್ಷ್ಯಾಮಿ ತಚ್ಚ ಭೂತಂ ಮಹಂದ್ಭುತಂ ।
ವೈಕುಂಠನಗರೇ ಬ್ರಹ್ಮನ್ ನಾರಾಯಣಸಮೀಪಗಂ ॥ ೩೮ ॥

---

೩೪. ಅವರೆಲ್ಲರಿಗೂ ಆ ಪಕ್ಷಿಯಾದ ಗೂಬೆಯು ಗಾನವನ್ನು ಕಲಿಸುತ್ತಿರುವನು. ಅವರೆಲ್ಲರೂ ಮೃದುವಾದ ಕಂಠದಿಂದ ಕೂಡಿ ಮನೋಹರವಾಗಿ ಹಾಡುತ್ತ ಸಂತೋಷದಿಂದ ಕುಳಿತಿರುವರು.

೩೫. ಆಗ ಗಾನಬಂಧುವು ನಾರದನನ್ನು ನೋಡಿ ನಮಸ್ಕರಿಸಿ ಸ್ವಾಗತವನ್ನು ಕೇಳಿ ಶಾಸ್ತ್ರರೀತಿಯಿಂದ ಪೂಜಿಸಿ ಇಂತೆಂದನು.

೩೬. ಎಲೈ ಮಹಾ ಮಹಿಮನಾದ ಪೂಜ್ಯನೇ! ಇಲ್ಲಿಗೇಕೆ ಬಂದೆ? ಎಲೈ ಮಹಾ ಬ್ರಾಹ್ಮಣನೆ! ನಿನಗೇನು ಕೆಲಸ? ಹೇಳು. ಯಾವ ಕೆಲಸವನ್ನು ಮಾಡಿ ಕೊಡಲಿ?

೩೭. ಅದನ್ನು ಕೇಳಿ ಬುದ್ಧಿವಂತನಾದ ನಾರದನು ಆ ಹಕ್ಕಿಯನ್ನು ಕುರಿತು ಇಂತೆಂದನು. ಉಲೂಕೇಂದ್ರನೇ! ಮಹಾ ಪ್ರಾಜ್ಞನೆ! ನಡೆದುದೆಲ್ಲವನ್ನೂ ಹೇಳುತ್ತೇನೆ. ಕೇಳು.

೩೮–೩೯. ನನ್ನ ವಿಷಯವನ್ನು ಹೇಳುತ್ತೇನೆ. ಅದು ಅದ್ಭುತವಾಗಿ ನಡೆದುದು. ಆಶ್ಚರ್ಯವಾಗಿದೆ. ನಾನು ವೈಕುಂಠದಲ್ಲಿ ಸಂತೋಷದಿಂದ ನಾರಾಯಣನ ಹತ್ತಿರದಲ್ಲಿಯೇ ಇದ್ದೆನು. ನಾನು ಸಂತೋಷದಿಂದ ಎದುರಿಗಿದ್ದರೂ ನನ್ನನ್ನು

ಮಾಂ ವಿನಿರ್ಧೂಯ ಸಂದೃಷ್ಟಂ ಸಮಾಹೂಯ ಚ ತುಂಬುರುಂ ।
ಲಕ್ಷ್ಮೀಸಮನ್ವಿತೋ ವಿಷ್ಣುಃ ಅಶೃಣೋದ್ಗಾನಮುತ್ತಮಂ ॥ ೩೯ ॥

ಬ್ರಹ್ಮಾದಯೋ ವಯಂ ಸರ್ವೇ ನಿರಸ್ತಾಃ ಸ್ಥಾನತಃ ಚ್ಯುತಾಃ ।
ಕೌಶಿಕಾದ್ಯಾಃ ಸಮಾಸೀನಾಃ ಗಾನಯೋಗೇನ ವೈ ಹರಿಂ ॥ ೪೦ ॥

ಸಮಾರಾಧ್ಯೈವ ಸಂಪ್ರಾಪ್ತಾ ಗಾಣಪತ್ಯಂ ಯಥಾಸುಖಂ ।
ತೇನಾಹಮತಿದುಃಖಾರ್ತೋ ಯತ್ತಪ್ತಂ ತು ಮಯಾ ತಪಃ ॥ ೪೧ ॥

ಯದ್ದತ್ತಂ ಯದ್ಧುತಂ ಚೈವ ಯಚ್ಚಾಪಿ ಶ್ರುತಮೇವ ಹಿ ।
ಯದಧೀತಂ ಚ ಗಾನಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೪೨ ॥

ವಿಷ್ಣೋರ್ಮಾಹಾತ್ಮ್ಯಯುಕ್ತಸ್ಯ ಗಾನಯೋಗಸ್ಯ ವೈ ತತಃ ।
ಪಶ್ಚಾತ್ತಾಪಂ ಚ ಮೇ ದೃಷ್ಟ್ವಾ ಮಾಂ ಚ ನಾರಾಯಣೋಬ್ರವೀತ್ ॥೪೩॥

ಉಲೂಕಂ ಗಚ್ಛ ದೇವರ್ಷೇ ಗಾನಬಂಧುಂ ಮತಿರ್ಯದಿ ।
ಗಾನೇ ಚ ವರ್ತತೇ ಬ್ರಹ್ಮನ್ ತತ್ರ ತ್ವಂ ಗಾನಮಾಪ್ಸ್ಯಸಿ ॥ ೪೪ ॥

---

ತಿರಸ್ಕರಿಸಿ ತುಂಬುರುವನ್ನು ಕರೆದು ಅವನಿಂದ ಗಾನವನ್ನು ವಿಷ್ಣುವು ಲಕ್ಷ್ಮಿಯೊಡನೆ ಕುಳಿತುಕೊಂಡು ಕೇಳಿದನು.

೪೦–೪೨. ಬ್ರಹ್ಮನೆ ಮುಂತಾದ ನಮ್ಮಗಳನ್ನು ಕುಳಿತಿದ್ದ ಸ್ಥಳದಿಂದ ಓಡಿಸಿ ಬಿಟ್ಟರು. ಗಾನಯೋಗದಿಂದ ಹರಿಯನ್ನು ತೃಪ್ತಿಪಡಿಸಿ ಆ ಸ್ವಾಮಿಯ ಗಣಗಳಿಗೆ ಆಧಿಪತಿಯಾಗಿರುವ ಕೌಶಿಕನೇ ಮುಂತಾದವರು ಅಲ್ಲಿ ಕುಳಿತಿದ್ದರು. ಆದರಿಂದ ನನಗೆ ಬಹು ದುಃಖವಾಯಿತು. ನಾನು ಆಚರಿಸಿದ ತಪಸ್ಸು, ದಾನ, ಹೋಮ, ವೇದಾಭ್ಯಾಸ, ಜ್ಞಾನ, ಇವುವೊಂದೂ ಕೂಡ ವಿಷ್ಣುವಿನ ಮಹಿಮೆಯಿಂದ ಕೂಡಿದ ಆ ಗಾನಯೋಗದ ಹದಿನಾರನೇ ಒಂದು ಭಾಗಕ್ಕೂ ಸಮವಾಗದೆ ಹೋದುವು.

೪೩. ಅನಂತರ ನಾನು ದುಃಖಪಡುತ್ತಿರುವುದನ್ನು ನೋಡಿ ನಾರಾಯಣನು ನನ್ನನ್ನು ಕುರಿತು ಇಂತೆಂದನು.

೪೪. ಎಲೈ ದೇವರ್ಷಿಯೇ! ನಿನಗೆ ಗಾನ ಕಲಿಯುವುದರಲ್ಲಿ ಮನಸ್ಸಿದ್ದರೆ ಗಾನಬಂಧುವೆಂಬ ಹೆಸರುಳ್ಳ ಗೂಬೆಯ ಬಳಿಗೆ ಹೋಗು. ಅಲ್ಲಿ ನೀನು ಗಾನವನ್ನು ಸರಿಯಾಗಿ ಕಲಿಯಬಹುದು.

**ಇತ್ಯಹಂ ಪ್ರೇಷಿತಸ್ತೇನ ತ್ವತ್ಸಮೀಪಮಿಹಾಗತಃ ।**
**ಕಿಂ ಕರಿಷ್ಯಾಮಿ ಶಿಷ್ಯೋಽಹಂ ತವ ಮಾಂ ಪಾಲಯಾವ್ಯಯ ॥ ೪೫ ॥**

**ನಾರದಂ ಪ್ರಾಹ ಧರ್ಮಾತ್ಮಾ ಗಾನಬಂಧುರ್ಮಹಾಯಶಾಃ ।**
**ಶೃಣು ನಾರದ ಯದ್ವೃತ್ತಂ ಪುರಾ ಮುನಿ ಮಹಾಮತೇ ॥ ೪೬ ॥**

**ಅತ್ಯಾಶ್ಚರ್ಯಸಮಾಯುಕ್ತಂ ಸರ್ವಪಾಪಹರಂ ಶುಭಂ ।**
**ಭುವನೇಶ ಇತಿ ಖ್ಯಾತೋ ರಾಜಾಭೂದ್ಧಾರ್ಮಿಕಃ ಪುರಾ ॥ ೪೭ ॥**

**ಅಶ್ವಮೇಧ ಸಹಸ್ರೈಶ್ಚ ವಾಜಪೇಯಾಯುತೇನ ಚ ।**
**ಅನ್ಯೈಶ್ಚ ವಿವಿಧೈರ್ಯಜ್ಞೈ ರಿಷ್ಟವಾನ್ ಭೂರಿದಕ್ಷಿಣೈಃ ॥ ೪೮ ॥**

**ಗವಾಂಕೋಟ್ಯರ್ಬುದಂ ಚೈವ ಸುವರ್ಣಸ್ಯ ತಥೈವ ಚ ।**
**ವಾಸಸಾಂ ರಥನಾಗಾನಾಂ ಕನ್ಯಾಶ್ವಾನಾಂ ತಥೈವ ಚ ॥ ೪೯ ॥**

---

೪೫. ಹೀಗೆಂದು ಹೇಳಿ ಆ ವಿಷ್ಣುವು ಕಳುಹಿಸಲು ನಾನು ಇಲ್ಲಿಗೆ ಬಂದಿದ್ದೇನೆ. ನಾನು ನಿನ್ನ ಶಿಷ್ಯನಾಗಿದ್ದೇನೆ. ಏನನ್ನು ಮಾಡಲಿ? ಎಲೈ ಮಹಾನುಭಾವನೆ! ನನ್ನನ್ನು ಕಾಪಾಡು.

೪೬. ಆಗ ಮಹಾ ಯಶಸ್ವಿಯೂ ಧರ್ಮಾತ್ಮನೂ ಆದ ಗಾನ ಬಂಧುವು ನಾರದನನ್ನು ಕುರಿತು ಎಲೈ ನಾರದನೆ! ನಿನಗೆ ಪೂರ್ವದಲ್ಲಿ ನಡೆದ ಒಂದು ವಿಷಯವನ್ನು ಹೇಳುತ್ತೇನೆ, ಕೇಳು.

೪೭. ಬಹುವಾದ ಆಶ್ಚರ್ಯದಿಂದ ಕೂಡಿದರೂ ಪಾಪನಾಶಕವೂ ಶುಭಪ್ರದವೂ ಆದ ಆ ವಿಷಯವನ್ನು ಕೇಳು. ಪೂರ್ವದಲ್ಲ ಭುವನೇಶನೆಂಬ ಧಾರ್ಮಿಕನಾದ ಒಬ್ಬ ದೊರೆ ಇದ್ದನು.

೪೮. ಅವನು ಸಾವಿರ ಅಶ್ವಮೇಧಗಳನ್ನೂ ಹತ್ತು ಸಾವಿರ ವಾಜಪೇಯಗಳನ್ನೂ ಮಾಡಿ ಮತ್ತು ಅನೇಕ ವಿಧವಾದ ಯಜ್ಞಗಳನ್ನೂ ಮಾಡಿ ಬಹುವಾದ ದಕ್ಷಿಣೆಗಳನ್ನು ಕೊಟ್ಟಿದ್ದನು.

೪೯-೫೦. ಅರ್ಬುದ ಕೋಟಿ ಗೋವುಗಳನ್ನೂ, ಅರ್ಬುದ ಕೋಟಿ ಚಿನ್ನದ ನಾಣ್ಯವನ್ನೂ ಬಟ್ಟೆ, ರಥ ಆನೆ ಕನ್ಯೆಯರು ಕುದುರೆಗಳು ಇವೆಲ್ಲವನ್ನು ಬ್ರಾಹ್ಮಣರಿಗೆ

ದತ್ವಾ ಸ ರಾಜಾ ವಿಪ್ರೇಭ್ಯೋ ಮೇದಿನೀಂ ಪರ್ಯಪಾಲಯತ್ ।
ನ್ಯವಾರಯತ್ ಸ್ವಕೇ ರಾಜ್ಯೇ ಗಾನಯೋಗೇನ ಕೇಶವಂ ॥ ೫೦ ॥

ಅನ್ಯಂ ವಾ ಗಾನಯೋಗೇನ ಗಾಯೇದ್ಯದಿ ಸ ಮೇ ಭವೇತ್ ।
ವಧ್ಯಃ ಸರ್ವಾತ್ಮನಾ ತಸ್ಮಾತ್ ವೇದ್ಯೈರೀಡ್ಯಃ ಪರಃ ಪುಮಾನ್ ॥ ೫೧ ॥

ನ ಬ್ರಾಹ್ಮಣೈಶ್ಚ ಗಾತವ್ಯಂ ವಹದ್ಭಿಃ ವೇದಮುತ್ತಮಂ ।
ಗಾನಯೋಗೇನ ಸರ್ವತ್ರ ಸ್ತ್ರಿಯೋ ಗಾಯಂತು ಮಾಂ ಸದಾ ॥ ೫೨ ॥

ಸೂತಮಾಗಧ ಸಂಘಾಶ್ಚ ಗೀತಂ ಮೇ ಕಾರಯಂ ತು ವೈ ।
ಇತ್ಯಾಜ್ಞಾಪ್ಯ ಮಹಾತೇಜಾ ರಾಜ್ಯಂ ವೈ ಪರ್ಯಪಾಲಯತ್ ॥ ೫೩ ॥

ತಸ್ಯ ರಾಜ್ಞಃ ಪುರಾಭ್ಯಾಶೇ ಹರಿಮಿತ್ರ ಇತಿ ಸ್ಮೃತಃ ।
ಬ್ರಾಹ್ಮಣೋ ವಿಷ್ಣುಭಕ್ತಶ್ಚ ಸರ್ವದ್ವಂದವಿವರ್ಜಿತಃ ॥ ೫೪ ॥

---

ದಾನಮಾಡಿ ರಾಜ್ಯವನ್ನಾಳುತ್ತಿದ್ದನು. ಆದರೆ ತನ್ನ ರಾಜ್ಯದಲ್ಲಿ ಗಾನಯೋಗದಿಂದ ಕೇಶವನನ್ನು ತೃಪ್ತಿಪಡಿಸಕೂಡದೆಂದು ಸಂಗೀತವನ್ನು ನಿಷೇಧಿಸಿದ್ದನು.

೫೧. ಆ ರೀತಿಯಾಗಿ ಮತ್ತೆ ಯಾವನನ್ನಾದರೂ ಸರಿಯೆ ಗಾನಯೋಗದಿಂದ ಸ್ತುತಿಸಿದರೆ ಅವನನ್ನು ಕೊಲ್ಲಿಸುತ್ತೇನೆ. ಆ ಪರಮ ಪುರುಷನನ್ನಾಗಲಿ ಮತ್ತಾವ ದೇವತೆಯನ್ನಾಗಲಿ ವೇದದಿಂದ ಸ್ತುತಿಸಬಹುದು.

೫೨–೫೩. ವೇದಕ್ಕೆ ಅಧಿಕಾರಿಗಳಾದ ಬ್ರಾಹ್ಮಣರು ಗಾನಮಾಡಲೇ ಕೂಡದು. ಗಾನದಿಂದ ಎಲ್ಲಾ ಕಡೆಯಲ್ಲೂ ಹೆಂಗಸರು ಮಾತ್ರ ನನ್ನನ್ನು ಗಾನ ಮಾಡಬೇಕು. ಗಂಡಸರಲ್ಲಿ ಸೂತರು, ಮಾಗಧರುಗಳು ಮಾತ್ರ ನನ್ನ ಗುಣಗಳ ಗಾನವನ್ನು ಹಾಡಲಿ, ಎಂದು ಆ ಮಹಾ ಬಲಿಷ್ಠನಾದ ರಾಜನು ಆಜ್ಞಾಪಿಸಿ ರಾಜ್ಯ ಪರಿಪಾಲನೆ ಮಾಡುತ್ತಿದ್ದನು.

೫೪. ಆ ರಾಜನ ಪಟ್ಟಣದ ಹತ್ತಿರದಲ್ಲಿ ಹರಿಮಿತ್ರನೆಂಬ ಬ್ರಾಹ್ಮಣನಿದ್ದನು. ಅವನು ವಿಷ್ಣು ಭಕ್ತನು. ಸುಖದುಃಖಾದಿ ದ್ವಂದ್ವಗಳೊಂದೂ ಅವನನ್ನು ಬಾಧಿಸುತ್ತಿರಲಿಲ್ಲ.

ನದೀಪುಲಿನಮಾಸಾದ್ಯ ಪ್ರತಿಮಾಂ ಚ ಹರೇಃ ಶುಭಾಂ ।
ಅಭ್ಯರ್ಚ್ಯ ಚ ಯಥಾಶಾಸ್ತ್ರಂ ಘೃತದಧ್ಯುತ್ತರಂ ಬಹು ॥ ೫೫ ॥

ಮಿಷ್ಟಾನ್ನಂ ಪಾಯಸಂ ದತ್ವಾ ಹರೇರಾವೇದ್ಯ ಧೂಪಕಂ ।
ಪ್ರಣಿಪತ್ಯ ಯಥಾ ನ್ಯಾಯಂ ತತ್ರ ವಿನ್ಯಸ್ತ ಮಾನಸಃ ॥ ೫೬ ॥

ಅಗಾಯತ ಹರಿಂ ತತ್ರ ತಾಳವೀಣಾಲಯಾನ್ವಿತಂ ।
ಅತೀವ ಸ್ನೇಹಸಂಯುಕ್ತಃ ತದಾ ತೇನಾಂತರಾತ್ಮನಾ ॥ ೫೭ ॥

ತತೋ ರಾಜ್ಞಸ್ಸಮಾದೇಶಾತ್ ಭಟಾಸ್ತಸ್ಯ ಸಮಾಗತಾಃ ।
ತದರ್ಚನಾದಿ ಸಕಲಂ ನಿರ್ಧೂಯ ಚ ಸಮಂತತಃ ॥ ೫೮ ॥

ಬ್ರಾಹ್ಮಣಂ ಚ ಗೃಹೀತ್ವಾ ತೇ ರಾಜ್ಞೇ ಸಮ್ಯಕ್‌ನ್ಯವೇದಯನ್ ।
ತತೋ ರಾಜಾ ದ್ವಿಜಶ್ರೇಷ್ಠಂ ಪರಿಭರ್ತ್ಸ್ಯ ಸುದುರ್ಮನಾಃ ॥ ೫೯ ॥

---

೫೫–೫೭. ಆತನು ನದಿಯ ದಡದಲ್ಲಿ ಮರಳಿನ ಮೇಲೆ ಹೋಗಿ ಅಲ್ಲಿ ಚೆನ್ನಾಗಿ ಹರಿಯ ಒಂದು ಪ್ರತಿಮೆಯನ್ನು ಮಾಡಿಕೊಂಡು ಅದನ್ನು ಶಕ್ತಿಗನುಗುಣವಾಗಿ ಪೂಜಿಸಿ ತುಪ್ಪ, ಮೊಸರು, ಇವುಗಳಿಂದ ಮಾಡಿದ ಉತ್ತಮವಾದ ಅನ್ನವನ್ನೂ ಪಾಯಸವನ್ನೂ ನಿವೇದನೆ ಮಾಡಿ ದೊಡ್ಡ ದೀಪವನ್ನು ಹತ್ತಿಸಿ ಧೂಪವನ್ನು ಸಮರ್ಪಿಸಿ ನೀರಾಜನಗಳನ್ನು ಬೆಳಗಿ ನಮಸ್ಕರಿಸಿ ಆ ಸ್ವಾಮಿಯಲ್ಲಿಯೇ ಮನಸ್ಸಿಟ್ಟು ತಾಳವನ್ನು ಹಾಕುತ್ತ ವೀಣೆಯನ್ನು ನುಡಿಸುತ್ತ ಆ ಹರಿಯನ್ನೇ ಗಾನಮಾಡುತ್ತಿದ್ದನು. ಆಗ ಆ ಹರಿಯಲ್ಲಿಯೇ ಮನಸ್ಸಿಟ್ಟು ಬಹು ಸ್ನೇಹದಿಂದ ಗಾನ ಮಾಡುತ್ತಿದ್ದನು.

೫೮. ಆಗ ರಾಜನ ಅಪ್ಪಣೆಯಂತೆ ರಾಜ ಭಟರು ಅಲ್ಲಿಗೆ ಬಂದು ಅವನ ಆ ಪೂಜೆಗಳೆಲ್ಲವನ್ನು ಕಿತ್ತು ಎಸೆದು ನಾಶಮಾಡಿ ಆ ಬ್ರಾಹ್ಮಣನನ್ನು ಹಿಡಿದುಕೊಂಡು ಹೋಗಿ ರಾಜನಿಗೆ ವಿಜ್ಞಾಪಿಸಿದರು.

೫೯. ಆಗ ಆ ದೊರೆಯು ಅವನನ್ನು ಬೈದು ಅವನ ಆಸ್ತಿಯೆಲ್ಲವನ್ನೂ ಕಸಿದುಕೊಂಡು ಅವನನ್ನು ರಾಜ್ಯದಿಂದಲೇ ಓಡಿಸಿದನು.

ರಾಜ್ಯಾನ್ನಿ ರ್ವಾಸಯಾಮಾಸ ಹೃತ್ವಾ ಸರ್ವಂ ಧನಾದಿಕಂ ।
ಪ್ರತಿಮಾಂ ಚ ಹರೇಶ್ಚೈವ ನಾಪಶ್ಯತ್ಸ ಯದೃಚ್ಛಯಾ ॥ ೬೦ ॥

ತತಃ ಕಾಲೇನ ಮಹತಾ ಕಾಲಧರ್ಮಮುಪೇಯಿವಾ‌ನ್ ।
ಲೋಕಾಂತರಮನುಪ್ರಾಪ್ಯ ಉಲೂಕಂ ದೇಹಮಾಶ್ರಿತಃ ॥ ೬೧ ॥

ಸರ್ವತ್ರ ಗಚ್ಛಮಾನೋಽಪಿ ಭಕ್ಷ್ಯಂ ಕಿಂ ಚಿನ್ನ ಚಾಪ್ತವಾನ್ ।
ಕ್ಷುಧಾರ್ತಶ್ಚ ಸದಾಖಿನ್ನೋ ಯಮಮಾಹ ಸುದುಃಖಿತಃ ॥ ೬೨ ॥

ಕ್ಷುತ್ಪೀಡಾ ವರ್ತತೇ ದೇವ ದುರ್ಗತಸ್ಯ ಸದಾ ಮಮ ।
ಮಯಾ ಪಾಪಂ ಕೃತಂ ಕಿಂ ವಾ ಕಿಂ ಕರಿಷ್ಯಾಮಿ ವೈ ಯಮ ॥ ೬೩ ॥

ತತಸ್ತಂ ಧರ್ಮರಾಟ್ ಪ್ರಾಹ ಧರ್ಮಾಧರ್ಮಪ್ರದರ್ಶಕಃ ।
ತ್ವಯಾ ಹಿ ಸುಮಹತ್ಪಾಪಂ ಕೃತಮಜ್ಞಾನತೋ ನೃಪ ॥ ೬೪ ॥

---

೬೦. ಆ ಆಸ್ತಿಯೆಲ್ಲವನ್ನೂ ಕಸಿದುಕೊಂಡಾಗ ಅಕಸ್ಮಾತ್ತಾಗಿ ಆ ಹರಿಯ ಪ್ರತಿಮೆಯನ್ನು ತಾನು ನೋಡಲಿಲ್ಲ.

೬೧. ಅನಂತರ ಬಹು ಕಾಲಗಳ ವರೆಗೆ ರಾಜ್ಯಭಾರವನ್ನು ಮಾಡುತ್ತಲಿದ್ದು ಮನುಷ್ಯರಿಗೆ ಮೀರಲಾಗದ ಸಾವನ್ನು ಹೊಂದಿದನು. ಅನಂತರ ಸ್ವರ್ಗ ನರಕಾದಿ ಗಳನ್ನು ಪುಣ್ಯ ಪಾಪಗಳಿಗುಣವಾಗಿ ಅನುಭವಿಸಿ ಕೊನೆಗೆ ಗೂಬೆಯಾಗಿ ಹುಟ್ಟಿದನು.

೬೨. ಅವನು ಎಲ್ಲೆಲ್ಲಿಗೆ ಹೋದರೂ ತಿನ್ನುವುದಕ್ಕಾಗಲಿ ಕುಡಿಯುವುದ ಕ್ಕಾಗಲೀ ಏನೂ ಸಿಕ್ಕುತ್ತಿರಲಿಲ್ಲ. ಆಗ ಹಸಿವು ಬಾಯಾರಿಕೆಗಳಿಂದ ಕೂಡಿದವ ನಾಗಿ ಬಹು ದುಃಖಗೊಂಡು ಯಮನನ್ನು ಕುರಿತು ಇಂತೆಂದನು.

೬೩. ಎಲೈ ದೇವನಾದ ಯಮನೆ! ನಾನು ಬಹು ದುಃಖಿಯಾಗಿದ್ದೇನೆ. ಹಸಿವು ಬಾಯಾರಿಕೆಗಳು ಯಾವಾಗಲೂ ನನ್ನನ್ನು ಪೀಡಿಸುತ್ತವೆ. ನಾನು ಮಾಡಿದ ಪಾಪವಾದರೂ ಏನು? ಆದಕ್ಕೋಸ್ಕರ ನಾನು ಈಗೇನು ಮಾಡಲಿ?

೬೪. ಆಗ ಧರ್ಮಾಧರ್ಮಗಳನ್ನು ತೋರಿಸುವ ಆ ಧರ್ಮರಾಯನು ಎಲೈ ದೊರೆಯೆ! ನೀನು ಅಜ್ಞಾನದಿಂದ ಬಹು ಉಗ್ರವಾದ ಪಾಪವನ್ನು ಮಾಡಿದ್ದೀಯೆ.

ಹರಿಮಿತ್ರಂ ಪ್ರತಿ ತದಾ ವಾಸುದೇವ ಪರಾಯಣಂ ।
ಹರಿಮಿತ್ರೇ ಕೃತೇ ಪಾಪಂ ವಾಸುದೇವಾರ್ಚನಾದಿಷು ॥ ೬೫ ॥

ತೇನ ಪಾಪೇನ ಸಂಪ್ರಾಪ್ತಃ ಕ್ಷುದ್ಬೋಧಸ್ತ್ವಾಂ ಸದಾ ನೃಪ ।
ದಾನ ಯಜ್ಞಾದಿಕಂ ಸರ್ವಂ ಪ್ರಣಷ್ಟಂ ತೇ ನರಾಧಿಪ ॥ ೬೬ ॥

ಗೀತ ನಾಟ್ಯಲಯೋಪೇತಂ ಗಾಯಮಾನಂ ಸದಾ ಹರಿಂ ।
ಹರಿಮಿತ್ರಂ ಸಮಾಹೂಯ ಹೃತವಾನಸಿ ತದ್ಧನಂ ॥ ೬೭ ॥

ಉಪಹಾರಾದಿಕಂ ಸರ್ವಂ ವಾಸುದೇವಸ್ಯ ಸನ್ನಿಧೌ ।
ತವ ಭೃತ್ಯಾಃ ಸಮಾಹೃತ್ಯ ಪಾಪಂ ಚಕ್ರುಸ್ತವಾಜ್ಞಯಾ ॥ ೬೮ ॥

ಹರೇಃ ಕೀರ್ತಿಂ ವಿನಾಚಾನ್ಯತ್ ಬ್ರಾಹ್ಮಣೇನ ನೃಪೋತ್ತಮ ।
ನ ಗೇಯಯೋಗೇ ಮಂತವ್ಯಂ ತಸ್ಮಾತ್ಪಾಪಂ ತ್ವಯಾ ಕೃತಂ ॥ ೬೯ ॥

---

೬೫-೬೬. ನೀನು ಹಿಂದೆ ವಾಸುದೇವನಲ್ಲಿ ಭಕ್ತಿಯುಳ್ಳ ಹರಿಮಿತ್ರನಲ್ಲಿ ಬಹು ಪಾಪವನ್ನಾಚರಿಸಿದ್ದೀಯೆ. ಹರಿಮಿತ್ರನು ವಾಸುದೇವನನ್ನು ಪೂಜಿಸುವಾಗ ಅವಕ್ಕೆ ತೊಂದರೆ ಮಾಡಿ ಪಾಪ ಭಾಗಿಯಾದೆ. ಆ ಪಾಪದಿಂದ ನಿನಗೆ ಹಸಿವು ಯಾವಾಗಲೂ ಇದ್ದುಕೊಂಡಿರುವುದು. ಆದುದರಿಂದಲೇ ನೀನು ಮಾಡಿದ ದಾನ ಯಜ್ಞ ಮುಂತಾದುವುಗಳೆಲ್ಲವೂ ನಾಶವಾಗಿ ಹೋದುವು.

೬೭-೬೮. ಅವನು ಗೀತ ನಾಟ್ಯಲಯಗಳಿಂದ ಯಾವಾಗಲೂ ಹರಿಯನ್ನೇ ಧ್ಯಾನ ಮಾಡುತ್ತಿದ್ದನು. ಅಂತಹ ಹರಿಮಿತ್ರನನ್ನು ಕರೆದು ಅವನ ಆಸ್ತಿಯೆಲ್ಲವನ್ನೂ ಕಿತ್ತುಕೊಂಡೆ. ನಿನ್ನ ಆಳುಗಳು ಆ ದೇವರ ಪೂಜೆಯ ಸಾಮಗ್ರಿಯೆಲ್ಲವನ್ನೂ ನಿನ್ನ ಅಪ್ಪಣೆಯಂತೆ ಕಿತ್ತೊಗೆದು ಬಹು ಪಾಪ ಕೆಲಸವನ್ನು ಮಾಡಿದರು.

೬೯. ಬ್ರಾಹ್ಮಣನು ಹರಿ ಕೀರ್ತನೆಯನ್ನು ಗಾನ ರೂಪವಾಗಿ ಮಾಡಲೇ ಕೂಡದು ಎಂದು ನೀನು ಅಪ್ಪಣೆಯನ್ನು ಮಾಡಿದೆ. ಆದ್ದರಿಂದ ನೀನು ಪಾಪವನ್ನು ಆಚರಿಸಿದಂತಾಯಿತು. ಹರಿಕೀರ್ತಿಯನ್ನು ಹೊರತಾಗಿ ಬ್ರಾಹ್ಮಣನು ಸಂಗೀತವನ್ನು ಹಾಡಬಾರದು.

ನಷ್ಟಂ ತೇ ಸ್ವರ್ಗಲೋಕಾದ್ಯಂ ಗಚ್ಛ ಪರ್ವತಕೋಟರಂ ।
ಪೂರ್ವೋತ್ಸೃಷ್ಟ ಸ್ವದೇಹಂ ತೇ ಖಾದ ನಿತ್ಯಂ ನಿಕೃತ್ಯ ವೈ ॥ ೭೦ ॥

ತಸ್ಮಿನ್ ಕ್ಷೀಣೇತ್ವಿಮಂ ದೇಹಂ ಖಾದ ನಿತ್ಯಂ ಕ್ಷುಧಾನ್ವಿತಃ ।
ಮಹಾನಿರಯಸಂಸ್ಥತ್ವಂ ಯಾವನ್ಮನ್ವಂತರಂ ಭವೇತ್ ॥ ೭೧ ॥

ಮನ್ವಂತರೇ ತತೋತೀತೇ ಭೂಮ್ಯಾಂ ತ್ವಂ ಶ್ವಾ ಭವಿಷ್ಯಸಿ ।
ತತಃ ಕಾಲೇನ ಕಿಯತಾ ಮಾನುಷ್ಯ ಮುಪಲಪ್ಸ್ಯಸೇ ॥ ೭೨ ॥

ಏವಮುಕ್ತ್ವಾ ಯಮೋ ವಿದ್ವಾನ್ ತತ್ರೈವಾಂತರಧೀಯತ ।
ಸೋಹಂ ನಾರದ ಭೂಪಾಲಃ ಪುರೇದಾನೀಮುಲೂಕತಾಂ ॥ ೭೩ ॥

ಲಬ್ಧವಾನ್ ಕರ್ಮದೋಷೇಣ ಹರಿಮಿತ್ರಕೃತೇನ ವೈ ।
ತತೋ ಮಾನಸ ಶೈಲೇಹಂ ಕೋಟರೇಹ್ಯವಸಂ ಮುನೇ ॥ ೭೪ ॥

---

೭೦. ಆ ಪಾಪದಿಂದ ನಿನಗೆ ಪುಣ್ಯದಿಂದ ಲಭಿಸಬೇಕಾದ ಸ್ವರ್ಗಲೋಕಗಳೆಲ್ಲ ನಷ್ಟವಾಗಿ ಹೋಗಿದೆ. ಆದ್ದರಿಂದ ಪರ್ವತದ ಕೋವೆಗೆ ಹೋಗು ಅಲ್ಲಿ ನಿನ್ನ ಹಿಂದಿನ ಜನ್ಮದ ಹೇಹವು ಬಿದ್ದಿರುವುದು. ಅದನ್ನು ಕತ್ತರಿಸಿಕೊಂಡು ತಿನ್ನು.

೭೧. ಆ ದೇಹದ ಮಾಂಸವು ಮುಗಿದುಹೋಗುತ್ತಲೂ ನಿನಗೆ ಹಸಿವಾದಾಗಲೆಲ್ಲಾ ಈ ದೆಹವನ್ನು ತಿನ್ನುತ್ತಿರಬೇಕು. ಮತ್ತೆ ಮನ್ವಂತರಗಳವರೆಗೂ ದೊಡ್ಡ ನರಕದಲ್ಲಿ ಬಿದ್ದಿರುತ್ತೀಯೆ.

೭೨. ಆ ಒಂದು ಮನ್ವಂತರವು ಕಳೆದ ಮೇಲೆ ಭೂಮಿಯಲ್ಲಿ ನೀನು ನಾಯಿಯಾಗಿ ಹುಟ್ಟುತ್ತೀಯೆ. ಅನಂತರ ಕೆಲವು ಕಾಲದ ಮೇಲೆ ಮನುಷ್ಯನಾಗಿ ಹುಟ್ಟುತ್ತೀಯೆ.

೭೩. ಎಲೈ ನಾರದನೇ! ಆ ಯಮನು ಇಂತೆಂದು ಹೇಳಿ ಹೊರಟು ಹೋದನು. ನಾನೇ ಆ ದೊರೆಯಾಗಿದ್ದೆ. ಈಗ ಗೂಬೆಯಾಗಿದ್ದೇನೆ. ಹರಿಮಿತ್ರನನ್ನು ತೊಂದರೆ ಪಡಿಸಿದ ಆ ಕರ್ಮದೋಷದಿಂದಲೇ ಈ ಸ್ಥಿತಿಯನ್ನು ಹೊಂದಿದ್ದೇನೆ.

೭೪–೭೫. ಅನಂತರ ಗೂಬೆಯಾಗಿ ಹುಟ್ಟಿ ನಾನು ಮಾನಸಸರೋವರದಲ್ಲಿ ಒಂದು ಪೊಟ್ಟರೆಯಲ್ಲಿ ವಾಸಿಸುತ್ತಿದ್ದೆನು. ಆಗ ನನ್ನ ಹಿಂದಿನ ದೇಹವೇ

**ಪೂರ್ವೋ ಮೃತಕದೇಹೋ ಮೇ ಭಕ್ಷಣಾಯ ಹ್ಯುಪಸ್ಥಿತಃ ।**
**ಕ್ಷುಧಾನ್ವಿತೋಽಹಂ ತಂ ದೇಹಂ ಖಾದಿತುಂ ಹ್ಯುಪಚಕ್ರಮೇ ॥ ೭೫ ॥**

**ತತ್ ಕ್ಷಣಂ ದೈವಯೋಗೇನ ಹರಿಮಿತ್ರೋ ಮಹಾಯಶಾಃ ।**
**ವಿಮಾನೇನಾರ್ಕವರ್ಣೇನ ಸ್ತೂಯಮಾನೋಽಪ್ಸರೋಗಣೈಃ ॥ ೭೬ ॥**

**ವಿಷ್ಣುದೂತೈಃ ಪರಿವೃತಃ ಪಥಾ ತೇನಾಗತೋ ನೃಪ ।**
**ವಿಷ್ಣುಭಕ್ತೋ ಮಹಾತೇಜಾಃ ಪಥಿ ಮಾಂ ದೃಷ್ಟವಾನ್ ಪ್ರಭುಃ ॥ ೭೭ ॥**

**ಭುವನೇಶ ಶರೀರಂ ತದ್ದುರ್ದರ್ಶೋಽಲೂಕಸನ್ನಿಧೌ ।**
**ಪೃಷ್ಟೋಽಹಂ ತೇನ ದಯಯಾ ಶವಸನ್ನಿಧಿಸಂಸ್ಥಿತಃ ॥ ೭೮ ॥**

**ಭುವನೇಶಸ್ಯ ನೃಪತೇಃ ದೇಹೋಽಯಂ ದೃಶ್ಯತೇ ಖಗ ।**
**ಉಲೂಕತ್ವಂ ಚ ಕಿಮಿದಂ ಖಾದಿತುಂ ಚೋದ್ಯತೋ ಭವಾನ್ ॥ ೭೯ ॥**

ತಿನ್ನುವುದಕ್ಕೆ ಸಿಕ್ಕುತ್ತಿದ್ದಿತು. ಅದೇ ರೀತಿಯಲ್ಲಿ ಹಸಿವನ್ನು ತಡೆಯಲಾರದೆ ಆ ದೇಹವನ್ನು ತಿನ್ನಲು ಮೊದಲು ಮಾಡಿದೆನು.

೭೬-೭೭. ನಾನು ತಿನ್ನುವುದಕ್ಕೆ ಮೊದಲು ಮಾಡಿದಾಗ ಮಹಾ ಯಶಸ್ವಿಯಾದ ಆ ಹರಿಮಿತ್ರನು ಸೂರ್ಯನಂತೆ ಪ್ರಕಾಶಮಾನವಾದ ವಿಮಾನದಲ್ಲಿ ಕುಳಿತು ಅಪ್ಸರರಿಂದ ಹೊಗಳಿಸಿಕೊಳ್ಳುತ್ತಾ ವಿಷ್ಣು ದೂತರ ಜೊತೆಯಲ್ಲಿ ಅದೇ ದಾರಿಯಲ್ಲಿ ಬಂದನು. ಹಾಗೆ ಬರುತ್ತಿದ್ದಾಗ ಅಲ್ಲಿದ್ದ ನನ್ನನ್ನು ನೋಡಿದನು.

೭೮. ಅದು ಆ ರಾಜನ ಶರೀರವು. ಅದು ಈ ಗೂಬೆಯ ಹತ್ತಿರದಲ್ಲಿದೆ. ನೋಡಲು ಆಗುವುದಿಲ್ಲ. ಎಂಬದಾಗಿ ಯೋಚಿಸಿ ಆ ಶರೀರದ ಬಳಿಯಿದ್ದ ನನ್ನನ್ನು ನೋಡಿ ದಯೆಯಿಂದ ಇಂತೆಂದು ಕೇಳಿದನು.

೭೯. ಎಲೈ ಪಕ್ಷಿಯೇ ! ಇದು ಭುವನೇಶನನೆಂಬ ರಾಜನ ದೇಹದಂತೆ ಕಾಣುತ್ತಿದೆ. ನೀನು ಗೂಬೆಯಾಗಿ ಅದರ ಹತ್ತಿರದಲ್ಲಿ ಕುಳಿತು ತಿನ್ನಲು ಸಿದ್ಧನಾಗಿದ್ದೀಯೆ ! ಇದರ ವಿಷಯವೇನು ?

ತಚ್ಛ್ರುತ್ವಾ ಹರಿಮಿತ್ರಾಯ ಪ್ರಣಮ್ಯ ವಿನಯಾನ್ವಿತಃ ।
ಕೃತಾಂಜಲಿಪುಟೋ ಭೂತ್ವಾ ಬಹುಮಾನಪುರಸ್ಸರಂ ॥ ೮೦ ॥

ತತ್ಸರ್ವಂ ಪೂರ್ವವೃತ್ತಾಂತಂ ನಾರದಾಸ್ಮೈನ್ಯವೇದಯಂ ।
ಪುರಾಪರಾರ್ಧಂ ತ್ವಯಿ ಯತ್ತಸ್ಯಪಾಕೋಽಯಮಾಗತಃ ॥ ೮೧ ॥

ಯಾವನ್ಮನ್ವಂತರಂ ವಿಪ್ರ ಖಾದಿಷ್ಯಾಮಿ ಶವಂ ತ್ವಿಮಂ ।
ತತಃ ಶ್ವಾಹಂ ಭವಿಷ್ಯಾಮಿ ಭವಿಷ್ಯಾಮಿ ತತೋ ನರಃ ॥ ೮೨ ॥

ಏತದಾಕರ್ಣ್ಯ ಕರುಣೋ ಹರಿಮಿತ್ರೋ ಮಹಾಯಶಾಃ ।
ಕೃಪಯಾ ಮಾಂ ಸಮಾಚಷ್ಟ ಶೃಣೂಲೂಕ ಮಹೀಪತೇ ॥ ೮೩ ॥

ಮಯಿ ತ್ವಯಾಪರಾದ್ಧಂ ಯತ್ತತ್ಸರ್ವಂ ಕ್ಷಾಂತವಾನಹಂ ।
ಶವೋಽಹ್ಯದರ್ಶನಂ ಯಾತು ನಚ ಶ್ವಾ ತ್ವಂ ಭವಿಷ್ಯಸಿ ॥ ೮೪ ॥

---

೮೦–೮೧. ಈ ಮಾತನ್ನು ಕೇಳಿ ನಾನು ಹರಿಮಿತ್ರನಿಗೆ ನಮಸ್ಕರಿಸಿ ವಿನಯದಿಂದ ಕೈ ಮುಗಿದುಕೊಂಡು ಗೌರವದಿಂದ ಹಿಂದಿನ ವೃತ್ತಾಂತವೆಲ್ಲವನ್ನೂ ಆತನಿಗೆ ಹೇಳಿದನು. ಎಲೈ ಹರಿಮಿತ್ರನೆ! ಪೂರ್ವದಲ್ಲಿ ನಿನ್ನ ವಿಷಯದಲ್ಲಿ ಮಾಡಿದ ತಪ್ಪಿಗೆ ಈವಾಗ ಶಿಕ್ಷೆಯು ಒದಗಿದೆ.

೮೨. ಎಲೈ ವಿಪ್ರನೆ! ಒಂದು ಮನ್ವಂತರವು ಕಳೆಯುವವರೆಗೂ ಈ ಹೆಣವನ್ನೇ ತಿನ್ನುತ್ತಿರುತ್ತೇನೆ. ಆ ಮೇಲೆ ನಾಯಾಗಿ ಹುಟ್ಟಿ ಆನಂತರ ಮನುಷ್ಯನಾಗಿ ಹುಟ್ಟುತ್ತೇನೆ.

೮೩. ಈ ವಿಷಯವನ್ನು ಕರುಣಾಳುವಾದ ಆ ಹರಿಮಿತ್ರನು ಕೇಳಿ ಕೃಪೆಯಿಂದ ನನ್ನನ್ನು ಕುರಿತು ಎಲೈ ಉಲೂಕವೇ! ಕೇಳು ಎಂದು ಹೇಳತೊಡಗಿದನು.

೮೪-೮೫. ಎಲೈ ಉಲೂಕ ರಾಜನೇ! ನನ್ನಲ್ಲಿ ನೀನು ಮಾಡಿದ ತಪ್ಪುಗಳನ್ನೆಲ್ಲಾ ಕ್ಷಮಿಸಿದ್ದೇನೆ. ಈ ಹೆಣವು ಕಾಣದಂತೆ ಹೊರಟು ಹೋಗಲಿ. ನೀನು ನಾಯಿಯಾಗಿಯೂ ಹುಟ್ಟಬೇಡ. ಆ ಗಾನ ಯೋಗವು ನನ್ನ ಅನುಗ್ರಹದಿಂದ

ತ್ವಾಮದ್ಯ ಗಾನಯೋಗಶ್ಚ ಪ್ರಾಪ್ನೋತು ಮತ್ಪ್ರಸಾದತಃ ।
ಸ್ತುಹಿ ವಿಷ್ಣುಂ ಚ ಗಾನೇನ ಜಿಹ್ವಾ ಸ್ಪಷ್ಟಾ ಚ ಜಾಯತಾಂ ॥ ೮೫ ॥

ಸುರವಿದ್ಯಾಧರಾಣಾಂ ಚ ಗಂಧರ್ವಾಪ್ಸರಸಾಂ ತಥಾ ।
ಗಾನಾಚಾರ್ಯೋ ಭವೇಥಾ ಸ್ತ್ವಂ ಭಕ್ಷ್ಯಭೋಜ್ಯಸಮನ್ವಿತಃ ॥ ೮೬ ॥

ತತಃ ಕತಿಪಯಾಹೋಭಿಃ ಸರ್ವಂ ಭದ್ರಂ ಭವಿಷ್ಯತಿ ।
ಹರಿಮಿತ್ರ ವಚಸ್ತಚ್ಚ ವಿಷ್ಣುದೂತೋಪಬೃಂಹಿತಂ ॥ ೮೭ ॥

ಸರ್ವಂ ನಿರಯಸಂಜ್ಞಂ ಮೇ ಕ್ಷಣಾದೇವ ವ್ಯನಾಶಯತ್ ।
ಪ್ರಕೃತ್ಯಾ ವಿಷ್ಣುಭಕ್ತಾನಾಮೀದೃಶೀ ಕರುಣಾ ದ್ವಿಜ ॥ ೮೮ ॥

ಕೃತಾಪರಾಧಲೋಕಾನಾಮಪಿ ದುಃಖಂ ವ್ಯಪೋಹತಿ ।
ಅಮೃತಸ್ಯಂದಿ ವಚನಮುಕ್ತ್ವಾ ಸ ಪ್ರಯಯೌ ಹರಿಂ ॥ ೮೯ ॥

ನಿನಗೆ ಬರಲಿ. ನಿನ್ನ ನಾಲಿಗೆಯು ಕೂಡ ಸ್ಪಷ್ಟವಾಗಿಯಾಗಲಿ. ಗಾನದಿಂದ ವಿಷ್ಣುವನ್ನು ಸ್ತುತಿಸು.

೮೬. ನೀನು ದೇವತೆಗಳಿಗೂ, ವಿದ್ಯಾಧರರಿಗೂ, ಗಂಧರ್ವರಿಗೂ ಅಪ್ಸರರಿಗೂ ಗಾನದಾಚಾರ್ಯನಾಗು. ನಿನಗೆ ಊಟಕ್ಕೆ ಭಕ್ಷ್ಯಭೋಜ್ಯಗಳೆಲ್ಲವೂ ಒದಗಲಿ.

೮೭–೮೮. ಅನಂತರ ಕೆಲವು ದಿನಗಳ ಮೇಲೆ ಎಲ್ಲವೂ ಒಳ್ಳೆಯದಾಗಿ ಪರಿಣಮಿಸುತ್ತದೆ. ಎಂದನು. ಆ ಹರಿಮಿತ್ರನ ಮಾತನ್ನು ಕೇಳಿ ವಿಷ್ಣುದೂತರೂ ಅನುಮೋದಿಸಿದರು. ಆಗ ನರಕಪ್ರಾಯವಾಗಿದ್ದ ನನಗೆ ಸಂಬಂಧಪಟ್ಟವೆಲ್ಲವೂ ನಾಶವಾಗಿ ಹೋದುವು. ಎಲೈ ಬ್ರಾಹ್ಮಣನೆ! ವಿಷ್ಣು ಭಕ್ತರಿಗೆ ಸ್ವಭಾವವಾಗಿಯೂ ಕರುಣೆಯು ಈ ರೀತಿಯಾಗಿಯೇ ಇರುವುದು ಅಲ್ಲವೆ?

೮೯. ಜನಗಳು ಎಷ್ಟೇ ತಪ್ಪು ಮಾಡಿದ್ದರೂ ಅವರ ತಪ್ಪೆಲ್ಲವನ್ನೂ ನಾಶಮಾಡಿ ದುಃಖವನ್ನು ನಾಶಮಾಡುತ್ತಾರೆ. ಅವನು ಅಮೃತದಂತಿರುವ ಈ ಮಾತುಗಳನ್ನು ಹೇಳಿ ಹರಿಯ ಬಳಿಗೆ ಹೊರಟುಹೋದನು.

ಸರ್ವಂ ತೇ ಕಥಿತಂ ಯೇನ ಗಾನಾಚಾರ್ಯೋಽಹಮುತ್ತಮಃ ।
ಪ್ರಾಪ್ಸ್ಯಾಮಿ ಹರಿಮೇತೇನ ಹರಿಮಿತ್ರಪ್ರಸಾದತಃ ॥ ೯೦ ॥

ನಾರದೈ ತದನುವರ್ಣಿತಂ ಮಯಾ ಪೂರ್ವಜನ್ಮ ಚರಿತಂ ಮಹಾದ್ಭುತಂ ।
ಯಃ ಶೃಣೋತಿ ಹರಿಮೇತ್ಯ ಚೇತಸಾ ಸ ಪ್ರಯಾತಿಭವನಂ ಗದಾಭೃತಃ ೯೧॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಹರಿಮಿತ್ರೋಪಾಖ್ಯಾನಂನಾಮ
ಷಷ್ಠಃ ಸರ್ಗಃ

---

೯೦. ನಾನು ಗಾನಾಚಾರ್ಯನಾಗಲು ಕಾರಣಗಳನ್ನೆಲ್ಲಾ ಹೇಳಿದೆನು. ಹರಿಮಿತ್ರನ ಅನುಗ್ರಹದಿಂದ ನಾನೂ ಹರಿಯನ್ನು ಹೊಂದುತ್ತೇನೆ.

೯೧. ಎಲೈ ನಾರದನೆ ! ಅಧ್ಭುತವಾದ ಪೂರ್ವ ಜನ್ಮದ ಚರಿತ್ರೆಯನ್ನು ವರ್ಣಿಸಿದೆನು. ಯಾವನು ಹರಿಯನ್ನು ಧ್ಯಾನಿಸುತ್ತ ಇದನ್ನು ಕೇಳುತ್ತಾನೆಯೋ ಅವನು ವೈಕುಂಠವನ್ನು ಹೊಂದುತ್ತಾನೆ.

ಇಂತು ವಾಲ್ಮೀಕಿ ಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಹರಿಮಿತ್ರೋಪಾಖ್ಯಾನವೆಂಬ
ಆರನೆಯ ಸರ್ಗವು.

ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ಅಥ ಸಪ್ತಮಃ ಸರ್ಗಃ

ಗಾನಬಂಧುಃ ಪುನಃ ಪ್ರಾಹ ನಾರದಂ ಮುನಿಸತ್ತಮಂ ।
ಏತೇ ಕಿನ್ನರಸಂಘಾ ವೈ ವಿದ್ಯಾಧ್ರಾಪ್ಸರಸಾಂ ಗಣಾಃ ॥ ೧ ॥

ಗಾನಾಚಾರ್ಯಮುಲೂಕಂ ಮಾಂ ಗಾನಶಿಕ್ಷಾರ್ಥಮಾಗತಾಃ ।
ತಪಸಾ ನೈವ ಶಕ್ತ್ಯಾ ವಾ ಗಾನವಿದ್ಯಾ ತಪೋಧನ ॥ ೨ ॥

ತಸ್ಮಾಚ್ಛ್ರಮೇಣ ಯುಕ್ತಶ್ಚ ಮತ್ತಸ್ತ್ವಂ ಗಾನಮಾಪ್ನುಹಿ ।
ಏವಮುಕ್ತೋ ಮುನಿಸ್ತಸ್ಮೈ ಪ್ರಣಿಪತ್ಯ ಜಗೌ ಯಥಾ ॥ ೩ ॥

### ಏಳನೆಯ ಸರ್ಗವು

೧-೨. ಗಾನಬಂಧುವು ನಾರದನನ್ನು ಕುರಿತು ಮತ್ತೆ ಇಂತೆಂದನು. ಈ ಕಿನ್ನರರೂ, ವಿದ್ಯಾಧರರೂ, ಅಪ್ಸರರೂ, ಗಾನಾಚಾರ್ಯನಾದ ಗೂಬೆಯಾದ ಈ ನನ್ನ ಬಳಿಗೆ ಗಾನ ಕಲಿಯಲು ಬಂದಿರುವರು. ಎಲೈ ತಪೋಧನನೇ! ಈ ಗಾನವಿದ್ಯೆಯು ತಪಸ್ಸಿನಿಂದಾಗಲೀ ಶಕ್ತಿಯಿಂದಾಗಲೀ ಬರತಕ್ಕದ್ದಲ್ಲ.

೩. ಆದ್ದರಿಂದ ನೀನು ಶ್ರಮಪಟ್ಟು ಗಾನವನ್ನು ಅಭ್ಯಾಸಮಾಡು. ಬರುತ್ತದೆ. ಹೀಗೆನ್ನಲು ಆ ನಾರದನು ಉಲೂಕನಿಗೆ ನಮಸ್ಕರಿಸಿ ವಾಸುದೇವನಿಗೂ ನಮಸ್ಕರಿಸಿ ಹಾಡುವುದಕ್ಕೆ ಮೊದಲು ಮಾಡಿದನು. ಆದನ್ನು ಕೇಳು.

ತಚ್ಛ್ರುಣುಷ್ವ ಮುನಿಶ್ರೇಷ್ಠ ವಾಸುದೇವಂ ನಮಸ್ಯ ಚ ।
ಉಲೂಕೇನೈವ ಮುಕ್ತಸ್ತು ನಾರದೋ ಮುನಿಸತ್ತಮಃ ॥ ೪ ॥

ಶಿಕ್ಷಾಕ್ರಮೇಣ ಸಂಯುಕ್ತ ಸ್ತತ್ರಗಾನಮಶಿಕ್ಷತ ।
ಗಾನಬಂಧುಸ್ತಮಾಹೇದಂ ತ್ಯಕ್ತಲಜ್ಜೋ ಭವಾಧುನಾ ॥ ೫ ॥

ಸ್ತ್ರೀಸಂಗಮೇ ತಥಾ ಗೀತೇ ಕ್ಷುತೇನ್ವಾಖ್ಯಾನ ಸಂಗಮೇ ।
ವ್ಯವಹಾರೇ ಚ ಧಾನ್ಯಾನಾಮರ್ಥಾನಾಂ ಚ ತಥೈವ ಚ ॥ ೬ ॥

ಆಯವ್ಯಯೋ ತಥಾ ನಿತ್ಯಂ ತ್ಯಕ್ತಲಜ್ಜಸ್ತು ವೈ ಭವೇತ್ ।
ನ ಕುಂಠಿತೇನ ಗೂಢೇನ ನಿತ್ಯಂ ಪ್ರಾವರಣಾದಿಭಿಃ ॥ ೭ ॥

ಹಸ್ತವಿಕ್ಷೇಪ ಭಾವೇನ ವ್ಯಾದಿತಾಸ್ಯೇನ ಚೈವ ಹಿ ।
ನಿರ್ವ್ಯಾತ ಜಿಹ್ವಾಯೋಗೇನ ನ ಗೇಯಂ ಚ ಕಥಂ ಚನ ॥ ೮ ॥

---

೪-೫. ಉಲೂಕನು ಹೀಗೆ ಹೇಳಲು ಮುನಿಶ್ರೇಷ್ಠನಾದ ನಾರದನು ಶಿಕ್ಷೆಯ ರೀತಿಯಿಂದ (ಉಪದೇಶ ಕ್ರಮದಿಂದ) ಗಾನವನ್ನು ಕಲಿತನು. ಆಗ ಉಲೂಕನು ಎಲೈ ನಾರದನೆ! ಲಜ್ಜೆಯನ್ನು ಬಿಟ್ಟುಬಿಡು ಎಂದನು.

೬. ಹೆಂಗಸರ ಸಂಭೋಗಮಾಡುವಾಗ, ಸಂಗೀತ ಹಾಡುವಾಗ, ಶೀನುವಾಗ, ಅನುವಾದ ಮಾಡುವಾಗ, ಧಾನ್ಯ ಹಣಗಳ ವ್ಯವಹಾರದಲ್ಲಿ, ಆದಾಯ, ವ್ಯಯ ಇವುಗಳಲ್ಲಿ ಯಾವಾಗಲೂ ಲಜ್ಜೆಯನ್ನು ಇಟ್ಟುಕೊಳ್ಳಕೂಡದು.

೭–೮. ಸ್ವರವನ್ನು ಸಣ್ಣದು ಮಾಡಿಕೊಂಡಾಗಲಿ, ಮನಸ್ಸಿನಲ್ಲಿಯೇ ಆಗಲಿ. ಕತ್ತಿಗೆ ಬಟ್ಟೆ ಮುಂತಾದುವನ್ನು ಸುತ್ತಿಕೊಂಡಾಗಲಿ, ಹಾಡಬಾರದು. ಕೈಗಳನ್ನು ಅಲ್ಲಾಡಿಸುವುದಾಗಲಿ, ಕುಣಿಸುವುದಾಗಲಿ ಬಾರದು. ಬಾಯನ್ನು ದೊಡ್ಡದಾಗಿ ಬಿಟ್ಟುಕೊಂಡು ಹಾಡಬಾರದು. ನಾಲಿಗೆಯನ್ನು ಹೊರಕ್ಕೆ ತೆಗೆದುಕೊಂಡು ಹಾಡಬಾರದು.

**ಸ್ವಾಂಗಂ ನಿರೀಕ್ಷಮಾಣೇನ ಪರಸ್ಪ್ರೇಕ್ಷಕತಾ ತಥಾ ।**
**ನ ಗಾಯೇಧೂರ್ಧ್ವಬಾಹುಶ್ಚ ನೋರ್ಧ್ವದೃಷ್ಟಿಃ ಕಥಂ ಚನ ॥ ೯ ॥**

**ಹಾಸೋ ಭಯಂ ಕ್ಷುಧಾ ಕಂಪಃ ಶೋಕೋನ್ಯಸ್ಯ ಸ್ಮೃತಿಸ್ತೃಷಾ ।**
**ನೈತಾನಿ ಸಪ್ತರೂಪಾಣಿ ಗಾನಯೋಗೇ ಮಹಾಮುನೇ ॥ ೧೦ ॥**

**ನೈಕಹಸ್ತೇನ ಶಸ್ಯೇತ ತಾಳಸಂಘಟ್ಟನಂ ಮುನೇ ।**
**ಕ್ಷುಧಾರ್ತೇನ ಭಯಾರ್ತೇನ ತೃಷಾರ್ತೇನ ತಥೈವ ಚ ॥ ೧೧ ॥**

**ಗಾನಯೋಗೋ ನ ಕರ್ತವ್ಯಃ ನಾಂಧಕಾರೇ ಕಥಂಚನ ।**
**ಏವಮಾದೀನಿ ಯೋಗಾನಿ ಕರ್ತವ್ಯಾನಿ ಮಹಾಮುನೇ ॥ ೧೨ ॥**

**ಏವಮುಕ್ತ ಸ್ಸ ಭಗವಾ್ ನಾರದೋ ವಿಧಿರಕ್ಷಣೇ ।**
**ಅಶಿಕ್ಷತ ತಥಾ ಗೀತಂ ದಿವ್ಯವರ್ಷ ಸಹಸ್ರಕಂ ॥ ೧೩ ॥**

---

೯. ತನ್ನ ಅವಯುವಗಳನ್ನು ನೋಡುತ್ತ ಹಾಡಬಾರದು. ಇನ್ನೊಬ್ಬನನ್ನು ನೋಡಿಕೊಂಡು ಹಾಡಬಾರದು. ಕೈಯ್ಯನ್ನು ಮೇಲಕ್ಕೆತ್ತುತ್ತ ಹಾಡಬಾರದು. ದೃಷ್ಟಿಯನ್ನು ಮೆಲಕ್ಕಿಟ್ಟುಕೊಂಡು (ಮುಖವನ್ನು ಮೇಲಕ್ಕೆತ್ತಿಕೊಂಡು ನೋಡುತ್ತ) ಹಾಡಬಾರದು.

೧೦. ನಗುವುದು, ಭಯ, ಹಸಿವು, ನಡುಕ, ದುಃಖ, ಬೇರೆಯುವನ ಧ್ಯಾನ, ಬಾಯಾರಿಕೆ, ಈ ಏಳೂ ಕೂಡ ಗಾನಯೋಗದಲ್ಲಿರಕೂಡದು. ಅಂದರೆ ಆ ಕಾಲಗಳಲ್ಲಿ ಹಾಡಬಾರದು.

೧೧–೧೨. ಎಲೈ ಮುನಿಯೇ! ತಾಳವನ್ನು ಒಂದು ಕೈಯ್ಯಲ್ಲಿ ಹಾಕಬಾರದು. ಹಸಿವು, ಭಯ, ಬಾಯಾರಿಕೆಗಳುಳ್ಳವನು ಹಾಡಬಾರದು. ಕತ್ತಲೆಯಲ್ಲಿ ಹಾಡಬಾರದು. ಈ ನಿಯಮಗಳನ್ನು ಈ ಗಾನಯೋಗದಲ್ಲಿ ಆಚರಿಸಬೇಕು.

೧೩. ಉಲೂಕನು ಹೀಗೆ ಹೇಳುತ್ತಲೂ ನಾರದನು ಆ ನಿಯಮಗಳಂತೆ ಇದ್ದುಕೊಂಡು ಗಾನವನ್ನು ದೇವತೆಗಳ ಸಾವಿರ ವರುಷಗಳವರೆಗೂ ಕಲಿತನು.

ತತಸ್ಸಮಸ್ತಸಂಪನ್ನೋ ಗೀತಪ್ರಸ್ತಾವಕಾದಿಷು ।
ವಿಪಂಚ್ಯಾದಿಷು ಸಂಪನ್ನಃ ಸರ್ವಸ್ವರವಿಭಾಗವಿತ್ ॥ ೧೪ ॥

ಅಯುತಾನಿ ಚ ಷಟ್‌ತ್ರಿಂಶತ್ ಸಹಸ್ರಾಣಿ ಶತಾನಿ ಚ ।
ಸ್ವರಾಣಾಂ ಭೇದಯೋಗೇನ ಜ್ಞಾತವಾನ್ ಮುನಿಸತ್ತಮಃ ॥ ೧೫ ॥

ತತೋ ಗಂಧರ್ವಸಂಘಾಶ್ಚ ಕಿನ್ನರಾಣಾಂ ತಥಾ ಗಣಾಃ ।
ಮುನಿನಾ ಸಹ ಸಂಯುಕ್ತಾಃ ಪ್ರೀತಿಯುಕ್ತಾಸ್ತು ತೇಽಭವನ್ ॥ ೧೬ ॥

ಗಾನಬಂಧುಂ ಮುನಿಃ ಪ್ರಾಹ ಪ್ರಾಪ್ಯ ಗಾನಮನುತ್ತಮಂ ।
ತ್ವಾಂ ಸಮಾಸಾದ್ಯ ಸಂಪನ್ನಂ ತ್ವಂ ಹಿ ಗೀತವಿಶಾರದಃ ॥ ೧೭ ॥

ಧ್ವಾಂಕ್ಷಶತ್ರೋ ಮಹಾಪ್ರಾಜ್ಞ ಕಿಮವಾಪ್ಯಂ ಕರೋಮಿ ತೇ ।
ಗಾನಬಂಧುಸ್ತತಃ ಪ್ರಾಹ ನಾರದಂ ಮುನಿಪುಂಗವಂ ॥ ೧೮ ॥

---

೧೪. ಇದರಿಂದ ಗೀತಪ್ರಸ್ತಾರ ಮೂರ್ಛನೆ ಮುಂತಾದವುಗಳಲ್ಲಿಯೂ ವೀಣೆ ಮುಂತಾದುವುಗಳಲ್ಲಿಯೂ ವಿದ್ವಾಂಸನಾದನು. ಮತ್ತು ಎಲ್ಲಾ ಸ್ವರಗಳ ವಿಭಾಗ ಗಳನ್ನೂ ಅವುಗಳನ್ನೂ ಹೇಗೆ ಹೇಗೆ ಸೇರಿಸಬೇಕೆಂಬುದನ್ನೂ ತಿಳಿದುಕೊಂಡನು.

೧೫. ಮೂವತ್ತೇಳು ಸಾವಿರದ ನೂರು ಭೇದಗಳು ಈ ಸ್ವರಗಳಲ್ಲಿವೆ. ಈ ರೀತಿಯಾದ ಸ್ವರಭೇದಗಳನ್ನು ಆ ನಾರದನು ಚೆನ್ನಾಗಿ ತಿಳಿದನು.

೧೬. ಗಂಧರ್ವರ ಗುಂಪು, ಕಿನ್ನರರ ಗುಂಪು, ಇವರೆಲ್ಲರೂ ಆ ನಾರದನೊಡನೆ ಪ್ರೀತಿಯಿಂದ ಸೇರಿಕೊಂಡರು.

೧೭. ಅನಂತರ ನಾರದನು ಉತ್ತಮವಾದ ಗಾನವಿದ್ಯೆಯನ್ನು ಹೊಂದಿ ಆ ಗಾನಬಂಧುವನ್ನು ಕುರಿತು ಗೀತವಿಶಾರದನಾದ ನಿನ್ನ ಬಳಿಗೆ ಬಂದು ಎಲ್ಲವನ್ನೂ ತಿಳಿದುಕೊಂಡೆನು. ಎಲೈ ಕಾಗೆಗೆ ವೈರಿಯಾದ ಗೂಬೆಯೇ! ನಿನಗೆ ಏನು ಬೇಕೋ ಕೇಳು. ಅದು ಅಸಾಧ್ಯವಾದರೂ ಮಾಡಿಕೊಡುವೆನು.

೧೮–೨೦. ಅದನ್ನು ಕೇಳಿ ಗಾನಬಂಧುವು ಆ ನಾರದನನ್ನು ಕುರಿತು ಇಂತೆಂದನು. ಎಲೈ ನಾರದನೆ! ಬ್ರಹ್ಮನ ಒಂದು ದಿನದಲ್ಲಿ ಹದಿನಾಲ್ಕು ಜನ ಮನುಗಳು

ಬ್ರಹ್ಮಣೋ ದಿವಸೇ ಬ್ರಹ್ಮನ್ ಮನವಃ ಸ್ಯುಶ್ಚತುರ್ದಶ ।
ತತಸ್ತ್ರೈಲೋಕ್ಯಸಂಪ್ಲಾವೋ ಭವಿಷ್ಯತಿ ಮಹಾಮುನೇ ॥ ೧೯ ॥

ತಾವನ್ಮೇ ಸ್ಯಾದ್ಯಶೋಭಾಗಸ್ತಾವನ್ಮೇ ಪರಮಂ ಶುಭಂ ।
ಮನಸಾಧ್ಯಾಸಿತಂ ಮೇ ಸ್ಯಾತ್ ದಾಕ್ಷಿಣ್ಯಾನ್ಮುನಿಸತ್ತಮ ॥ ೨೦ ॥

ಉಲೂಕಂ ಪ್ರಾಹ ದೇವರ್ಷಿಃ ಸರ್ವಂ ತೇಽಸ್ತು ಮನೋಗತಂ ।
ಅತೀತೇ ಕಲ್ಪಸಂಯೋಗೇ ಗರುಡಸ್ತ್ವಂ ಭವಿಷ್ಯಸಿ ॥ ೨೧ ॥

ಗುಣಗಾನಾದಚ್ಯುತಸ್ಯ ಸಾಯುಜ್ಯಂ ತಸ್ಯ ಲಪ್ಸ್ಯಸೇ ।
ಸ್ವಸ್ತಿ ತೇಽಸ್ತು ಮಹಾಪ್ರಾಜ್ಞ ಗಮಿಷ್ಯಾಮಿ ಪ್ರಸೀದ ಮೇ ॥ ೨೨ ॥

---

ರಾಜ್ಯವಾಳುವರು. ಎಂದರೆ ಬ್ರಹ್ಮನ ಒಂದು ದಿನಕ್ಕೆ ಹದಿನಾಲ್ಕು ಮನ್ವಂತರ ವರ್ಷಗಳು ಕಳೆಯುತ್ತವೆ. ಆಮೇಲೆ ಮೂರು ಲೋಕವು ಪ್ರಳಯದಿಂದ ನಾಶ ವಾಗುತ್ತವೆ. ಅಲ್ಲಿಯವರೆಗೂ ನನ್ನ ಯಶಸ್ಸು ಎಲ್ಲಾ ಕಡೆಯಲ್ಲಿಯೂ ಇರಲಿ. ನನಗೆ ಬಹುವಾದ ಮಂಗಳವಾಗಲಿ. ನಾನು ಯಾವುದನ್ನು ಮನಸ್ಸಿನಲ್ಲಿ ಯೋಚಿಸಿ ಕೊಳ್ಳುತ್ತೇನೆಯೋ ಅವೆಲ್ಲವೂ ಕೈಗೂಡಬೇಕು.

(೧೨,೭೦೦ ದಿನಗಳಿಗೆ ದೇವತೆಗಳ ಒಂದು ಸಂವತ್ಸರ, ೧೨,೦೦೦ ಸಂವತ್ಸರ ಗಳಾದರೆ ದೇವತೆಗಳಿಗೆ ಒಂದು ಯುಗ, ಈ ದೇವಯುಗಗಳು ೨,೦೦೦ ಆದರೆ ಬ್ರಹ್ಮನಿಗೆ ಒಂದು ದಿವಸ ಎಂದರೆ ಹಗಲು ರಾತ್ರಿಯಿಂದ ಕೂಡಿದ ದಿನ. ಇಷ್ಟಕ್ಕೆ ಮನುಷ್ಯರಿಗೆ ಎರಡು ಕಲ್ಪಗಳಾಗುತ್ತವೆ. ಬ್ರಹ್ಮನ ಹಗಲೇ ಉದಯಕಲ್ಪ. ರಾತ್ರಿ ಯೇ ಕ್ಷಯ ಕಲ್ಪ. ಒಂದು ಮನ್ವಂತರಕ್ಕೆ ೭೧ ದೇವ ಯುಗಗಳು. ಇಂತಹ ಹದಿ ನಾಲ್ಕು ಎಂದರೆ ೯೯೪ ದೇವ ಯುಗಗಳಾದರೆ ಬ್ರಹ್ಮನಿಗೆ ಒಂದು ದಿನವಾಗುತ್ತದೆ.)

೨೧. ಆಗ ನಾರದನು ನಿನ್ನ ಇಷ್ಟವೆಲ್ಲವೂ ಕೈಗೂಡುತ್ತದೆ. ಈ ಕಲ್ಪವು ಕಳೆಯುತ್ತಲೂ ನೀನು ಗರುಡನಾಗುತ್ತೀಯೆ.

೨೨. ನೀನು ಅಚ್ಯುತನ ಗುಣಗಾನವನ್ನು ಮಾಡಿರುವುದರಿಂದ ಆ ಸ್ವಾಮಿ ಯ ಸಾಯುಜ್ಯವು ನಿನಗೆ ಸಿಕ್ಕುತ್ತದೆ. ಎಲೈ ಪ್ರಾಜ್ಞನೇ ! ನಿನಗೆ ಮಂಗಳವಾಗಲಿ ನಾನು ಹೋಗುತ್ತೇನೆ. ನನಗೆ ಅನುಗ್ರಹ ಮಾಡು.

**ಏವಮುಕ್ತ್ವಾ ಯಯೌ ವಿಪ್ರೋ ಜೇತುಂ ತುಂಬುರುಮುತ್ತಮಂ ।**
**ತುಂಬುರೋಶ್ಚ ಗೃಹಾಭ್ಯಾಶೇ ದದರ್ಶ ವಿಕೃತಾಕೃತೀನ್ ॥ ೨೩ ॥**

**ಕೃತ್ತಬಾಹೂರುಪಾದಾಂಶ್ಚ ಕೃತ್ತನಾಸಾಕ್ಷಿವಕ್ಷಸಃ ।**
**ಕೃತ್ತೋತ್ತಮಾಂಗಾಂಗುಳೀಂಶ್ಚ ಛಿನ್ನಭಿನ್ನ ಕಳೇಬರಾನ್ ॥ ೨೪ ॥**

**ಪುಂಸಃ ಸ್ತ್ರಿಯಶ್ಚ ವಿಕೃತಾನ್ ದದರ್ಶಾಯುತಶೋ ಬಹೂನ್ ।**
**ನಾರದೇನ ಚ ತೇ ಪ್ರೋಕ್ತಾಃ ಕೇ ಯೂಯಂ ಕೃತ್ತವಿಗ್ರಹಾಃ ॥ ೨೫ ॥**

**ನಾರದಂ ಪ್ರೋಚುರಪಿ ತೇ ತ್ವಯಾ ಕೃತ್ತಾಂಗಕಾ ವಯಂ ।**
**ವಯಂ ರಾಗಾಶ್ಚ ರಾಗಿಣ್ಯೋ ಗಾನೇನ ಭಿನ್ನಸಂಧಿನಾ ॥ ೨೬ ॥**

---

೨೩. ಆ ನಾರದನು ಗಾನಬಂಧುವಿಗೆ ಇಂತೆಂದು ಹೇಳಿ ತುಂಬುರುವನ್ನು ಗಾನವಿದ್ಯೆಯಿಂದ ಜಯಿಸಲು ಹೊರಟನು. ಅವನ ಮನೆಯ ಬಳಿಗೆ ಹೋಗಿ ಮನೆಯ ಬಳಿ ಅನೇಕವಾದ ವಿಕಾರಗಳನ್ನು ಹೊಂದಿದ್ದ ಜನರನ್ನು ನೋಡಿದನು.

೨೪-೨೫. ಅಲ್ಲಿ ಹೆಂಗಸರು, ಗಂಡಸರು ಎಲ್ಲರೂ ಗುಂಪು ಗುಂಪಾಗಿದ್ದರು. ಅವರಲ್ಲಿ ಕೆಲವರಿಗೆ ಕೈಗಳೂ, ಕೆಲವರಿಗೆ ತೋಳುಗಳೂ, ಕೆಲವರಿಗೆ ಕಾಲುಗಳೂ, ಕೆಲವರಿಗೆ ಮೂಗುಗಳೂ, ಕೆಲವರಿಗೆ ಕಣ್ಣುಗಳೂ, ಕೆಲವರಿಗೆ ಎದೆಯೂ, ಕೆಲವರಿಗೆ ತಲೆಯೂ, ಕೆಲವರಿಗೆ ಬೆರಳುಗಳೂ, ಕೆಲವರಿಗೆ ಕತ್ತೂ ಕತ್ತರಿಸಿ ಹೋಗಿದ್ದುವು. ಇವರು ಗುಂಪುಗುಂಪಾಗಿ ಆ ತುಂಬುರುವಿನ ಮನೆಯ ಹತ್ತಿರ ಸೇರಿರುವುದನ್ನು ನೋಡಿ ನಾರದನು ಈ ರೀತಿ ವಿಕಾರಿಗಳಾದ ನೀವಾರು? ಎಂದು ಕೇಳಿದನು.

೨೬-೨೭. ಆಗ ಅವರೆಲ್ಲರೂ ನಾರದನನ್ನು ಕುರಿತು ನಿನ್ನಿಂದ ನಮ್ಮ ಈ ಅವಯವಗಳೆಲ್ಲವೂ ಕತ್ತರಿಸಿ ಹೋಗಿವೆ. ನಾವು ರಾಗಗಳು ಮತ್ತು ರಾಗಿಣಿಯರು. ಸಂಧಿಯನ್ನು ಸರಿಯಾಗಿ ಬಿಡಿಸದೆ ನೀನು ಗಾನಮಾಡಿದರೆ ನಮಗೆ ಅವಯವಗಳೆಲ್ಲವೂ ಕತ್ತರಿಸಿ ಹೋಗಿ ಈ ರೀತಿಯಾದ ಅವಸ್ಥೆಯು ಒದಗುತ್ತದೆ. ಮತ್ತು ನಮ್ಮನ್ನು ತುಂಬುರುವು ಗಾನಮಾಡಿದರೆ ನಮಗೆ ಕತ್ತರಿಸಿ ಹೋಗಿರುವ

ಭವತಾ ಗೀಯತೇ ಯರ್ಹಿ ತರ್ಹ್ಯವಸ್ಥೇದೃಶೀ ಹಿ ನಃ ।
ಪುನಸ್ತುಂಬುರುಗಾನೇನ ಛಿನ್ನಭಿನ್ನಪ್ರರೋಹಣಂ ॥ ೨೭ ॥

ತುಂಬುರುರ್ಜೀವಯತ್ಯೇಷಃ ತ್ವಂ ಮಾರಯಸಿ ನಾರದ ।
ತದಾಶ್ಚರ್ಯಂ ಮಹದ್ದೃಷ್ಟ್ವಾ ಶ್ರುತ್ವಾ ಚ ವಿಸ್ಮಯಾನ್ವಿತಃ ॥ ೨೮ ॥

ಧಿಕ್ ಧಿಗುಕ್ತ್ವಾ ಜಗಾಮಾಥ ನಾರದೋಽಪಿ ಜನಾರ್ದನಂ ।
ಶ್ವೇತದ್ವೀಪೇ ಸ ಭಗವಾನ್ ನಾರದಂ ಪ್ರಾಹ ಮಾಧವಃ ॥ ೨೯ ॥

ಗಾನಬಂಧೌ ಚ ಯದ್ಗಾನಂ ನ ಚೈತೇನಾಸಿ ಪಾರಗಃ ।
ತುಂಬುರೋಸ್ಸದೃಶೋ ನಾಸಿ ಗಾನೇನಾನೇನ ನಾರದ ॥ ೩೦ ॥

ಮನೋರ್ವೈವಸ್ವತಸ್ಯಾಹ ಮಷ್ಟಾವಿಂಶತಿಮೇ ಯುಗೇ ।
ದ್ವಾಪರಾಂತೇ ಭವಿಷ್ಯಾಮಿ ಯದುವಂಶಕುಲೋದ್ಭವಃ ॥ ೩೧ ॥

---

ಆ ಜಾಗಗಳೆಲ್ಲವೂ ಮತ್ತೆ ಹುಟ್ಟುತ್ತವೆ ನಮ್ಮನ್ನು ಗಾನಮಾಡುವುದರಿಂದ ತುಂಬುರವು ಬದುಕಿಸುತ್ತಾನೆ. ನೀನು ಗಾನ ಮಾಡುವುದರಿಂದ ನಾವೆಲ್ಲವೂ ಸಾಯುತ್ತೇವೆ. ಎಲೈ ನಾರದನೆ! ನಮ್ಮ ಸ್ಥಿತಿಯು ಹೀಗಿದೆ. ಅದರಿಂದ ಇಲ್ಲಿ ನಿಂತಿದ್ದೇವೆ.

೨೮–೨೯. ನಾರದನು ಈ ಆಶ್ಚರ್ಯವನ್ನು ನೋಡಿ ಅವರ ವಿಷಯವನ್ನು ಕೇಳಿ ಆಶ್ಚರ್ಯಗೊಂಡು “ ನನಗೆ ಧಿಕ್ಕಾರವಿರಲಿ, ನನಗೆ ಧಿಕ್ಕಾರವಿರಲಿ, ಎಂದೆನ್ನುತ್ತ ಆ ನಾರದನು ಜನಾರ್ದನನಿರುವಲ್ಲಿಗೆ ಹೋದನು. ಆ ಸ್ವಾಮಿಯು ಶ್ವೇತದ್ವೀಪ ದಲ್ಲಿರಲು ನಾರದನು ಅಲ್ಲಿಗೇ ಹೋದನು. ನಾರದನು ಬಂದುದನ್ನು ಆ ಸ್ವಾಮಿಯು ನೋಡಿ ಇಂತೆಂದನು.

೩೦. ಎಲೈ ನಾರದನೇ! ಗಾನಬಂಧುವಿನಲ್ಲಿ ನೀನು ಕಲಿತ ಗಾನದಿಂದ ಗಾನ ಪಾರಗನಾಗಲಿಲ್ಲ. ಈ ಗಾನಾಭ್ಯಾಸದಿಂದ ನೀನು ತುಂಬುರುಗೆ ಸಮನಾಗಲಿಲ್ಲ.

೩೧-೩೨. ವೈವಸ್ವತ ಮನ್ವಂತರವು ನಡೆಯುತ್ತಿರುವಾಗ ಇಪ್ಪತ್ತೆಂಟನೆಯ ಯುಗದಲ್ಲಿ ದ್ವಾಪರಯುಗದ ಕೊನೆಯಲ್ಲಿ ಯದುವಂಶದಲ್ಲಿ ಅವತರಿಸುತ್ತೇನೆ.

ದೇವಕ್ಯಾಂ ವಸುದೇವಸ್ಯ ಕೃಷ್ಣನಾಮ್ನಾ ಮಹಾಮುನೇ ।
ತದಾನೀಂ ಮಾಂ ಸಮಾಗಮ್ಯ ಸ್ಮಾರಯೈತದ್ಯಥಾತಥಂ ॥ ೩೨ ॥

ತತ್ರ ತ್ವಾಂ ಗಾನಸಂಪನ್ನಂ ಕರಿಷ್ಯಾಮಿ ಮಹಾವ್ರತ ।
ತುಂಬುರೋಶ್ಚ ಸಮಂ ಚೈವ ತಥಾತಿಶಯಸಂಯುತಂ ॥ ೩೩ ॥

ತಾವತ್ಕಾಲಂ ಯಥಾ ಯೋಗಂ ದೇವಗಂಧರ್ವಯೋನಿಷು ।
ಶಿಕ್ಷ ತ್ವಂ ಹಿ ಯಥಾನ್ಯಾಯ್ಯಮಿತ್ಯುಕ್ತ್ವಾಂತರಧೀಯತ ॥ ೩೪ ॥

ತತೋ ಮುನಿಃ ಪ್ರಣಮ್ಯೈನಂ ವೀಣಾವಾದನತತ್ಪರಃ ।
ದೇವರ್ಷಿಃ ದೇವಸಂಕಾಶಃ ಸರ್ವಾಭರಣಭೂಷಿತಃ ॥ ೩೫ ॥

ತಪಸಾಂ ನಿಧಿರತ್ಯರ್ಥಂ ವಾಸುದೇವಪರಾಯಣಃ ।
ಸ್ಕಂಧೇ ವಿಪಂಚೀಮಾಧಾಯ ಸರ್ವಲೋಕಾಂಶ್ಚಚಾಲ ಸಃ ॥ ೩೬ ॥

---

ಆಗ ದೇವಕಿ ವಸುದೇವರಿಗೆ ಮಗನಾಗಿ ಹುಟ್ಟಿ ಕೃಷ್ಣನೆಂಬ ಹೆಸರಿನಿಂದ ಪ್ರಸಿದ್ಧ ನಾಗುತ್ತೇನೆ. ಆಗ ನನ್ನ ಬಳಿಗೆ ಬಂದು ಈ ವಿಷಯವನ್ನು ಸರಿಯಾಗಿ ಹೇಳಿ ಜ್ಞಾಪಿಸು.

೩೩-೩೪. ಆಗ ನಿನ್ನನ್ನು ನಾನು ಗಾನದಲ್ಲಿ ಪಂಡಿತನನ್ನಾಗಿ ಮಾಡುತ್ತೇನೆ. ತುಂಬುರುಗೆ ಸಮನನ್ನಾಗಿಯೂ ಕೊನೆಗೆ ಅವನಿಗಿಂತಲೂ ಬುದ್ಧಿವಂತನನ್ನಾಗಿಯೂ ಮಾಡುತ್ತೇನೆ. ಅಲ್ಲಿಯವರೆಗೂ ನೀನು ದೇವತೆಗಳಲ್ಲಿ, ಗಂಧರ್ವರಲ್ಲಿ, ತಿಳಿದವರು ಯಾರ್ಯಾರಿದ್ದರೆ ಅವರಲ್ಲಿ ಎಲ್ಲಾ ಸರಿಯಾಗಿ ಕಲಿಯುತ್ತಲಿರು ಎಂದು ಆ ಸ್ವಾಮಿಯು ಹೇಳಿ ಅಂತರ್ಧಾನನಾದನು.

೩೫-೩೬. ಆಗ ಆ ನಾರದನು ಆ ಸ್ವಾಮಿಗೆ ನಮಸ್ಕರಿಸಿ ವೀಣೆಯನ್ನು ಬಾರಿಸುತ್ತ ಸರ್ವಾಭರಣಭೂಷಿತನಾಗಿ ವಾಸುದೇವನಲ್ಲಿ ಮನಸ್ಸನ್ನಿಟ್ಟು ಗಾನ ಮಾಡುತ್ತ ಕತ್ತಿನಮೇಲೆ ಆ ವೀಣೆಯನ್ನು ಹೊತ್ತುಕೊಂಡು ಎಲ್ಲಾ ಲೋಕಗಳನ್ನೂ ಸುತ್ತುತ್ತಿದ್ದನು.

**ವಾರುಣಂ ಯಾಮ್ಯಮಾಗ್ನೇಯ ಮೈಂದ್ರಂ ಕೌಬೇರ ಮೇವ ಚ ।**
**ವಾಯವ್ಯಂ ಚ ತಥೈಶಾನಂ ಸಂಶಯಂ ಪ್ರಾಪ್ಯಧರ್ಮವಿತ್ ॥ ೩೭ ॥**

**ಗಾಯಮಾನೋ ಹರಿಂ ಸಮ್ಯಕ್ ವೀಣಾವಾದನಿಚಕ್ಷಣಃ ।**
**ಗಂಧರ್ವಾಪ್ಸರಸಾಂ ಸಂಘೈಃ ಪೂಜ್ಯಮಾನಸ್ತತಸ್ತತಃ ॥ ೩೮ ॥**

**ಬ್ರಹ್ಮಲೋಕಂ ಸಮಾಸಾದ್ಯ ಕಸ್ಮಿಂಶ್ಚಿತ್ಕಾಲ ಪರ್ಯಯೇ ।**
**ಹಾಹಾಹೂಹೂಶ್ಚ ಗಂಧರ್ವೌ ಗೀತವಾದ್ಯವಿಶಾರದೌ ॥ ೩೯ ॥**

**ಬ್ರಹ್ಮಣೋ ಗಾಯಕೌ ದಿವ್ಯೌ ನಿತ್ಯಂ ಗಂಧರ್ವಸತ್ತಮೌ ।**
**ತತ್ರ ತಾಭ್ಯಾಂ ಸಮಾಸಾದ್ಯ ಗಾಯಮಾನೋ ಹರಿಂ ವಿಭುಂ ॥ ೪೦ ॥**

**ಬ್ರಹ್ಮಣಾ ಚ ಮಹಾತೇಜಾಃ ಪೂಜಿತೋ ಮುನಿಸತ್ತಮಃ ।**
**ತಂ ಪ್ರಣಮ್ಯ ಮಹಾತ್ಮಾನಂ ಸರ್ವಲೋಕ ಪಿತಾಮಹಂ ॥ ೪೧ ॥**

೩೭. ವರುಣ, ಯಮ, ಅಗ್ನಿ, ಇಂದ್ರ, ಕುಬೇರ, ವಾಯು, ಈಶಾನ, ಇಲ್ಲೆಲ್ಲ ಸಂಶಯಪಟ್ಟುಕೊಂಡೇ ಸುತ್ತುತ್ತಿದ್ದನು.

೩೮-೩೯. ವೀಣೆಯನ್ನು ನುಡಿಸುತ್ತ ಹರಿಯನ್ನು ಗಾನಮಾಡುತ್ತ ಅಲ್ಲಲ್ಲಿಯೇ ಗಂಧರ್ವರು ಅಪ್ಸರರುಗಳಿಂದ ಗೌರವಿಸಲ್ಪಡುತ್ತ ಕೆಲವು ಕಾಲ ಕಳೆದ ಮೇಲೆ ಬ್ರಹ್ಮಲೋಕಕ್ಕೆ ಬಂದನು. ಅಲ್ಲಿ ಬ್ರಹ್ಮನ ಗಾಯಕರಾದ ಹಾ ಹಾ ಹೂ ಹೂಗಳನ್ನು ನೋಡಿ ಅವರೊಡನೆ ಕೆಲವು ಕಾಲ ಗಾನ ಮಾಡುತ್ತಲಿದ್ದನು. ಆ ಹಾ ಹಾ ಹೂ ಹೂಗಳೆಂಬವರು, ಗಂಧರ್ವರು ಗಾನದಲ್ಲಿ ಬಹು ನಿಪುಣರು.

೪೦. ಆ ಹಾ ಹಾ ಹೂ ಹೂಗಳೊಡನೆ ಆ ಸ್ವಾಮಿಯಾದ ಹರಿಯನ್ನು ಗಾನ ಮಾಡುತ್ತ ಸ್ವಲ್ಪ ಭಾಗವನ್ನು ಕಲಿತನು. ಆಗ ಅಲ್ಲಿ ಬ್ರಹ್ಮನಿಂದ ಗೌರವಿಸಲ್ಪಟ್ಟನು.

೪೧. ಆಮೇಲೆ ನಾರದನು ಲೋಕ ಪಿತಾಮಹನಾದ ಬ್ರಹ್ಮನನ್ನು ನಮಸ್ಕರಿಸಿ ಅಲ್ಲಿಂದ ಹೊರಟು ತನ್ನ ಮನಸ್ಸಿಗೆ ಬಂದಂತೆ ಎಲ್ಲಾ ಲೋಕಗಳಲ್ಲಿಯೂ ಸಂಚರಿಸಿದನು.

**ಚಚಾರ ಚ ಯಥಾ ಕಾಮಂ ಸರ್ವಲೋಕೇಷು ನಾರದಃ ।**
**ಪುನಃ ಕಾಲೇನ ಮಹತಾ ಗೃಹಂ ಪ್ರಾಪ್ಯ ಚ ತುಂಬುರೋಃ** ॥ ೪೨ ॥

**ವೀಣಾಮಾದಾಯ ತತ್ರಸ್ಥಃ ತತ್ರಸ್ಥೈರಪ್ಯಲಕ್ಷಿತಃ ।**
**ಸುರಕನ್ಯಾಶ್ಚ ತತ್ರಸ್ಥಾಃ ಷಡ್ಜಾದ್ಯಾಃ ಸಹ ದೈವತಾಃ** ॥ ೪೩ ॥

**ವ್ರೀಡಿತೋ ಭಗವಾನ್ ದೃಷ್ಟ್ವಾ ನಿರ್ಗತಶ್ಚ ಸ ಸತ್ವರಂ ।**
**ಶಿಕ್ಷಯಾಮಾಸ ಬಹುಶಃ ತತ್ರ ತತ್ರ ಮಹಾಮುನಿಃ** ॥ ೪೪ ॥

**ಕಾಲೇತೀತೇ ತತೋ ವಿಷ್ಣುಃ ಅವತೀರ್ಣೋ ಜಗತ್ಪತಿಃ ।**
**ದೇವಕ್ಯಾಂ ವಸುದೇವಸ್ಯ ಯಾದವ್ಯೋಸೌ ಮಹಾದ್ಯುತಿಃ** ॥ ೪೫ ॥

**ಸಪ್ತಸ್ವರಾಂಗನಾ ದ್ರಷ್ಟುಂ ಗಾನವಿದ್ಯಾ ವಿಶಾರದಃ ।**
**ಯಯೌ ರೈವತಕೇ ಕೃಷ್ಣಂ ಪ್ರಣಿಪತ್ಯ ಮಹಾಮುನಿಃ** ॥ ೪೬ ॥

---

೪೨. ಮತ್ತೆ ಬಹುಕಾಲದ ಮೇಲೆ ತುಂಬುರುವಿನ ಮನೆಗೆ ಹೋದನು. ವೀಣೆಯನ್ನು ಹಿಡಿದುಕೊಂಡು ಅಲ್ಲಿರುವವರಿಗೆ ಕಾಣದಂತೆ ಮರೆಯಾಗಿದ್ದನು.

೪೩–೪೪. ಆಗ ಆ ತುಂಬುರುವಿನ ಮನೆಯ ಬಳಿಯಲ್ಲಿ ನೋಡಲು ಷಡ್ಜಾದಿಗಳಾದ ಸುರ ಕನ್ಯೆಯರು ಅಲ್ಲಿದ್ದುದನ್ನು ನೋಡಿ ಮತ್ತೆ ನಾರದನು ನಾಚಿಕೆಗೊಂಡು ಅಲ್ಲಿಂದ ಜಾಗ್ರತೆಯಾಗಿ ಹೊರಟನು. ಅಲ್ಲಲ್ಲಿಯೇ ಸಿಕ್ಕಿರುವವರ ಬಳಿಯಲ್ಲಿ ಆ ಷಡ್ಜಾದಿಗಳನ್ನು ಕಲಿಯುತ್ತ ಬಂದನು.

೪೫. ಕಾಲವು ಕಳೆಯುತ್ತಿರಲು ವಿಷ್ಣುವು ವಸುದೇವನಿಂದ ದೇವಕಿಯಲ್ಲಿ ಯದುವಂಶದಲ್ಲಿ ಹುಟ್ಟಿದನು. ಸಪ್ತಸ್ವರಾಂಗನೆಯರೂ ಅಲ್ಲಿ ಹುಟ್ಟಿದರು.

೪೬. ಗಾನ ವಿದ್ಯಾವಿಶಾರದನಾದ ಈ ನಾರದನು ಸಪ್ತ ಸ್ವರಾಂಗನೆಯರನ್ನೂ ಕೃಷ್ಣನನ್ನೂ ನೋಡಲು ರೈವತಕ ಪರ್ವತಕ್ಕೆ ಹೋದನು. ಅಲ್ಲಿ ಕೃಷ್ಣನಿರಲು ಅವನಿಗೆ ನಮಸ್ಕರಿಸಿದನು.

**ವ್ಯಜ್ಞಾಪಯದಶೇಷಂತ ಚ್ಛ್ವೇತದ್ವೀಪೇ ತ್ವಯಾ ಪುರಾ ।**
**ನಾರಾಯಣೇನ ಕಥಿತಂ ಗಾನಯೋಗಾರ್ಥಮುತ್ತಮಂ ॥ ೪೭ ॥**

**ತಚ್ಛ್ರುತ್ವಾ ಪ್ರಹರ್ಸ ಕೃಷ್ಣಃ ಪ್ರಾಹ ಜಾಂಬವತೀಂ ಮುದಾ ।**
**ಏನಂ ಮುನಿವರಂ ಭದ್ರೇ ಶಿಕ್ಷಯಸ್ವ ಯಥಾವಿಧಿ ॥ ೪೮ ॥**

**ವೀಣಾಗಾನಸಮಾಯೋಗೇ ತಥೇತ್ಯಾಹ ಚ ಸಾ ಪತಿಂ ।**
**ಪ್ರಹಸಂತೀ ಯಥಾಯೋಗಂ ಶಿಕ್ಷಯಾಮಾಸ ತಂ ಮುನಿಂ ॥ ೪೯ ॥**

**ತತಃ ಸಂವತ್ಸರೇ ಪೂರ್ಣೇ ನಾರದಂ ಪ್ರಾಹ ಕೇಶವಃ ।**
**ಸತ್ಯಾಸ್ಸಮೀಪಮಾಗಚ್ಛ ಶಿಕ್ಷಸ್ವ ಚ ತಥಾ ಪುನಃ ॥ ೫೦ ॥**

**ತಥೇತ್ಯುಕ್ತ್ವಾ ಸತ್ಯಭಾಮಾಂ ಪ್ರಣಿಪತ್ಯ ಯಯೌ ಮುನಿಃ ।**
**ತಯಾ ಸ ಶಿಕ್ಷಿತೋ ವಿದ್ವಾನ್ ಪೂರ್ಣೇ ಸಂವತ್ಸರೇ ತತಃ ॥ ೫೧ ॥**

೪೭. ಆಗ ನಾರದನು ಶ್ವೇತ ದ್ವೀಪದಲ್ಲಿ ಹೇಳಿದುದನ್ನೆಲ್ಲಾ ಬಿಡದೆ ವಿಜ್ಞಾಪಿಸಿದನು. ಮತ್ತು ಆಗ ನಾರಾಯಣನಾಗಿದ್ದ ನೀನು ಗಾನವನ್ನು ಹೇಳುತ್ತೇನೆಂದು ಹೇಳಿದ್ದೆ ಎಂದನು. ಅದನ್ನು ಕೃಷ್ಣನು ಕೇಳಿ ನಗುತ್ತ ಜಾಂಬುವತಿಯನ್ನು ಕುರಿತು ಇಂತೆಂದನು.

೪೮-೪೯. ಎಲೈ ಜಾಂಬುವತಿಯೇ ! ಈ ಮುನಿವರನಿಗೆ ಸರಿಯಾಗಿ ವೀಣೆಯನ್ನು ನುಡಿಸಿಕೊಂಡು ಗಾನ ಮಾಡುವುದನ್ನು ಕಲಿಸು ಎನ್ನಲು ಆಕೆಯು ನಗುತ್ತ ಹಾಗೇ ಆಗಲೆಂದಳು. ಮತ್ತು ಕ್ರಮವಾಗಿ ಹೇಳಿಕೊಡುತ್ತಲೂ ಬಂದಳು.

೫೦. ಅನಂತರ ಹೀಗೆ ಒಂದು ವರ್ಷ ಕಳೆಯಲು ಕೇಶವನು ನಾರದನನ್ನು ಕುರಿತು ಸತ್ಯಭಾಮೆಯ ಬಳಿಗೆ ಬಾ, ಅಲ್ಲಿಯೂ ಕೆಲವು ದಿನಗಳವರೆಗೆ ಅಭ್ಯಾಸಮಾಡು ಎಂದನು,

೫೧. ಹಾಗೇ ಆಗಲೆಂದು ಆ ಕೃಷ್ಣನಿಗೆ ನಮಸ್ಕರಿಸಿ ಸತ್ಯಭಾಮೆಯ ಬಳಿಗೆ ಹೋದನು. ಅವಳೂ ವಿದ್ಯೆಯನ್ನು ಹೇಳಿಕೊಡಲು ಒಂದು ವರ್ಷದವರೆಗೂ ಕಲಿತನು. ಅನಂತರ ವಾಸುದೇವನು ರುಕ್ಮಿಣಿಯ ಬಳಿಗೆ ಹೋಗೆನ್ನಲು ಅಂತೆಯೇ ಆವಳ ಮನೆಗೆ ಹೋದನು.

ವಾಸುದೇವ ನಿಯುಕ್ತೋಽಸೌ ರುಕ್ಮಿಣ್ಯಾಸ್ಸದನಂ ಗತಃ ।
ಅಂಗನಾಭಿಸ್ತತ್ರತ್ಯಾಭಿಃ ದಾಸೀಭಿರ್ಮುನಿಸತ್ತಮಃ ॥ ೫೨ ॥

ಉಕ್ತೋಽಸೌ ಗಾಯಮಾನೋಽಪಿ ನ ಸ್ವರಂ ವೇತ್ಸಿ ವೈ ಮುನೇ ।
ತತಃ ಶ್ರಮೇಣ ಮಹತಾ ಯಾವತ್ಸಂವತ್ಸರದ್ವಯಂ ॥ ೫೩ ॥

ಶಿಕ್ಷಿತೋಽಸೌ ತದಾ ದೇವ್ಯಾ ರುಕ್ಮಿಣ್ಯಾಧಿಜಗೌ ಮುನಿಃ
ನ ತು ಸ್ವರಾಂಗನಾಃ ಪ್ರಾಪ ತಂತ್ರೀಯೋಗೇ ಮಹಾಮುನಿಃ ॥ ೫೪ ॥

ಆಹೂಯ ಕೃಷ್ಣೋ ಭಗವಾನ್ ಸ್ವಯಮೇವ ಮಹಾಮುನಿಂ ।
ಅಶಿಕ್ಷಯದಮೇಯಾತ್ಮಾ ಗಾನಯೋಗಮನುತ್ತಮಂ ॥ ೫೫ ॥

ಕೃಷ್ಣದತ್ತೇನ ಗಾನೇನ ತಸ್ಯಾಯಾತಾಃ ಸ್ವರಾಂಗನಾಃ ।
ಬ್ರಹ್ಮಾನಂದಃ ಸಮಭವನ್ನಾರದಸ್ಯ ಚ ಚೇತಸಿ ॥ ೫೬ ॥

---

೫೨–೫೪. ಅವನು ರುಕ್ಮಿಣಿಯ ಬಳಿಯಲ್ಲಿ ಗಾನವನ್ನು ಅಭ್ಯಾಸ ಮಾಡುತ್ತಿದ್ದರೂ ಅಲ್ಲಿಯ ದಾಸಿಯರೂ ಕೂಡ ಎಲೈ ಮುನಿಯೇ! ನಿನಗೆ ಸ್ವರವೇ ಸರಿಯಾಗಿ ತಿಳಿಯದಲ್ಲ! ಎನ್ನುತ್ತಿದ್ದರು. ಆದರೂ ಅಲ್ಲಿ ಎರಡು ವರ್ಷಗಳವರೆಗೂ ಕಷ್ಟಪಟ್ಟು ಕಲಿತನು. ಆಗ ರುಕ್ಮಿಣಿಯ ಶಿಕ್ಷೆಯಿಂದ ಹಾಡುವುದಕ್ಕೆ ಮಾತ್ರ ಬಂದಿತು. ಆದರೆ ವೀಣೆಯಲ್ಲಿ ಸ್ವರವನ್ನು ನುಡಿಸಲು ಆತನಿಗೆ ಬರಲೇ ಇಲ್ಲ.

೫೫. ಇದನ್ನು ನೋಡಿ ಆ ಸ್ವಾಮಿಯು ನಾರದನಿಗೆ ತಾನೇ ಸ್ವಂತವಾಗಿ ಆ ಗಾನಯೋಗವನ್ನು ಹೇಳಿಕೊಡಲು ಮೊದಲುಮಾಡಿದನು.

೫೬–೫೭. ಕೃಷ್ಣನು ಗಾನವನ್ನು ಹೇಳಿಕೊಡಲು ಸ್ವರಾಂಗನೆಯರೆಲ್ಲರೂ ಆ ನಾರದನಿಗೆ ವಶರಾದರು. ಆಗ ನಾರದನ ಮನಸ್ಸಿನಲ್ಲಿ ಬ್ರಹ್ಮಾನಂದವುಂಟಾಯಿತು. ದ್ವೇಷ, ಅಸೂಯೆ ಮುಂತಾದ ದೋಷಗಳೆಲ್ಲವೂ ನಾಶವಾದುವು.

ತತೋ ದ್ವೇಷಾದಯೋ ದೋಷಾಃ ಸರ್ವೇ ಅಸ್ತಂಗತಾ ದ್ವಿಜ ।
ಈರ್ಷ್ಯಾ ಚ ತುಂಬುರೌ ಯಾಸೀತ್ ನಾರದಸ್ಯ ಚ ಸಾ ಗತಾ ॥ ೫೭ ॥

ತತೋ ನನರ್ತ ದೇವರ್ಷಿಃ ಪ್ರಣಿಪತ್ಯ ಜನಾರ್ದನಂ ।
ಉವಾಚ ಚ ಹೃಷೀಕೇಶಃ ಸರ್ವಜ್ಞಸ್ತ್ವಂ ಮಹಾಮುನೇ ॥ ೫೮ ॥

ಪ್ರಾಚೀನ ಗಾನಯೋಗೇನ ಗಾಯಸ್ವ ಮಮ ಸನ್ನಿಧೌ ।
ಏತತ್ತೇ ಪ್ರಾರ್ಥಿತಂ ಪ್ರಾಪ್ತಂ ಮಮ ಲೋಕೇ ತಥೈವ ಚ ॥ ೫೯ ॥

ನಿತ್ಯಂ ತುಂಬುರುಣಾ ಸಾರ್ಧಂ ಗಾಯಸ್ವ ಚ ಯಥಾ ತಥಾ ।
ಏವಮುಕ್ತೋ ಮುನಿಸ್ತತ್ರ ಯಥಾಯೋಗಂ ಚಚಾರ ಸಃ ॥ ೬೦ ॥

ತಥಾ ಸಂಪೂಜಯತ್ಕೃಷ್ಣಂ ರುದ್ರಂ ಭುವನನಾಯಕಂ ।
ತದಾ ಜಗೌ ಹರೇಸ್ತತ್ರ ನಿಯೋಗಾಚ್ಛಂಕರಾಲಯೇ ॥ ೬೧ ॥

---

ನಾರದನಿಗೆ ತುಂಬುರುವಿನಲ್ಲಿ ಯಾವ ಹೊಟ್ಟೆಗಿಚ್ಚಿದ್ದಿತೋ ಅದು ಹೊರಟು ಹೋಯಿತು.

೫೮. ಆಗ ಆ ದೇವರ್ಷಿಯಾದ ನಾರದನು ಜನಾರ್ಧನನಿಗೆ ನಮಸ್ಕರಿಸಿ ಹರ್ಷದಿಂದ ಕುಣಿದಾಡಿದನು. ಆಗ ಆ ಕೃಷ್ಣನು ಎಲೈ ನಾರದನೆ ನೀನು ಸರ್ವಜ್ಞ ನಾದೆ ಎಂದೆನು.

೫೯-೬೦. ಎಲೈ ನಾರದನೆ! ಪ್ರಾಚೀನ ಗಾನದ ಯೋಗದಿಂದ ನನ್ನ ಬಳಿ ಯಲ್ಲಿ ಹಾಡು. ಇದನ್ನೇ ನೀನು ಅಪೇಕ್ಷಿಸುತ್ತಿದ್ದುದು. ಅದು ಪ್ರಾಪ್ತವಾಯಿತು. ನೀನು ನನ್ನ ಲೋಕದಲ್ಲಿ ತುಂಬುರುವಿನೊಡನೆ ಯಾವಾಗಲೂ ಇದ್ದುಕೊಂಡು ಸಮಯವನ್ನು ನೋಡಿಕೊಂಡು ಹಾಡುತ್ತಿರು. ಈ ರೀತಿಯಾಗಿ ಕೃಷ್ಣನು ಹೇಳಲು ಹಾಗೆಯೇ ಆಗಲೆಂದು ಹೇಳಿ ಎಲ್ಲವನ್ನೂ ಮಾಡಿದನು.

೬೧. ಈ ರೀತಿಯಾಗಿ ಕೃಷ್ಣನನ್ನೂ ರುದ್ರನನ್ನೂ ಕುರಿತು ಹಾಡುತ್ತ ಕೃಷ್ಣ ನನ್ನು ಸಂತೋಷಪಡಿಸಿದನು. ಮತ್ತು ಕೃಷ್ಣನ ಅಪ್ಪಣೆಯಂತೆ ಶಿವದೇವಸ್ಥಾನ ದಲ್ಲಿ ಹಾಡಿದನು.

ರುಕ್ಮಿಣ್ಯಾ ಸತ್ಯಯಾ ಸಾರ್ಧಂ ಜಾಂಬವತ್ಯಾ ಮಹಾಮುನಿಃ ।
ಕೃಷ್ಣೇನ ಚ ದ್ವಿಜಶ್ರೇಷ್ಠ ಶ್ರುತಿಜಾತಿವಿಶಾರದಃ ॥ ೬೨ ॥

ಏವಂ ತೇ ಮುನಿಶಾರ್ದೂಲ ಪ್ರೋಕ್ತಂ ಗೀತಕ್ರಮಂ ಮಯಾ ।
ಬ್ರಾಹ್ಮಣೋ ವಾಸುದೇವಾಖ್ಯಂ ಗಾಯಮಾನೋಽನಿಶಂ ದ್ವಿಜ ॥ ೬೩ ॥

ಹರೇಃ ಸಾಯುಜ್ಯಮಾಪ್ನೋತಿ ಸರ್ವಯಜ್ಞ ಫಲಂ ಲಭೇತ್ ।
ಅನ್ಯಥಾ ನರಕಂ ಗಚ್ಛೇತ್ ಗಾಯಮಾನೋಽನ್ಯದೇವ ಹಿ ॥ ೬೪ ॥

ಕರ್ಮಣಾ ಮನಸಾ ವಾಚಾ ವಾಸುದೇವ ಪರಾಯಣಃ ।
ಗಾಯಞ್ ಶೃಣ್ವನ್ ತಮಾಪ್ನೋತಿ ತಸ್ಮಾಚ್ಛ್ರೇಷ್ಠಃ ಪ್ರಿಯಂವದಃ ॥ ೬೫ ॥

---

೬೨. ರುಕ್ಮಿಣಿ, ಸತ್ಯಭಾಮೆ, ಜಾಂಬುವತಿ, ಕೃಷ್ಣ ಇವರಿಂದ ನಾರದನು ಸಂಗೀತದ ಶ್ರುತಿಯೂ, ಜಾತಿಯೂ ಸರಿಯಾಗಿ ತಿಳಿಯುವಂತೆ ತಿಳಿದು ಕೊಂಡನು.

೬೩-೬೪. ಎಲೈ ಭರದ್ವಾಜನೆ! ನಿನಗೆ ಈ ರೀತಿಯಾಗಿ ಗೀತದ ರೀತಿ ಯನ್ನು ತಿಳಿಸಿದ್ದೇನೆ. ಬ್ರಾಹ್ಮಣನಾದವನು ವಾಸುದೇವನನ್ನು ಯಾವಾಗಲೂ ಗಾನಮಾಡುತ್ತಿರಬೇಕು. ಹಾಗೆ ಮಾಡಿದರೆ ಹರಿಯ ಸಾಯುಜ್ಯವನ್ನು ಹೊಂದು ತ್ತಾನೆ. ಎಲ್ಲಾ ಯಾಗಗಳ ಫಲವನ್ನೂ ಹೊಂದುತ್ತಾನೆ. ಹಾಗಿಲ್ಲದೆ ಬೇರೆಯ ದೇವರನ್ನು ಗಾನಮಾಡಿದರೆ ನರಕವನ್ನು ಹೊಂದುತ್ತಾನೆ.

೬೫. ಮನಸ್ಸು ವಾಕ್ಕು ಕರ್ಮಗಳಿಂದ ವಾಸುದೇವನನ್ನೇ ಗಾನಮಾಡುತ್ತ ಅವನ ಗಾನವನ್ನೇ ಕೇಳುತ್ತಲಿದ್ದರೆ ಆ ಸ್ವಾಮಿಯನ್ನೇ ಹೊಂದುತ್ತಾನೆ. ಆದ್ದರಿಂದ ಅವನು ಶ್ರೇಷ್ಠನು ಎಂದು ತಿಳಿ.

**ಕಥಿತಮಿದಮಪೂರ್ವಂ ಜಾನಕೀ ಜನ್ಮಪೂರ್ವಂ**
**ಶ್ರುತಿಸುಖಮತಿಗುಹ್ಯಂ ಸ್ನೇಹತಸ್ತೇತಿಬಾಹ್ಯಂ ।**
**ಕಲುಷಕುಲವಿಪಕ್ಷಂ ಭವ್ಯದಾನೈಕದಕ್ಷಂ**
**ನೃಭಿರವಿರತವಂದ್ಯಂ ಸರ್ವದೇವಾಭಿನಂದ್ಯಂ ॥ ೬೬ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ನಾರದಗಾನಪ್ರಾಪ್ತಿರ್ನಾಮ**
**ಸಪ್ತಮಃ ಸರ್ಗಃ**

---

೬೬. ಎಲೈ ಭರದ್ವಾಜನೆ! ಜಾನಕಿಯ ಜನ್ಮವನ್ನು ಹೇಳುವ ಸಂದರ್ಭದಲ್ಲಿ ಈ ಗುಹ್ಯವಾದ ಶ್ರುತಿಸುಖವನ್ನುಂಟುಮಾಡುವ ಪಾಪನಾಶಕವಾದ ಮುಕ್ತಿಯನ್ನು ಕೊಡುವ ಯಾವಾಗಲೂ ಪ್ರೀತಿಪಾತ್ರವಾದ ಮತ್ತು ವಂದನಾರ್ಹವಾದ ಈ ಗಾನವಿದ್ಯೆಯನ್ನು ನಿನ್ನಲ್ಲಿರುವ ಸ್ನೇಹದಿಂದ ಹೇಳಿದ್ದೇನೆ.

ಇಂತು ವಾಲ್ಮೀಕಿಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀರಾಮಾಯಣದಲ್ಲಿ
ಅದ್ಭುತೋತ್ತರ ಕಾಂಡದಲ್ಲಿ ನಾರದನಿಗೆ ಗಾನಪ್ರಾಪ್ತಿ ಎಂಬ
ಏಳನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತ ರಾಮಾಯಣೇ

## ಅಥ ಅಷ್ಟಮಃ ಸರ್ಗಃ

ಯಥಾ ಸಾ ಶೋಣಿತೋದ್ಭೂತಾ ರಾಕ್ಷಸೀಗರ್ಭಸಂಭವಾ ।
ಯಥಾಭೂಮಿತಲೋತ್ಪನ್ನಾ ಜಾನಕೀ ಚ ಯಥಾ ಹಿ ಸಾ ॥ ೧ ॥

ಸೀತಾ ತಚ್ಛೃಣು ವಿಪ್ರೇಂದ್ರ ವರ್ಣಯಾಮಿ ತವಾನಘ ।
ದಶಾಸ್ಯೋ ರಾವಣೋ ನಾಮ ತಪಸ್ತಪ್ತುಂ ಮನೋ ದಧೇ ॥ ೨ ॥

ತ್ರೈಲೋಕ್ಯಸ್ಯಾಧಿಪತ್ಯಾಯ ಅಜರಾಮರಣಾಯ ಚ ।
ಬಹುವರ್ಷಂ ತಪಸ್ತಪ್ತ್ವಾ ಜ್ವಲನಾರ್ಕಸಮೋಜ್ಜ್ವಲತ್ ॥ ೩ ॥

### ಎಂಟನೆಯ ಸರ್ಗವು

೧-೨. ಸೀತೆಯು ರಕ್ತದಿಂದ ಹುಟ್ಟಿದ ಬಗೆಯನ್ನೂ ರಾಕ್ಷಸಿಯ ಹೊಟ್ಟೆಯಲ್ಲಿ ಹುಟ್ಟಿದ ರೀತಿಯನ್ನೂ ಭೂಮಿಯಲ್ಲಿ ಬಂದು ಜನಕನಿಗೆ ಸಿಕ್ಕಿದ ರೀತಿಯನ್ನೂ ನಿನಗೆ ಹೇಳುತ್ತೇನೆ. ಎಲೈ ಭರದ್ವಾಜನೆ! ಮನಸ್ಸಿಟ್ಟು ಕೇಳು. ಹತ್ತು ತಲೆಯುಳ್ಳ ರಾವಣನೆಂಬ ರಾಕ್ಷಸನು ತಪಸ್ಸನ್ನು ಮಾಡಲು ಮನಸ್ಸು ಮಾಡಿದನು.

೩. ಮೂರು ಲೋಕಕ್ಕೂ ಒಡೆಯನಾಗಬೇಕೆಂದೂ ಮುಪ್ಪುಸಾವುಗಳನ್ನು ಕಳೆದುಕೊಳ್ಳಬೇಕೆಂದೂ ಬಹು ವರ್ಷಗಳವರೆಗೆ ತಪಸ್ಸನ್ನು ಮಾಡಿ ಬೆಂಕಿ ಮತ್ತು ಸೂರ್ಯರಂತೆ ಪ್ರಕಾಶಿಸುತ್ತಿದ್ದನು.

ತತ್ತೇಜಸಾ ಜಗತ್ಸರ್ವಂ ದಹ್ಯಮಾನಂ ಯದಾಭವತ್ ।
ತಮುವಾಚ ತದಾ ಬ್ರಹ್ಮಾ ಸಮಾಗತ್ಯ ಸುರೈರ್ವೃತಃ ॥ ೪ ॥

ಪೌಲಸ್ತ್ಯ ವಿರಮಾದ್ಯ ತ್ವಂ ತಪಸೋ ಮಮ ವಾಕ್ಯತಃ ।
ತಪಸೋಗ್ರೇಣ ಮಹತಾ ಲೋಕಾ ಭಸ್ಮೀಕೃತಾ ಇವ ॥ ೫ ॥

ವರಂ ದದಾಮಿ ತೇ ವತ್ಸ ಯತ್ತೇ ಮನಸಿವರ್ತತೇ ।
ತಪೋಧನ ಲಭಸ್ವಾದ್ಯ ವರದಾನ್ಮತ್ತ ಈಪ್ಸಿತಂ ॥ ೬ ॥

ನ್ಯವಾರಯತ ಚಕ್ಷೂಂಷಿ ಸೂರ್ಯಬಿಂಬಾವಲೋಕನಾತ್ ।
ಪ್ರಣಿಪತ್ಯ ಜಗನ್ನಾಥಂ ವರಂ ವವ್ರೇ ಸ ರಾವಣಃ ॥ ೭ ॥

ದೇಹಿ ಸರ್ವಾಮರತ್ವಂ ಮೇ ವರದೋಸಿ ಯದಿ ಪ್ರಭುಃ ।
ತದಾಕರ್ಣ್ಯ ವಚೋ ಬ್ರಹ್ಮಾ ಪುನಃ ಪ್ರಾಹ ಸ ರಾವಣಂ ॥ ೮ ॥

---

೪. ಆ ತೇಜಸ್ಸಿನಿಂದ ಜನಗಳು ಸುಟ್ಟು ಹೋಗುತ್ತಿರಲು ಬ್ರಹ್ಮನು ದೇವತೆಗಳೊಡನೆ ಆ ರಾವಣನ ಬಳಿಗೆ ಬಂದು ಅವನನ್ನು ಕುರಿತು ಇಂತೆಂದನು.

೫. ಎಲೈ ಪುಲಸ್ತ್ಯನ ಮಗನಾದ ರಾವಣನೇ! ನನ್ನ ಮಾತಿಗೆ ಗೌರವವನ್ನು ಕೊಟ್ಟು ತಪಸ್ಸು ಮಾಡುವುದನ್ನು ನಿಲ್ಲಿಸು. ನಿನ್ನ ಈ ಉಗ್ರವಾದ ತಪಸ್ಸಿನಿಂದ ಲೋಕಗಳೆಲ್ಲವೂ ಭಸ್ಮವಾದಂತಾಗಿದೆ.

೬. ಎಲೈ ವತ್ಸನೇ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೊಡುತ್ತೇನೆ ಎಲೈ ತಪೋಧನನೇ! ವರದಾತನಾದ ನನ್ನಿಂದ ನೀನು ಬೇಕಾದುದನ್ನು ಹೊಂದು.

೭. ಈ ಮಾತನ್ನು ಕೇಳಿ ತಪಸ್ಸಿನಿಂದ ಸೂರ್ಯಮಂಡಲವನ್ನೇ ನೋಡುತ್ತಿದ್ದವನು ಅದನ್ನು ಬಿಟ್ಟು ಕಣ್ಣುಗಳನ್ನು ಇತ್ತ ತಿರುಗಿಸಿದನು. ಮತ್ತು ಜಗನ್ನಾಥನಾದ ಬ್ರಹ್ಮನಿಗೆ ನಮಸ್ಕರಿಸಿ ವರವನ್ನು ಕೇಳಿಕೊಂಡನು.

೮. ಎಲೈ ಬ್ರಹ್ಮನೆ! ನೀನು ನನಗೆ ವರವನ್ನು ಕೊಡಲು ಬಂದಿರುವ ಪಕ್ಷದಲ್ಲಿ ನಾನು ಯಾವ ಬಗೆಯಲ್ಲಿಯೂ ಸಾಯಕೂಡದು. ಆ ರೀತಿಯಾದ ವರವನ್ನು ಕೊಡು ಎಂದನು. ಅದನ್ನು ಕೇಳಿ ಬ್ರಹ್ಮನು ಆ ರಾವಣನನ್ನು ಕುರಿತು ಮತ್ತೆ ಇಂತೆಂದನು.

ನ ಹಿ ಸರ್ವಾಮರತ್ವಂ ತೇ ವರಮನ್ಯಂ ವೃಣೀಷ್ವ ಮೇ ।
ತತಃ ಸ ರಾವಣಃ ಪ್ರಾಹ ಕೂಟವಾದೀ ಹಿ ರಾಕ್ಷಸಃ ॥ ೯ ॥

ನ ಸುರಾ ನಾಸುರಾ ಯಕ್ಷಾಃ ಪಿಶಾಚೋರಗ ರಾಕ್ಷಸಾಃ ।
ವಿದ್ಯಾಧರಾಃ ಕಿನ್ನರಾ ವಾ ತಥೈವಾಪ್ಸರಸಾಂ ಗಣಾಃ ॥ ೧೦ ॥

ನ ಹನ್ಯುರ್ಮಾಂ ಕಥಂ ಚಿತ್ತೇ ದೇಹಿ ಮೇ ವರಮುತ್ತಮಂ ।
ಅನ್ಯಚ್ಚ ತೇ ವೃಣೇ ಬ್ರಹ್ಮ್ ತಚ್ಛೃಣುಷ್ವ ಪಿತಾಮಹ ॥ ೧೧ ॥

ಆತ್ಮನೋ ದುಹಿತಾ ಮೋಹಾದತ್ಯರ್ಥಂ ಪ್ರಾರ್ಥಿತಾ ಭವೇತ್ ।
ತದಾ ಮೃತ್ಯುರ್ಮಮ ಭವೇತ್ ಯದಿ ಕನ್ಯಾ ನ ಕಾಂಕ್ಷತಿ ॥ ೧೨ ॥

ತಥೇತ್ಯುಕ್ತ್ವಾ ಜಗಾಮಾಶು ಬ್ರಹ್ಮಾ ಲೋಕಪಿತಾಮಹಃ ।
ನರಾನ್ನಾ ಜೀಗಣದ್ರಕ್ಷೋ ಮತ್ವಾ ತಾಂಸ್ತೃಣವದ್ದ್ವಿಜ ॥ ೧೩ ॥

---

೯. ಎಲೈ ರಾವಣನೇ! ಒಬ್ಬರಿಂದಲೂ ಸಾಯದಿರುವಿಕೆಯನ್ನು ಕೊಡಲು ಆಗುವುದಿಲ್ಲ. ಬೇರೆಯ ವರವನ್ನು ಕೇಳಿಕೋ ಎಂದನು. ಆಗ ಆ ರಾವಣನು ಇಂತೆಂದನು. ಆ ರಾಕ್ಷಸನು ಕಪಟಿಯಷ್ಟೆ! ಆದ್ದರಿಂದ ಬೇರೆ ರೀತಿಯಾಗಿ ಇಂತೆಂದು ಕೇಳಿದನು.

೧೦-೧೧. ಸುರರು, ಅಸುರರು, ಯಕ್ಷರು, ಪಿಶಾಚರು, ಉರಗರು, ರಾಕ್ಷಸರು ವಿದ್ಯಾಧರರು, ಕಿನ್ನರರು. ಅಪ್ಸರರು ಯಾರೂ ಕೂಡ ನನ್ನನ್ನು ಕೊಲ್ಲಲು ಆಗಬಾರದು ಅಂತಹ ಉತ್ತಮವಾದ ವರವನ್ನು ಕೊಡು. ಎಲೈ ಬ್ರಹ್ಮನೆ! ಇದೂ ಅಲ್ಲದೆ ಮತ್ತೊಂದು ವರವನ್ನು ಕೇಳಿಕೊಳ್ಳುತ್ತೇನೆ. ಅದನ್ನು ಕೇಳು.

೧೨. ನಾನು ನನ್ನ ಮಗಳನ್ನೇ ಬಹುವಾದ ಕಾಮುಕ ಪ್ರೀತಿಯಿಂದ ರಮಿಸಲು ಕೇಳಿಕೊಳ್ಳಬೇಕು. ಆಗ ಆಕೆಯು ನನ್ನೊಡನೆ ರಮಿಸಲು ಅಪೇಕ್ಷಿಸದೆ ನಿರಾಕರಿಸಿದರೆ ಆಗ ನನಗೆ ಮೃತ್ಯುವು ಬರಬೇಕು.

೧೩. ಸರ್ವ ಲೋಕಕ್ಕೂ ಪಿತಾಮಹನಾದ ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ಹೊರಟುಹೋದನು. ಆದರೆ ಆ ರಾಕ್ಷಸನು ಮನುಷ್ಯರು ಹುಲ್ಲಿನಂತೆ ಬಲಹೀನರೆಂದು ತಿಳಿದು ಅವರನ್ನು ಲೆಕ್ಕಿಸದೆ ಅವರಿಂದ ಮರಣವಾಗದಿರುವಿಕೆಯನ್ನು ಕೇಳಿಕೊಳ್ಳಲಿಲ್ಲ.

ಬ್ರಹ್ಮದತ್ತವರೋ ರಾಜಾ ರಾವಣೋ ವರದರ್ಪಿತಃ ।
ತ್ರೈಲೋಕ್ಯಜಯ ಸರ್ವಸ್ವಂ ಪ್ರಾಪ್ತವಾನ್ ಬಾಹುವೀರ್ಯತಃ ॥ ೧೪ ॥

ಏಕದಾ ರಾವಣೋ ರಾಜಾ ದಂಡಕಾರಣ್ಯಮಾಗತಃ ।
ತತ್ರರ್ಷೀನಗ್ನಿಕಲ್ಪಾಂಶ್ಚ ದೃಷ್ಟ್ವಾ ಮನಸ್ಯಚಿಂತಯತ್ ॥ ೧೫ ॥

ಏತಾನಜಿತ್ವಾ ಹಿ ಕಥಂ ತ್ರಿಲೋಕೀಜಯಭಾಗಹಂ ।
ಏಷಾಂ ವಧೇನ ಚ ಶ್ರೇಯೋ ನ ಪಶ್ಯಾಮಿ ಮಹಾತ್ಮನಾಂ ॥ ೧೬ ॥

ದುರಾತ್ಮಾ ಸ ವಿಚಿಂತ್ಯೈತತ್ ಪ್ರಾಹತಾನ್ಮುನಿಪುಂಗವಾನ್ ।
ಅಹಂ ಸರ್ವಸ್ಯ ಜಗತಃ ಶಾಸ್ತಾ ಚ ಜಯಭಾಗಹಂ ॥ ೧೭ ॥

---

೧೪. ರಾಜನಾದ ರಾವಣನು ಬ್ರಹ್ಮನು ಕೊಟ್ಟ ವರದಿಂದ ಗರ್ವಿತನಾಗಿ ತನ್ನ ತೋಳಿನ ಬಲದಿಂದ ಮೂರು ಲೋಕದ ಜಯವನ್ನು ಹೊಂದಿದನು.

೧೫. ಆ ರಾವಣನು ಒಂದು ಸಾರಿ ದಂಡಕಾರಣ್ಯಕ್ಕೆ ಬಂದನು. ಅಲ್ಲಿ ಅನೇಕ ಜನ ಋಷಿಗಳು ತಪಸ್ಸು ಮಾಡುತ್ತಿದ್ದರು. ಅವರೆಲ್ಲರೂ ಅಗ್ನಿಯಂತೆ ಪರಿಶುದ್ಧ ರಾಗಿಯೂ ಪ್ರಕಾಶಿಸುತ್ತಲೂ ಇದ್ದರು. ಅವರನ್ನು ನೋಡಿ ಇಂತೆಂದು ಯೋಚಿಸಿದನು.

೧೬. ಇವರೂ ಕೂಡ ಮೂರು ಲೋಕದಲ್ಲಿ ಸೇರಿದವರೇ. ಇವರನ್ನು ಜಯಿಸದಿದ್ದರೆ ನನಗೆ ಮೂರು ಲೋಕದ ಜಯವು ಹೇಗೆ ಬಂದೀತು? ಆದರೆ ಇವರನ್ನು ಕೊಂದರೆ ಪಡಿಸಿದರೆ ನನಗೆ ಒಳ್ಳೆಯದಾಗುವುದಿಲ್ಲ. ಏನು ಮಾಡಲಿ? ಎಂದು ಯೋಚಿಸಿದನು.

೧೭. ಆ ದುಷ್ಟನು ಹೀಗೆ ಯೋಚಿಸಿ ಆ ಋಷಿಗಳನ್ನು ಕುರಿತು ಇಂತೆಂದನು. ಎಲೈ ಋಷಿಗಳಿರ! ನಾನು ಮೂರು ಲೋಕಗಳಿಗೂ ಒಡೆಯನು ಮತ್ತು ಮೂರು ಲೋಕಗಳ ಜಯವನ್ನೂ ಪಡೆದಿದ್ದೇನೆ. ಆದರೆ ನಿಮ್ಮಿಂದಲೂ ಜಯವನ್ನು ಪಡೆಯಬೇಕೆಂದಿದ್ದೇನೆ. ಆ ಜಯವನ್ನು ನನಗೆ ಕೊಡಿರಿ.

ಭವತಾಂ ಜಯಮಾಕಾಂಕ್ಷೇ ಜಯಂ ದತ್ತ ದ್ವಿಜರ್ಷಭಾಃ ।
ಇತ್ಯುಕ್ತ್ವಾ ಸ ಶರಾಗ್ರೇಣ ಕ್ಷತಾಚ್ಛೋಣಿತಮಂಗತಃ ॥ ೧೮ ॥

ಬಲಾದಾಕೃಷ್ಯ ತೇಷಾಂ ವೈ ಕಲಶೇಸ್ಥಾಪಯತ್ಪ್ರಭುಃ ।
ತತ್ರ ಗೃತ್ಸಮದೋ ನಾಮ ಶತಪುತ್ರಪಿತಾ ದ್ವಿಜಃ ॥ ೧೯ ॥

ದುಹಿತ್ರರ್ಥೇ ಭಾರ್ಯಯಾ ಸ ಪ್ರಾರ್ಥಿತೋ ಭಗವಾನ್ಮುನಿಃ ।
ಲಕ್ಷ್ಮೀರ್ಮದುಹಿತಾ ಭೂಯಾದಿತ್ಯಸೌ ಕಲಶೇ ವಿಭುಃ ॥ ೨೦ ॥

ದುಗ್ಧಂ ಚಾಹರಹಸ್ತತ್ರ ಕುಶಾಗ್ರೇಣ ಸ ಮಂತತ್ರಃ ।
ಸ್ಥಾಪಯತ್ಯೇಷ ನಿಯತಸ್ತದಹರ್ನಿರ್ಯಯೌವನಂ ॥ ೨೧ ॥

ತದ್ದಿನೇ ದೈವಯೋಗೇನ ಕಲಶೇ ತತ್ರ ರಾವಣಃ ।
ಮುನೀನಾಂ ಶೋಣಿತಂ ಸ್ಥಾಪ್ಯ ಗೃಹೀತ್ವಾ ಸ್ವಗೃಹಂ ಯಯೌ ॥ ೨೨ ॥

---

೧೮. ಹೀಗೆಂದು ಹೇಳಿ ಬಾಣವನ್ನು ತೆಗೆದುಕೊಂಡು ಅವರಿಂದ ಬಲಾತ್ಕಾರದಿಂದ ಅವರಿಗೆ ಗಾಯವನ್ನು ಮಾಡಿ ಆ ಗಾಯದಿಂದ ಬಂದ ರಕ್ತವನ್ನು ತೆಗೆದುಕೊಂಡು ಒಂದು ಬಿಂದಿಗೆಯಲ್ಲಿಟ್ಟನು.

೧೯–೨೧. ಆ ದಂಡಕಾರಣ್ಯದಲ್ಲಿ ಗೃತ್ಸಮದನೆಂಬ ಒಬ್ಬ ಋಷಿ ಇದ್ದನು. ಅವನಿಗೆ ನೂರು ಜನ ಗಂಡು ಮಕ್ಕಳಿದ್ದರು. ಆದರೆ ಹೆಣ್ಣು ಮಕ್ಕಳಿರಲಿಲ್ಲ. ಹೀಗಿರಲು ಒಂದು ದಿನ ಆತನ ಹೆಂಡತಿಯು ನನಗೆ ಗಂಡು ಮಕ್ಕಳು ಬೇಕಾದಂತಿದ್ದಾರೆ. ಆದರೆ ಒಬ್ಬಳೂ ಹೆಣ್ಣು ಮಗಳಿಲ್ಲ. ಆ ಒಬ್ಬಳು ಹೆಣ್ಣುಮಗಳನ್ನುತ್ಪಾದಿಸಿ ಕೊಡು ಎಂದು ಆ ಹೆಂಡತಿಯು ಕೇಳಿಕೊಂಡಳು. ಆ ಗೃತ್ಸಮದನು ಅದಕ್ಕೆ ಗೌರವವನ್ನು ಕೊಟ್ಟು ಲಕ್ಷ್ಮಿಯೇ ನನಗೆ ಮಗಳಾಗಬೇಕೆಂದು ಯೋಚಿಸಿ ಒಂದು ಕಲಶವನ್ನಿಟ್ಟು ಅದಕ್ಕೆ ಅಭಿಮಂತ್ರಿಸಿ ಹಾಲನ್ನು ಅಭಿಮಂತ್ರಿಸುತ್ತ ನಿತ್ಯವೂ ದರ್ಭೆಯ ತುದಿಯಿಂದ ಒಂದೊಂದು ತೊಟ್ಟು ಹಾಲನ್ನು ಅದರೊಳಕ್ಕೆ ಹಾಕುತ್ತಿದ್ದನು. ಆದರೆ ಈ ರಾವಣನು ಬಂದಾಗ ಅವನು ಕಾಡಿಗೆ ಹೋಗಿದ್ದನು.

೨೨. ಆ ದಿನ ದೈವಯೋಗದಿಂದ ರಾವಣನು ಆ ಕಲಶವನ್ನು ತೆಗೆದು ಅದಕ್ಕೆ ಆ ಮುನಿಗಳ ರಕ್ತವನ್ನು ಹಾಕಿಕೊಂಡು ತನ್ನ ರಾಜಧಾನಿಗೆ ಹೊರಟು ಹೋದನು.

ಭಾರ್ಯಾಂ ಮಂಡೋದರೀಂ ಪ್ರಾಹ ಕಲಶಂ ರಕ್ಷ ಸುಂದರಿ ।
ವಿಷಾದಪ್ಯಧಿಕಂ ವಿದ್ಧಿ ಶೋಣಿತಂ ಕಲಶೇ ಸ್ಥಿತಂ ॥ ೨೩ ॥

ನ ದೇಯಂ ನಾಪಿ ವಾ ಭಕ್ಷ್ಯಂ ಮುನೀನಾಂ ಶೋಣಿತಂ ತ್ವಿದಂ ।
ತ್ರೈಲೋಕ್ಯ ಜಯಲಾಭೇನ ರಾವಣೋ ಲೋಕರಾವಣಃ ॥ ೨೪ ॥

ದೇವದಾನವಯಕ್ಷಾಣಾಂ ಗಂಧರ್ವಾಣಾಂ ಚ ಕನ್ಯಕಾಃ ।
ಆಹೃತ್ಯ ರಮಯಾಮಾಸ ಮಂದರೇ ಸತ್ಯಪರ್ವತೇ ॥ ೨೫ ॥

ಹಿಮವನ್ಮೇರುವಿಂಧ್ಯಾದ್ರೌ ರಮಣೀಯ ವನೇ ತಥಾ ।
ಮಂಡೋದರೀ ತಥಾ ದೃಷ್ಟ್ವಾ ಪತಿಂ ಸಾ ಹಿ ಮನಸ್ವಿನೀ ॥ ೨೬ ॥

---

೨೩. ಆಗ ಹೆಂಡತಿಯಾದ ಮಂಡೋದರಿಯನ್ನು ಕುರಿತು ಈ ಬಿಂದಿಗೆಯನ್ನು ಜೋಕೆಯಾಗಿ ಕಾಪಾಡಿಕೊಂಡಿರು. ಇದರೊಳಗೆ ರಕ್ತವಿರುವುದು. ಇದು ವಿಷಕ್ಕಿಂತಲೂ ಹೆಚ್ಚಿನ ವೇಗವುಳ್ಳದೆಂದು ತಿಳಿ.

೨೪–೨೫. ಈ ರಕ್ತವನ್ನು ಯಾರಿಗೂ ಕೊಡಬೇಡ ನೀನು ಭಕ್ಷಿಸಬೇಡ, ಇದು ಮುನಿಗಳ ರಕ್ತವು. ಅತ್ಯುಗ್ರವಾದುದು. ಎಂದು ಎಚ್ಚರಿಸಿ ಹೇಳಿದನು. ಇತ್ತ ರಾವಣನು ಮೂರು ಲೋಕವನ್ನೂ ಜಯಿಸುತ್ತ ಲೋಕವನ್ನೇ ಹೆದರಿಸಿದವನಾಗಿ ದೇವತೆಗಳು, ದಾನವರು, ಯಕ್ಷರು ಗಂಧರ್ವರು ಇವರುಗಳ ಸುಂದರಿಯರಾದ ಕನ್ಯೆಯರನ್ನು ಬಲಾತ್ಕಾರದಿಂದ ತಂದು ಸತ್ಯಪರ್ವತವೆಂದೆನಿಸಿಕೊಳ್ಳುವ ಮಂದರ ಪರ್ವತದಲ್ಲಿಯೂ ಹಿಮವಂತನಲ್ಲಿಯೂ, ಮೇರು, ವಿಂಧ್ಯ ಪರ್ವತಗಳಲ್ಲಿಯೂ ಅವರೊಡನೆ ರಮಿಸುತ್ತ ಬಂದನು. ಮತ್ತು ಎಲ್ಲೆಲ್ಲಿ ರಮಣೀಯ ಪ್ರದೇಶಗಳಿವೆಯೋ ಅಲ್ಲೆಲ್ಲವೂ ರಮಿಸುತ್ತ ಬಂದನು.

೨೬–೨೭. ಮಂಡೋದರಿಯು ತನ್ನ ಕಷ್ಟವನ್ನು ಯೋಚಿಸಿ ಮನಸ್ಸಿಗೆ ಹಚ್ಚಿಸಿಕೊಳ್ಳುವಳು. ತನ್ನ ಗಂಡನು ಈ ರೀತಿಯಾಗಿ ಬೇರೆಯವರ ಕನ್ಯೆಯರೊಡನೆ ಕ್ರೀಡಿಸುತ್ತಿರುವುದನ್ನು ನೋಡಿದಳು. ಆಗ ತನ್ನಲ್ಲಿ ಗಂಡನಿಗೆ ಸ್ನೇಹವಿಲ್ಲವೆಂಬುದನ್ನು ತಿಳಿದು ತನ್ನನ್ನು ನಿಂದಿಸಿಕೊಂಡಳು. ಹೆಂಗಸರು ಎಷ್ಟು

ಆತ್ಮಾನಂ ಗರ್ಹಯಾಮಾಸ ಭರ್ತುಃ ಸ್ನೇಹ ಮಪಶ್ಯತೀ ।
ಧಿಕ್ ಜೀವಿತಂ ಹಿ ನಾರೀಣಾಂ ಯೌವನಂ ಕುಲಮೇವ ಚ ॥ ೨೭ ॥

ವಂಚಿತಾ ಪತಿನಾ ಯಾಸ್ಸ್ಯುಃ ತಸ್ಮಾನ್ಮೇ ಮರಣಂ ವರಂ ।
ಪುರಾ ರಾವಣಸಂದಿಷ್ಟಂ ಶೋಣಿತಂ ಕ್ಷ್ವೇಡತೋಧಿಕಂ ॥ ೨೮ ॥

ಪಪೌ ಮರಣಮಾಕಾಂಕ್ಷ್ಯ ಪತಿನಾ ವಂಚಿತಾ ಸತೀ ।
ಲಕ್ಷ್ಮೀಶರಣದುಗ್ಧೇನ ಮಿಶ್ರಿತಾಚ್ಛೋಣಿತಾದ ಭೂತ್ ॥ ೨೯ ॥

ಸದ್ಯೋ ರಾವಣಕಾಂತಾಯಾ ಗರ್ಭೋಜ್ವಲನಸನ್ನಿಭಃ ।
ತತೋ ವಿಸ್ಮಯಮಾಪನ್ನಾ ಸಾ ಹಿ ಮಂಡೋದರೀ ಶುಭಾ ॥ ೩೦ ॥

---

ಯೌವನವತಿಯರಾಗಿದ್ದರೇನು ? ಎಷ್ಟು ಉತ್ತಮ ಕುಲದಲ್ಲಿ ಹುಟ್ಟಿದ್ದರೇನು ? ಅವರನ್ನು ಗಂಡನು ತಿರಸ್ಕಾರಮಾಡಿದರೆ ಅಥವಾ ಅವರನ್ನು ಗಂಡನು ಕಣ್ಣೆತ್ತಿಯೂ ನೋಡದಿದ್ದರೆ ಅಂತಹ ಸ್ತ್ರೀಯರನ್ನು ಧಿಕ್ಕರಿಸಬೇಕು. ಈಗ ನಾನು ಆ ರೀತಿಯಾದ ಧಿಕ್ಕಾರವನ್ನು ಹೊಂದಿರುವೆನು. ಈಗ ನಾನು ಈ ಪ್ರಾಣಗಳನ್ನಿಟ್ಟುಕೊಂಡಿರುವುದಕ್ಕಿಂತಲೂ ಸಾಯುವುದು ಉತ್ತಮವು ಎಂದುಕೊಂಡಳು.

೨೮. ಈ ಕಲಶದಲ್ಲಿರುವ ಋಷಿಗಳ ರಕ್ತವು ವಿಷಕ್ಕಿಂತಲೂ ಹೆಚ್ಚು ಪ್ರಭಾವಶಾಲಿಯಾದುದೆಂದು ಹಿಂದೆ ರಾವಣನು ನನಗೆ ಹೇಳಿದ್ದನು. ಇದನ್ನು ಕುಡಿದು ಮರಣವನ್ನು ಹೊಂದುತ್ತೇನೆ, ಎಂದು ಗಂಡನಿಂದ ಅವಮಾನವನ್ನು ಹೊಂದಿದ ಆ ಮಂಡೋದರಿಯು ಸಾಯಲಿಚ್ಛೆಯಿಂದ ಆ ರಕ್ತವನ್ನು ಕುಡಿದಳು.

೨೯. ಲಕ್ಷ್ಮಿಗೆ ಆಶ್ರಯವಾಗಿದ್ದ ಆ ಹಾಲಿನ ಜೊತೆಯಲ್ಲಿ ಈ ರಕ್ತವೂ ಸೇರಿಕೊಂಡಿದ್ದುದರಿಂದ ಆ ರಾವಣನ ಹೆಂಡತಿಯಾದ ಮಂಡೋದರಿಯ ಪ್ರಾಣಗಳು ಹೋಗುವುದಕ್ಕೆ ಬದಲಾಗಿ ಉತ್ತಮೋತ್ತಮವಾದ ಅಗ್ನಿಯಂತೆ ಜ್ವಲಿತವಾದ ಗರ್ಭವು ಒಡನೆಯೇ ಉಂಟಾಯಿತು.

೩೦ ೩೧. ಆಗ ಆ ಪತಿವ್ರತೆಯಾದ ಮಂಡೋದರಿಗೆ ಬಹು ಆಶ್ಚರ್ಯವಾಯಿತು. ಇದೇನು ವಿಷಕ್ಕಿಂತಲೂ ಅಧಿಕವಾದುದೆಂದು ಈ ಋಷಿಗಳ ರಕ್ತವನ್ನು

ಪೀತಂ ವಿಷಾಧಿಕಂ ರಕ್ತಂ ಗರ್ಭಸ್ತೇನಾಭವನ್ಮಮ ।
ಇತಿ ಸಂಚಿಂತಯಾಮಾಸ ಭರ್ತಾ ವಿಪ್ರೋಷಿತೋ ಮಮ ॥ ೩೧ ॥

ಕಾಮಿನೀಭಿಃ ಕ್ರೀಡತೇ ಸ ಕಾಮೀ ಭರ್ತಾ ಹಿ ರಾವಣಃ
ಸಂವತ್ಸರಮಿಮಂ ಭರ್ತ್ರಾ ಸಹ ಮೇ ವಸತಿರ್ನ ಹಿ ॥ ೩೨ ॥

ಕಿಂ ವಕ್ತವ್ಯಂ ಮಯಾ ಸಾಧ್ವ್ಯಾ ಗರ್ಭಿಣ್ಯಾ ಭರ್ತೃಸಂಸದಿ ।
ಚಿಂತಯಾ ದಗ್ಧಗಾತ್ರೀವ ತೀರ್ಥಸೇವನಚ್ಛದ್ಮನಾ ॥ ೩೩ ॥

ವಿಮಾನವರಮಾರುಹ್ಯ ಕುರುಕ್ಷೇತ್ರಂ ಜಗಾಮ ಸಾ ।
ತತ್ರ ಗರ್ಭಂ ವಿನಿಷ್ಕೃಷ್ಯ ನಿಚಖಾನ ಭುವಸ್ತಲೇ ॥ ೩೪ ॥

ಸ್ನಾತ್ವಾ ಸರಸ್ವತೀತೋಯೇ ಪುನರಾಯಾತ್ ಸ್ವಮಾಲಯಂ ।
ನ ಚೋದಿತಂ ತತ್ ಕಸ್ಮೈಚಿದ್ರಹಃ ಕಾರ್ಯಂ ಸುಗೋಪಿತಂ ॥ ೩೫ ॥

---

ಕುಡಿದೆನು. ಅದರಿಂದ ನನಗೆ ಗರ್ಭೋತ್ಪತ್ತಿಯಾಯಿತಲ್ಲ! ನನ್ನ ಗಂಡನಾದರೋ ಊರಿನಲ್ಲಿಯೇ ಇಲ್ಲ! ಅವನು ಕಾಮಿಯಾಗಿ ಕಾಮಿನಿಯರಾದ ಕನ್ಯೆಯರೊಡನೆ ಕ್ರೀಡಿಸುತ್ತಿರುವುದರಿಂದ ಬರುವಂತೆಯೂ ಇಲ್ಲ. ಒಂದು ವರ್ಷದಿಂದಲೂ ನನಗೂ ಗಂಡನಿಗೂ ಸಂಬಂಧವೇ ಇಲ್ಲ. ಏನು ಮಾಡಲಿ ಎಂದುಕೊಳ್ಳುತ್ತಿದ್ದಳು.

೩೩. ಪತಿವ್ರತೆಯಾದ ನಾನು ಗಂಡನೊಡನೆ ಏನೆಂದು ಹೇಳಲಿ? ಎಂಬದಾಗಿ ಯೋಚನೆಯಿಂದಲೇ ಕೃಶಳಾಗಿ ಕೊನೆಗೆ ಒಂದು ಯೋಚನೆಯನ್ನು ಮಾಡಿಕೊಂಡು ತೀರ್ಥಸೇವೆಯ ನೆಪವನ್ನು ಹೂಡಿಕೊಂಡು ವಿಮಾನದಲ್ಲಿ ಕುಳಿತುಕೊಂಡು ಆಕೆಯು ಕುರುಕ್ಷೇತ್ರಕ್ಕೆ ಹೋದಳು.

೩೪. ಅಲ್ಲಿ ಆ ಗರ್ಭವು ಬಿದ್ದು ಹೋಗುವಂತೆ ಮಾಡಿಕೊಂಡು ಒಂದು ಗುಂಡಿಯನ್ನು ತೆಗೆದು ಅದನ್ನು ಹೂತುಬಿಟ್ಟಳು. ಅನಂತರ ಸರಸ್ವತೀ ನದಿಯಲ್ಲಿ ಸ್ನಾನ ಮಾಡಿಕೊಂಡು ತನ್ನ ಮನೆಗೆ ಮತ್ತೆ ಹಿಂದಿರುಗಿ ಬಂದಳು.

೩೫. ಇದನ್ನು ಯಾರಿಗೂ ಹೇಳದೆ ಗುಟ್ಟಾಗಿಡಬೇಕೆಂದು ಒಬ್ಬರಿಗೂ ಹೇಳಲೇಯಿಲ್ಲ. ಗುಟ್ಟಿನ ಕೆಲಸವಾದುದರಿಂದ ಗುಟ್ಟಾಗಿದ್ದಳು.

ಕಾಲೇನ ಕಿಯತಾ ಬ್ರಹ್ಮರ್ಷ ಜನಕರ್ಷಿರ್ಮಹಾಮನಾಃ ।
ಕುರುಕ್ಷೇತ್ರಂ ಸಮಾಸಾದ್ಯ ಜಾಂಗಲೇ ಯಜ್ಞಮಾವಹನ್ ॥ ೩೬ ॥

ಸ್ವರ್ಣಲಾಂಗಲಮಾದಾಯ ಯಜ್ಞಭೂಮಿಂ ಚಕಾರ ಸಃ ।
ಸ್ವರ್ಣಲಾಂಗಲಸೀತಾಂತಃ ಕನ್ಯಕಾ ಪ್ರೋತ್ಥಿತಾಭವತ್ ॥ ೩೭ ॥

ಪುಷ್ಪವೃಷ್ಟಿಶ್ಚ ಮಹತೀ ಪಪಾತ ಕನ್ಯಕೋಪರಿ ।
ತದ್ದೃಷ್ಟ್ವಾ ಮಹದಾಶ್ಚರ್ಯಂ ರಾಜಾ ವಿಸ್ಮಯಮಾಗತಃ ॥ ೩೮ ॥

ಕರ್ತವ್ಯೇ ಮೂಢತಾಮಾಪ ತತಃ ಖೇಭೂತ್ಸರಸ್ವತೀ ।
ರಾಜನ್ ಗೃಹಾಣ ಕನ್ಯಾಂ ತ್ವಂ ಪಾಲಯ್ಯೈನಾಂ ಮಹಾಪ್ರಭಾಂ ॥ ೩೯ ॥

---

೩೬. ಕೆಲವು ಕಾಲದಮೇಲೆ ಮಹಾತ್ಮನಾದ ಜನಕ ಋಷಿಯು ಕುರುಕ್ಷೇತ್ರದಲ್ಲಿ ಯಜ್ಞವನ್ನು ಮಾಡಬೇಕೆಂದು ಸಂಕಲ್ಪಿಸಿ ಕುರುಜಾಂಗಲದಲ್ಲಿ ಯಜ್ಞಮಾಡುವುದಕ್ಕೆ ಭೂಶುದ್ಧಿಯನ್ನು ಮಾಡಲು ಚಿನ್ನದ ನೇಗಿಲಸಿಂದ ಆ ಯಜ್ಞಭೂಮಿಯನ್ನು ಉಳಿಸಿದನು.

೩೭. ಆ ಚಿನ್ನದ ನೇಗಲಿನ ಗೆರೆಯಲ್ಲಿ ಒಂದು ಹೆಣ್ಣು ಮಗುವು ಮೇಲಕ್ಕೆದ್ದಿತು. ಆಗ ಆ ಮಗುವಿನ ಮೇಲೆ ಪುಷ್ಪವೃಷ್ಟಿಯಾಯಿತು.

೩೮. ಆ ಆಶ್ಚರ್ಯವನ್ನು ರಾಜನು ನೋಡಿ ಏನೂ ತಿಳಿಯದವನಂತಾಗಿ ತಾನು ಏನು ಮಾಡಬೇಕೆಂದು ತಿಳಿಯದವನಾದನು. ಆಗ ಅಂತರಿಕ್ಷದಿಂದ ಅಶರೀರವಾಣಿಯು ನುಡಿಯಿತು.

೩೯-೪೦. ಎಲೈ ರಾಜನೆ ! ಈ ಹೆಣ್ಣು ಮಗುವನ್ನು ತೆಗೆದುಕೊಂಡುಹೋಗಿ ಕಾಪಾಡು. ಇವಳು ಬಹು ಸುಂದರಿಯು, ಉರಿಯುತ್ತಿರುವ ಬೆಂಕಿಗೆ ಸಮಾನಳು.

ಜ್ವಲನಾರ್ಕಸಮಾಂ ದಿವ್ಯಾಂ ಮಹತ್ಕಾರ್ಯಂ ತವಾಲಯೇ ।
ಭವಿಷ್ಯತಿ ಮಹಾಭಾಗ ಕ್ಷೇಮಂ ಚ ಜಗತೋನಯಾ ॥ ೪೦ ॥

ಯಜ್ಞಸ್ಸಂಪಾದ್ಯತಾಂ ರಾಜನ್ ನಾಯಂ ವಿಘ್ನಸ್ತವಾನಘ ।
ನಾಮಾಸ್ಯಾಃ ಕಿಲ ಸೀತೇತಿ ಸೀತಾಯಾ ಉತ್ಥಿತಾ ಯತಃ ॥ ೪೧ ॥

ಕಲ್ಪಯ್ಯೈನಾಂ ದುಹಿತರಮಿತ್ಯುಕ್ತ್ವಾ ವಾಕ್ ತಿರೋಹಿತಾ ।
ತಚ್ಛ್ರುತ್ವಾ ಪ್ರೀತಿಮಾನ್ ರಾಜಾ ಯಜ್ಞಂ ಕೃತ್ವಾ ಮಹಾಧನಂ ॥ ೪೨ ॥

ಜಗಾಮ ಸೀತಾಮಾದಾಯ ಮಹಿಷೀಭ್ಯಶ್ಚ ತಾಂ ದದೌ ।
ಏತತ್ತೇ ಕಥಿತಂ ವಿಪ್ರ ಸೀತಾಜನ್ಮೈಕಕಾರಣಂ ।
ಶ್ರುತ್ವೈತತ್ಸರ್ವಪಾಪೇಭ್ಯೋ ಮುಕ್ತೋ ಭವತಿ ಮಾನವಃ ॥ ೪೩ ॥

---

ಇವಳಿಂದ ನಿನ್ನ ಮನೆಯಲ್ಲಿ ಅದ್ಭುತವಾದ ಕೆಲಸಗಳು ಆಗುತ್ತವೆ. ಇವಳಿಂದ ಪ್ರಪಂಚಕ್ಕೇ ಕ್ಷೇಮವಾಗುತ್ತದೆ.

೪೧. ಎಲೈ ದೊರೆಯೇ! ನೀನು ಯಜ್ಞವನ್ನು ಮಾಡು. ಈ ಮಗುವು ಸಿಕ್ಕಿರುವುದು ಯಜ್ಞಕ್ಕೆ ವಿಘ್ನವಲ್ಲ. ಇವಳು ಸೀತೆಯಿಂದ ಹುಟ್ಟಿದುದರಿಂದ ಸೀತೆ ಯೆಂದೇ ಹೆಸರಿಡು (ಸೀತೆ—ನೇಗಲಿನಿಂದ ಉತ್ತು ಮಾಡಿದ ಹಳ್ಳ) ಇವಳನ್ನು ನಿನ್ನ ಮಗಳನ್ನಾಗಿ ಮಾಡಿಕೊ, ಎಂದು ಹೇಳಿ ಅದೃಶ್ಯವಾಯಿತು.

೪೨. ಆ ಅಶರೀರವಾಣಿಯು ಹೇಳಿದುದನ್ನು ರಾಜನು ಕೇಳಿ ಸಂತೋಷಪಟ್ಟು ಕೊಂಡು ಬಹು ಹಣವನ್ನು ವ್ಯಯಮಾಡಿ ಯಜ್ಞವನ್ನು ಮಾಡಿದನು. ಅನಂತರ ಸೀತೆಯನ್ನು ತೆಗೆದುಕೊಂಡು ಮನೆಗೆ ಹೋಗಿ ಹೆಂಡತಿಯರಿಗೆ ಅದನ್ನು ಕೊಟ್ಟನು.

೪೩. ಎಲೈ ಭರದ್ವಾಜನೆ! ಸೀತೆಯ ಜನ್ಮದ ಕಾರಣವನ್ನು ನಿನಗೆ ಹೇಳಿದ್ದೇನೆ. ಇದನ್ನು ಕೇಳಿದರೆ ಮನುಷ್ಯನು ಎಲ್ಲಾ ಪಾಪವನ್ನೂ ಕಳೆದು ಕೊಳ್ಳುತ್ತಾನೆ.

ಜನಕ ದುಹಿತೃ ಜನ್ಮ ಶ್ರಾವಯಿತ್ವಾ ತು ಶ್ರುತ್ವಾ
ನ ಪುನರಿಹ ಹಿ ಜನ್ಮ ಪ್ರಾಪ್ನುಯಾತ್ ಪುಣ್ಯವಾಂಶ್ಚ ।
ದಶರಥಸುತಕಾಂತಾ ತಸ್ಯ ಗೇಹಂ ಕದಾಚಿತ್
ವಿಸೃಜತಿ ನ ಹಿ ಸರ್ವೈಃ ಪಾತಕೈರ್ಮುಚ್ಯತೇ ಚ ॥ ೪೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಶ್ರೀಸೀತೋತ್ಪತ್ತಿರ್ನಾಮ
ಅಷ್ಟಮಃ ಸರ್ಗಃ

---

೪೪. ಜನಕನ ಮಗಳಾದ ಈ ಸೀತೆಯ ಉತ್ಪತ್ತಿಯನ್ನು ಹೇಳಿದವರೂ ಕೇಳಿದವರೂ ಪುಣ್ಯವಂತರಾಗಿದ್ದುಕೊಂಡು ಮತ್ತೆ ಇಲ್ಲಿ ಜನ್ಮವನ್ನು ತಾಳುವುದಿಲ್ಲ. ಮತ್ತು ಆ ರಾಮನ ಹೆಂಡತಿಯಾದ ಸೀತೆಯ ರೂಪಳಾದ ಲಕ್ಷ್ಮಿಯು ಅವನ ಮನೆಯನ್ನು ಬಿಡುವುದೇ ಇಲ್ಲ. ಅವನಿಗೆ ಪಾಪಗಳೆಲ್ಲವೂ ಹೋಗುತ್ತವೆ.

ಇಂತು ಶ್ರೀ ವಾಲ್ಮೀಕಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರಕಾಂಡದಲ್ಲಿ ಶ್ರೀ ಸೀತೆಯ ಜನನವೆಂಬ
ಎಂಟನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅದ್ಭುತರಾಮಾಯಣೇ

## ಅಥ ನವಮಃ ಸರ್ಗಃ

ರಾಮಃ ಸೀತಾ ಪರಿಣಯಂ ಕೃತ್ವಾ ದಶರಥಾದಿಭಿಃ ।
ಭ್ರಾತೃಭಿಶ್ಚಾಪಿ ಸಹಿತೋ ಭಾರ್ಯಯಾ ಸಹ ಸೀತಯಾ ॥ ೧ ॥

ಅಯೋಧ್ಯಾಂ ಗಂತುಮಾರೇಭೆ ನಾನಾವಾದ್ಯ ಪುರಸ್ಸರಂ ।
ಆರ್ಚೀಕನಂದನೋ ರಾಮೋ ಭಾರ್ಗವೋ ರೇಣುಕಾಸುತಃ । ॥ ೨ ॥

ತಸ್ಯ ದಾಶರಥೇಶ್ಶ್ರುತ್ವಾ ರಾಮಸ್ಯಾ ಕ್ಲಿಷ್ಟಕರ್ಮಣಃ ।
ವಿವಾಹಕೌತುಕಂ ವೀರಃ ಪಥಾ ತೇನ ಸಮಾಗಮತ್ ॥ ೩ ॥

## ಒಂಭತ್ತನೆಯ ಸರ್ಗವು

೧. ಇಂತಿರಲು ರಾಮನು ಸೀತೆಯನ್ನು ಮದುವೆ ಮಾಡಿಕೊಂಡು ದಶರಥನೊಡನೆಯೂ ತಮ್ಮಂದಿರೊಡನೆಯೂ ತಾಯಿಯರೊಡನೆಯೂ ಬಗೆ ಬಗೆಯ ವಾದ್ಯಗಳನ್ನು ಮಾಡಿಸಿಕೊಂಡು ಅಯೋಧ್ಯೆಗೆ ಹೊರಟನು.

೨-೩. ಭೃಗು ವಂಶದ ಆರ್ಚೀಕ ಋಷಿಗೂ ರೇಣುಕೆಗೂ ಮಗನಾದ ಪರಶುರಾಮನು ಬಲಿಷ್ಠನಾದ ಆ ದಾಶರಥಿಯ ಪರಾಕ್ರಮವನ್ನೂ, ವಿವಾಹದ ವಿಷಯವನ್ನೂ ಕೇಳಿ ಅವನು ಹೋಗುತ್ತಿದ್ದ ದಾರಿಗೆ ಅಡ್ಡಲಾಗಿ ಬಂದನು.

ಧನುರಾದಾಯ ತದ್ದಿವ್ಯಂ ಕ್ಷತ್ರಿಯಾಣಾಂ ನಿಬರ್ಹಣಂ ।
ಜಿಜ್ಞಾಸ್ಯಮಾನೋ ರಾಮಸ್ಯ ವೀರ್ಯಂ ದಾಶರಥೇಸ್ತಥಾ ॥ ೪ ॥

ಸ ತಮಭ್ಯಾಗತಂ ದೃಷ್ಟ್ವಾ ಉದ್ಯತಾಸ್ತ್ರಮುಪಸ್ಥಿತಂ ।
ಪ್ರಹಸನ್ನಿವ ವಿಪ್ರೇಂದ್ರಂ ರಾಮೋ ವಚನಮಬ್ರವೀತ್ ॥ ೫ ॥

ಸ್ವಾಗತಂ ತೇ ಮುನಿಶ್ರೇಷ್ಠ ಕಿಂ ಕಾರ್ಯಂ ಕರವಾಣಿ ತೇ ।
ಪ್ರೋವಾಚ ಭಾರ್ಗವೋ ವಾಕ್ಯಂ ಸ್ವಾಗತೇನ ಕಿಮಸ್ತಿ ಮೇ ॥ ೬ ॥

ಕ್ಷತ್ರಕಾಲಂ ಹಿ ರಾಜೇಂದ್ರ ಧನುರೇತನ್ಮಮಾಸ್ತಿ ಹಿ ।
ಸಮಾರೋಪಯ ಯತ್ನೇನ ಯದಿ ಶಕ್ತೋಽಸಿ ರಾಘವ ॥ ೭ ॥

ಇತ್ಯುಕ್ತಸ್ತ್ವಾಹ ಭಗವನ್ ತ್ವನ್ನಾಧಿಕ್ಷೇಪ್ತುಮರ್ಹಸಿ ।
ನ ಹಿ ನ್ಯಾಹ್ಯಧಮೋ ಧರ್ಮಃ ಕ್ಷತ್ರಿಯಾಣಾಂ ದ್ವಿಜಾತಿಷು. ॥ ೮ ॥

---

೪. ಆ ಭಾರ್ಗವರಾಮನು ಕ್ಷತ್ರಿಯ ನಾಶಕವಾದ ಆ ಧನುಸ್ಸನ್ನು ತೆಗೆದು ಕೊಂಡು ದಾಶರಥಿರಾಮನ ಬಲವನ್ನು ನೋಡಬೇಕೆಂದು ಯೋಚಿಸಿ-ಬಂದನು.

೫. ಹೊಡೆಯುವವನಂತೆ ಧನುರ್ಬಾಣಗಳನ್ನು ಮೇಲಕ್ಕೆತ್ತಿಕೊಂಡು ಬರುತ್ತಿರುವ ಆ ಭಾರ್ಗವ ರಾಮನನ್ನು ದಾಶರಥಿಯು ನೋಡಿ ನಗುತ್ತಾ ಇಂತೆಂದು ನುಡಿದನು.

೬-೭. ಎಲೈ ಋಷಿಶ್ರೇಷ್ಠನೆ! ನಿನಗೆ ಸ್ವಾಗತವೇ? ನಿನಗೆ ಯಾವ ಕೆಲಸವನ್ನು ಮಾಡಿಕೊಡಲಿ? ಹೇಳು ಎಂದನು. ಆದಕ್ಕೆ ಭಾರ್ಗವನು ಸ್ವಾಗತದಿಂದ ನನಗೇನೂ ಆಗಬೇಕಾದುದಿಲ್ಲ. ಎಲೈ ರಾಜಕುಮಾರನೆ! ಕ್ಷತ್ರಿಯರಿಗೆ ಯಮನಂತಿರುವ ಈ ಧನುಸ್ಸು ನನ್ನಲ್ಲಿರುವುದು. ನಿನಗೆ ಶಕ್ತಿಯಿದ್ದರೆ ಇದನ್ನು ಕಷ್ಟಪಟ್ಟು ಹೆದೆಯೇರಿಸು.

೮. ಭಾರ್ಗವನು ಹೀಗೆನ್ನಲು ದಾಶರಥಿಯು ಎಲೈ ಭಾರ್ಗವನೆ! ನನ್ನನ್ನು ತಿರಸ್ಕರಿಸಬೇಡ. ಕ್ಷತ್ರಿಯರು ಬ್ರಾಹ್ಮಣರ ವಿಷಯದಲ್ಲಿ ಅಧರ್ಮದಿಂದ ವರ್ತಿಸಬಾರದು.

ಇಕ್ಷ್ವಾಕೂಣಾಂ ವಿಶೇಷೇಣ ಬಾಹುವೀರ್ಯೇಣ ಕತ್ಥನಂ ।
ತಮೇವಂ ವಾದಿನಂ ತತ್ರ ರಾಮೋ ವಚನಮಬ್ರವೀತ್ ॥ ೯ ॥

ಅಲಂ ವಾಗುಪದೇಶೇನ ಧನುರಾಯಚ್ಛ ರಾಘವ ।
ತತೋ ಜಗ್ರಾಹ ರೋಷೇಣ ಕ್ಷತ್ರಿಯರ್ಷಭಸೂದನಂ ॥ ೧೦ ॥

ರಾಮೋ ದಾಶರಥಿರ್ದಿವ್ಯಂ ಹಸ್ತಾದ್ರಾಮಸ್ಯ ಕಾರ್ಮುಕಂ ।
ಧನುರಾರೋಪಯಾಮಾಸ ಸಲೀಲಮಿವ ರಾಘವಃ ॥ ೧೧ ॥

ಜ್ಯಾಶಬ್ದಮಕರೋತ್ತತ್ರ ಸ್ಮಯಮಾನಃ ಸ ವೀರ್ಯವಾನ್ ।
ತಸ್ಯ ಶಬ್ದೇನ ಭೂತಾನಿ ವಿತ್ರೇಸುರಶನೇರಿವ ॥ ೧೨ ॥

ಅಥಾಬ್ರವೀದ್ವಚೋ ರಾಮಂ ರಾಮೋ ದಾಶರಥಿಸ್ತದಾ ।
ಇದಮಾರೋಪಿತಂ ಬ್ರಹ್ಮನ್ ಕಿಮನ್ಯತ್ಕರವಾಣಿ ತೇ ॥ ೧೩ ॥

೯. ಆದರಲ್ಲಿಯೂ ಇಕ್ಷ್ವಾಕು ಕುಲದಲ್ಲಿ ಹುಟ್ಟಿದವರು ಬಾಹುವೀರ್ಯವು ನಮ್ಮವೇ ಹೆಚ್ಚೆಂದು ಜಂಭ ಪಡುವುದೇ ಇಲ್ಲ, ಎನ್ನುತ್ತಿರಲು ಅವನನ್ನು ಕುರಿತು ಭಾರ್ಗವ ರಾಮನು ಇಂತೆಂದನು.

೧೦. ಎಲೈ ರಾಘವನೆ! ಈ ಮಾತಿನಲ್ಲಿ ಉಪದೇಶ ಮಾಡುವಿಕೆಯು ಸಾಕು. ಇದು ನನಗೆ ಬೇಕಿಲ್ಲ. ಧನಸ್ಸನ್ನು ತೆಗೆದುಕೋ, ಎಂದನು. ಆಗ ರಘುರಾಮನು ಕೋಪಗೊಂಡು ಕ್ಷತ್ರಿಯರನ್ನು ನಾಶ ಮಾಡಿದ ಆ ಧನುಸ್ಸನ್ನು ಕಿತ್ತುಕೊಂಡನು.

೧೧-೧೨. ದಶರಥ ರಾಮನು ಭಾರ್ಗವರಾಮನ ಕೈಯ್ಯಿಂದ ಆ ಧನುಸ್ಸನ್ನು ತೆಗೆದುಕೊಂಡು ಸ್ವಲ್ಪವೂ ಕಷ್ಟ ಪಡದೆ ಬಿಲ್ಲನ್ನು ಎತ್ತಿ ಕಟ್ಟಿದನು. ಅನಂತರ ನಗುತ್ತ ಆ ಹೆದೆಯನ್ನು ಝೇಂಕರಿಸಿದನು. ಆ ಶಬ್ದವನ್ನು ಕೇಳಿ ಪ್ರಾಣಿಗಳೆಲ್ಲವೂ ಸಿಡಿಲು ಬಂದರೆ ಹೆದರುವಂತೆ ಹೆದರಿದುವು.

೧೩. ಆಗ ದಾಶರಥಿಯು ಭಾರ್ಗವರಾಮನನ್ನು ಕುರಿತು ಎಲೈ ಬ್ರಾಹ್ಮಣನೇ! ಇದೋ ಹೆದೆಯೇರಿಸಿದ್ದೇನೆ. ನಿನಗೆ ಇನ್ನೇನು ಮಾಡಬೇಕೆಂಬುದನ್ನು ಹೇಳು.

ತಸ್ಯ ರಾಮೋ ದದೌ ದಿವ್ಯಂ ಜಾಮದಗ್ನ್ಯೋ ಮಹಾಬಲಃ ।
ಶರಮಾಕರ್ಣದೇಶಾಂತಮಯ ಮಾಕೃಷ್ಯತಾಮಿತಿ ॥ ೧೪ ॥

ಏತಚ್ಛ್ರುತ್ವಾಬ್ರವೀದ್ರಾಮಃ ಪ್ರದೀಪ್ತ ಇವ ಮನ್ಯುನಾ ।
ಶ್ರೂಯತೇ ಕ್ಷಮ್ಯತೇ ಚೈವ ದರ್ಪಪೂರ್ಣೋಽಸಿ ಭಾರ್ಗವ ॥ ೧೫ ॥

ತ್ವಯಾಹ್ಯಧಿಗತಂ ತೇಜಃ ಕ್ಷತ್ರಿಯೇಭ್ಯೋ ವಿಶೇಷತಃ ।
ಪಿತಾಮಹ ಪ್ರಸಾದೇನ ತೇನ ಮಾಂ ಕ್ಷಿಪಸಿ ಧ್ರುವಂ ॥ ೧೬ ॥

ಪಶ್ಯ ಮಾಂ ಸ್ವೇನ ರೂಪೇಣ ಚಕ್ಷುಸ್ತೇ ವಿತರಾಮ್ಯಹಂ ।
ಇತ್ಯುಕ್ತ್ವಾ ಪ್ರದದೌ ತಸ್ಮೈ ರಾಮೋ ದಿವ್ಯಾಂ ದೃಶಂ ತದಾ ॥ ೧೭ ॥

ತತೋ ರಾಮಶರೀರೇ ವೈ ರಾಮೋಽಪಶ್ಯತ್ಸ ಭಾರ್ಗವಃ ।
ಆದಿತ್ಯಾನ್ ಸವಸೂನ್ ರುದ್ರಾನ್ ಸಾಧ್ಯಾಂಶ್ಚ ಸಮರುದ್ಗಣಾನ್ ॥ ೧೮ ॥

---

೧೪. ಆಗ ಜಮದಗ್ನಿರಾಮನು ಶ್ರೀ ರಾಮನಿಗೆ ಒಂದು ಉತ್ತಮವಾದ ಬಾಣವನ್ನು ಧನುಸ್ಸಿನಲ್ಲಿ ಹೂಡಿ ಕಿವಿಯವರೆಗೂ ಎಳೆಯಬೇಕು ಎಂದನು.

೧೫. ಇದನ್ನು ಕೇಳಿ ದಾಶರಥಿ ರಾಮನು ಕೋಪದಿಂದ ಜ್ವಲಿಸುತ್ತಾ ಎಲೈ ಭಾರ್ಗವನೆ! ನಿನ್ನ ಯಶಸ್ಸನ್ನೂ, ಶಕ್ತಿಯನ್ನೂ ಕೇಳಿದ್ದೇನೆ. ಆದರೆ ಕ್ಷಮಿಸುತ್ತೇನೆ. ನೀನು ಬಹು ಗರ್ವಿಷ್ಠನಾಗಿದ್ದೀಯೆ.

೧೬. ನೀನು ಶಕ್ತಿಯನ್ನು ಸಂಪಾದಿಸಿದ್ದೀಯೆ· ಕ್ಷತ್ರಿಯರನ್ನು ಗೆದ್ದಮೇಲೆ ಬಹುವಾದ ಯಶಸ್ಸು ಬಂದಿರುವುದು. ಬ್ರಹ್ಮನಿಂದ ವರವನ್ನು ಪಡೆದುದು ಬೇರೆ ಇದೆ. ಇದರಿಂದ ನನ್ನನ್ನು ಹೀಗೆ ಧಿಕ್ಕರಿಸುತ್ತಲಿದ್ದೀಯೆ.

೧೭. ಎಲೈ ಭಾರ್ಗವನೆ ! ನೀನು, ಯಾರೆಂಬುದನ್ನು ಸ್ವಭಾವಸ್ಥಿತಿಯಿಂದ ತಿಳಿದುಕೋ. ನಿನಗೆ ದಿವ್ಯ ದೃಷ್ಟಿಯನ್ನು ಕೊಡುತ್ತೇನೆ. ಎಂದು ಹೇಳಿ ಶ್ರೀ ರಾಮನು ಆಗ ಭಾರ್ಗವ ರಾಮನಿಗೆ ದಿವ್ಯ ದೃಷ್ಟಿಯನ್ನು ಕೊಟ್ಟನು.

೧೮–೨೨. ಆಗ ಶ್ರೀ ರಾಮನ ದೇಹದಲ್ಲಿ ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ಮರುದ್ಗಣಗಳು, ಪಿತೃಗಳು, ಹುತಾಶನರು, ನಕ್ಷತ್ರಗಳು, ಗ್ರಹಗಳು,

ಪಿತೄನ್ ಹುತಾಶನಾನ್ ಚೈವ ನಕ್ಷತ್ರಾಣಿ ಗ್ರಹಾಂಸ್ತಥಾ ।
ಗಂಧರ್ವಾನ್ ರಾಕ್ಷಸಾನ್ ಯಕ್ಷಾನ್ ನದೀಸ್ತೀರ್ಥಾನಿ ಯಾನಿ ವೈ ॥ ೧೯ ॥

ಋಷೀನ್ ವೈ ನಿಖಿಲಾನ್ಯಾಂಶ್ಚ ಬ್ರಹ್ಮಭೂತಾನ್ ಸನಾತನಾನ್ ।
ದೇವರ್ಷೀಂಶ್ಚೈವ ಕಾರ್ತ್ಸ್ನ್ಯೇನ ಸಮುದ್ರಾನ್ ಪರ್ವತಾಂಸ್ತಥಾ ॥ ೨೦ ॥

ವೇದಾಂಶ್ಚ ಸೋಪನಿಷದಾನ್ ವಷಟ್ಕಾರಾನ್ ಸಹಾಧ್ವರೈಃ ।
ಋಚೋ ಯಜೂಂಷಿ ಸಾಮಾನಿ ಧನುರ್ವೇದಾಂಶ್ಚ ಸರ್ವಶಃ ॥ ೨೧ ॥

ವಿದ್ಯುತೋ ಮೇಘವೃಂದಾನಿ ವರ್ಷಾಣಿ ಚ ಮಹಾವ್ರತ ।
ತತಸ್ಸ ಭಗವಾನ್ ವಿಷ್ಣುಃ ತಂ ವೈ ಬಾಣಂ ಮುಮೋಚ ಹ ॥ ೨೨ ॥

ಶುಷ್ಕಾಶನಿಸಮಾಕೀರ್ಣಮಹೋಲ್ಕಾಭಿಶ್ಚ ಸುವ್ರತ ।
ಪಾಂಸುವರ್ಷೇಣ ಮಹತಾ ಮೇಘಸಂಘೈಶ್ಚ ಕೇವಲಂ ॥ ೨೩ ॥

ಭೂಮಿಕಂಪೈಸ್ಸನಿರ್ಘಾತೈಃ ನಾದೈಶ್ಚ ವಿಪುಲೈರಪಿ ।
ಭಾರ್ಗವಂ ವಿಹ್ವಲಂ ಕೃತ್ವಾ ತೇಜಶ್ಚಾಕ್ಷಿಪ್ಯ ಕೇವಲಂ ॥ ೨೪ ॥

ಗಂಧರ್ವರು. ರಾಕ್ಷಸರು, ಯಕ್ಷರು, ನದಿಗಳು, ತೀರ್ಥಗಳು, ಋಷಿಗಳು, ದೇವರ್ಷಿಗಳು, ಸಮುದ್ರಗಳು, ಪರ್ವತಗಳು, ವೇದಗಳು, ಉಪನಿಷತ್ತುಗಳು, ವಷಟ್ಕಾರಗಳು, ಅಧ್ವರಗಳು, ಋಕ್ಕುಗಳು, ಯಜುಸ್ಸುಗಳು, ಸಾಮಗಳು, ಧನುರ್ವೇದಗಳು, ವಿದ್ಯುತ್ತುಗಳು, ಮೇಘವೃಂದಗಳು, ವರ್ಷಗಳು ಎಲ್ಲವನ್ನೂ ಈ ಭಾರ್ಗವ ರಾಮನು ನೋಡಿದನು. ಅನಂತರ ಆ ಭಗವಂತನಾದ ರಾಮನು ಆ ಬಾಣವನ್ನು ಬಿಟ್ಟನು.

೨೩. ಅದು ಬರಸಿಡಿಲಿನಂತೆ ಹೊರಟು ಕೊಳ್ಳಿಗಳಿಂದ ಕೂಡಿಕೊಂಡು ಬಹುವಾಗಿ ಧೂಳನ್ನೆಬ್ಬಿಸುತ್ತ, ಆ ಧೂಳು ಮೇಘವನ್ನು ಮುಟ್ಟುವಂತೆ ಮಾಡುತ್ತ ಭೂಮಿಯನ್ನು ಅಲ್ಲಾಡಿಸುತ್ತ ಬಹುವಾಗಿ ಸದ್ದಾಗುವಂತೆ ಮಾಡುತ್ತ ಹೊರಟಿತು.

೨೪–೨೬. ಆ ಭಾರ್ಗವರಾಮನನ್ನೂ ಗಾಬರಿಯುಳ್ಳವನನ್ನಾಗಿ ಮಾಡಿ ಅವನಲ್ಲಿದ್ದ ತೇಜಸ್ಸನ್ನು ಮಾತ್ರ ತೆಗೆದುಕೊಂಡು ಮತ್ತೆ ಹಿಂದಿರುಗಿ ಆ ರಘುರಾಮನನ್ನು

ಅಗಚ್ಛಜ್ಜ್ವಲಿತೋ ರಾಮಂ ಶರೋ ಬಾಹುಪ್ರಚೋದಿತಃ ।
ಸ ತು ವಿಹ್ವಲತಾಂ ಗತ್ವಾ ಪ್ರತಿಲಭ್ಯ ಚ ಚೇತನಾಂ ॥ ೨೫ ॥

ರಾಮಃ ಪ್ರತ್ಯಾಗತಪ್ರಾಣಃ ಪ್ರಣಮದ್ವಿಷ್ಣುತೇಜಸಂ ।
ವಿಷ್ಣುನಾ ಸೋಽಭ್ಯನುಜ್ಞಾತೋ ಮಹೇಂದ್ರಮಗಮತ್ಪುನಃ ॥ ೨೬ ॥

ಭೀತಶ್ಚ ತತ್ರನ್ಯವಸದ್ವಿನೀತಶ್ಚ ಮಹಾತಪಾಃ ।
ತತಃ ಸಂವತ್ಸರೇತೀತೇ ಹೃತೌಜಸಮವಸ್ಥಿತಂ ॥ ೨೭ ॥

ನಿರ್ಮದಂ ದುಃಖಿತಂ ದೃಷ್ಟ್ವಾ ಪಿತರೋ ರಾಮಮಬ್ರುವನ್ ।
ನ ವೈ ಸಮ್ಯಗಿದಂ ಪುತ್ರ ವಿಷ್ಣುಮಾಸಾದ್ಯ ವೈ ಕೃತಂ ॥ ೨೮ ॥

---

ಹೊಂದಿತು. ಆ ಭಾರ್ಗವ ರಾಮನು ಗಾಬರಿಯಿಂದ ಪ್ರಜ್ಞೆತಪ್ಪಿದಂತಿದ್ದು ಮತ್ತೆ ಜ್ಞಾನವನ್ನು ತಂದುಕೊಂಡು ನೋಡಿದನು. ಈ ರೀತಿಯಾಗಿ ಮತ್ತೆ ಬದುಕಿದವನಂತೆ ಆದ ಆ ಭಾರ್ಗವನು ವಿಷ್ಣು ತೇಜಸ್ಸನ್ನು ನಮಸ್ಕರಿಸಿದನು. ವಿಷ್ಣುವಿನ ರೂಪನಾದ ಆ ರಾಮನಿಂದ ಅಪ್ಪಣೆಯನ್ನು ಹೊಂದಿ ಮತ್ತೆ ಮಹೇಂದ್ರಪರ್ವತಕ್ಕೆ ಹೊರಟು ಹೋದನು.

೨೭. ಭಾರ್ಗವನು ಆ ಮಹೇಂದ್ರ ಪರ್ವತದಲ್ಲಿ ಹೆದರಿಕೊಂಡು ವಿನಯದಿಂದಿರುತ್ತಿದ್ದನು. ಹೀಗೆಯೇ ಒಂದು ವರ್ಷವು ಕಳೆಯಿತು. ತೇಜಸ್ಸನ್ನು ಕಳೆದುಕೊಂಡವನಂತೆಯೂ ಮದವನ್ನು ಬಿಟ್ಟು ದುಃಖಗೊಂಡೂ ಇರುವ ರಾಮನ ಬಳಿಗೆ ಪಿತೃಗಳು ಬಂದು ಇಂತೆಂದರು.

೨೮-೨೯. ಎಲೈ ರಾಮನೆ! ನೀನು ವಿಷ್ಣುವಿನೊಡನೆ ಹೆಮ್ಮೆ ಪಟ್ಟುದು

ಸ ಹಿ ಪೂಜ್ಯಶ್ಚ ಮಾನ್ಯಶ್ಚ ತ್ರಿಷುಲೋಕೇಷು ಸರ್ವದಾ ।
ಗಚ್ಛ ಪುತ್ರ ನದೀಂ ಪುಣ್ಯಾಂ ವಧೂಸರಕೃತಾಲಯಾಂ ॥ ೨೯ ॥

ತತ್ರೋಪಸ್ಪೃಶ್ಯ ತೀರ್ಥೇಷು ಪುನರ್ವಪುರವಾಪ್ಸ್ಯಸಿ ।
ದೀಪ್ತೋದಂ ನಾಮ ತತ್ತೀರ್ಥಂ ಯತ್ರ ತೇ ಪ್ರಪಿತಾಮಹಃ ॥ ೩೦ ॥

ಭೃಗುರ್ದೇವಯುಗೇ ರಾಮ ತಪ್ತವಾನುತ್ತಮಂ ತಪಃ ।
ತತ್ತಥಾ ಕೃತವಾನ್ ರಾಮೋ ಭಾರ್ಗವೋ ವಚನಾತ್ಪಿತುಃ ॥ ೩೧ ॥

ಪ್ರಾಪ್ತವಾಂಶ್ಚ ಪುನಸ್ತೇಜೋ ಭಾರದ್ವಾಜ ಮಹಾಮುನೇ ।
ಏತದ್ಯಃ ಶೃಣುಯಾದ್ವತ್ಸ ರಾಮಚಾರಿತ್ರಮುತ್ತಮಂ ॥ ೩೨ ॥

ಸರಿಯಾಗಲಿಲ್ಲ. ಅವನು ಪೂಜ್ಯನೂ, ಮಾನ್ಯನೂ, ಕೂಡ ಪ್ರಪಂಚಕ್ಕೆ ಆಗಿರುವನು. ನೀನು ಇಲ್ಲಿರದೆ ವಧೂಸರಸಿರತಕ್ಕ ಆ ಪುಣ್ಯ ನದಿಗೆ ಹೋಗು. ಆ ತೀರ್ಥದಲ್ಲಿ ಸ್ನಾನ ಮಾಡಿದರೆ ಮತ್ತೆ ಹಿಂದಿನ ದೇಹವೂ ಶಕ್ತಿಯೂ ಬರುತ್ತವೆ.

೩೦. ದೀಪ್ತೋದವೆಂದು ಆ ತೀರ್ಥದ ಹೆಸರು. ಅಲ್ಲಿ ನಿನ್ನ ತಂದೆಯ ತಂದೆಯಾದ ಭೃಗುವು ದೇವಯುಗದಲ್ಲಿ ಉತ್ತಮವಾದ ತಪಸ್ಸನ್ನು ಮಾಡಿದನು.

೩೧. ಆಗ ಆ ಭಾರ್ಗವ ರಾಮನು ಪಿತೃಗಳ ಮಾತಿನಂತೆ ಹಾಗೆಯೇ ಆ ತೀರ್ಥಕ್ಕೆ ಹೋಗಿ ಸ್ನಾನ ಮಾಡಿದನು. ಮತ್ತೆ ಹಿಂದಿನ ತೇಜಸ್ಸನ್ನು ಹೊಂದಿದನು

೩೨. ಯಾವನು ಉತ್ತಮವಾದ ರಾಮನ ಚರಿತ್ರೆಯನ್ನು ಕೇಳುವನೋ ಅವನು ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ.

ತತೋ ರಾಮೋ ಜಾನಕೀಸ್ಪೃಷ್ಟ ಪಾಣಿಃ
ಸೂತೈರ್ಭಕ್ತ್ಯಾಮಾಗಧೈ ಸ್ತೂಯಮಾನಃ ।
ಪುಷ್ಪಾಸಾರೈರಾಸ್ತೃತೋ ದೇವಸಂಘೈಃ
ಸ ಉತ್ತರಾಂ ಕೋಸಲಾನಾಜಗಾಮ ॥ ೩೩ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಜಾಮದಗ್ನ್ಯ ವಿಶ್ವರೂಪದರ್ಶನಂ
ನಾಮ ನವಮಃ ಸರ್ಗಃ

೩೩. ಹೀಗೆ ರಾಮನು ಜಾನಕಿಯನ್ನು ಮದುವೆ ಮಾಡಿಕೊಂಡು ಸೂತರಿಂದಲೂ ಮಾಗಧರಿಂದಲೂ ಭಕ್ತಿಯಿಂದ ಹೊಗಳಿಸಿಕೊಳ್ಳುತ್ತ ದೇವತೆಗಳು ಹೂಮಳೆಗರೆಯುತ್ತಿರಲು ಉತ್ತರ ಕೋಸಲಕ್ಕೆ ಬಂದನು.

ಇಂತು ಶ್ರೀ ವಾಲ್ಮೀಕಿ ಪ್ರಣೀತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದಲ್ಲಿ
ಅದ್ಭುತೋತ್ತರ ಕಾಂಡದಲ್ಲಿ ಪರಶುರಾಮನಿಗೆ ವಿಶ್ವರೂಪ ದರ್ಶನವೆಂಬ
ಒಂಭತ್ತನೆ ಸರ್ಗವು.



ಶ್ರೀಃ

|| ಶ್ರೀಗುರುಭ್ಯೋ ನಮಃ ||

---

# ಅದ್ಭುತ ರಾಮಾಯಣೇ

## ಅಥ ದಶಮಃ ಸರ್ಗಃ



**ಅಥ ಸೀತಾ ಲಕ್ಷ್ಮಣಾಭ್ಯಾಂ ಸಹ ಕೇನಾ ಹೇತುನಾ ।**
**ಜಗಾಮ ವಿಪಿನಂ ರಾಮೋ ದಂಡಕಾರಣ್ಯಮಾಶ್ರಿತಃ ॥ ೧ ॥**

**ತತ್ರ ಗೋದಾವರೀತೀರೇ ಪರ್ಣಶಾಲಾಂ ವಿಧಾಯ ಸಃ ।**
**ಉವಾಸ ಕಂಚಿತ್ಕಾಲಂ ವೈ ಮೃಗಯಾಮಭಿಕಾರಯನ್ ॥ ೨ ॥**

**ಕದಾಚಿದ್ರಾವಣೋ ಮೋಹಾಲ್ಲಂಕಾಯಾಂ ತಾಂ ನ್ಯವಾಸಯತ್ ।**
**ಕಾಮದೃಷ್ಟ್ವಾ ತತೋ ರಾಮೋ ಲಕ್ಷ್ಮಣಶ್ಚ ಮಹಾಬಲಃ ॥ ೩ ॥**

---

### ಹತ್ತನೆಯ ಸರ್ಗವು

೧. ಅನಂತರ ಶ್ರೀರಾಮನು ಸೀತೆ ಲಕ್ಷ್ಮಣರೊಡನೆ ಯಾವುದೋ ಕಾರಣದಿಂದ ದಂಡಕಾರಣ್ಯಕ್ಕೆ ಬಂದು ಅಲ್ಲಿ ವಾಸಿಸುತ್ತಿದ್ದನು.

೨. ಆ ದಂಡಕಾರಣ್ಯದಲ್ಲಿ ಗೋದಾವರಿಯ ದಡದಲ್ಲಿ ಪರ್ಣಶಾಲೆಯನ್ನು ಕಟ್ಟಿಕೊಂಡು ಬೇಟೆ ಮಾಡುತ್ತಾ ಕೆಲವು ಕಾಲಗಳ ವರೆಗೂ ಇದ್ದನು.

೩. ಒಂದು ಸಾರಿ ಆ ರಾವಣನು ಮೋಹದಿಂದ ಆ ಸೀತೆಯನ್ನು ಕದ್ದುಕೊಂಡು ಹೋಗಿ ಲಂಕೆಯಲ್ಲಿಟ್ಟುಕೊಂಡನು. ಆ ಮೇಲೆ ರಾಮನು ಆಕೆಯನ್ನು ಕಾಣದೆ ಅವನೂ ಲಕ್ಷ್ಮಣನೂ ಸೀತೆಯನ್ನು ಹುಡುಕಿಕೊಂಡು ಕಾಡಿನಲ್ಲೆಲ್ಲಾ ಸುತ್ತುತ್ತಿದ್ದರು.

ಅಟೇತುಶ್ಚಾಟವೀಂ ಸರ್ವಾಂ ಸೀತಾದರ್ಶನಲಾಲಸೌ ।
ರಾಮಸ್ಯ ರುದತಸ್ತಸ್ಯ ಬಾಷ್ಪವಾರಿ ಸಮುದ್ಭವಾ ॥ ೪ ॥

ನದೀ ವೈತರಣೀ ಚಾಭೂಚ್ಚಕ್ಷುಷೋರಾಶುಮುದ್ಭವಂ ।
ವಿತರತ್ಯಶ್ರುಣೀ ಯಸ್ಮಾದತೋ ವೈತರಣೀಸ್ಮೃತಾ ॥ ೫ ॥

ಪಿತೄಣಾಂ ತರಣಂ ಯಸ್ಮಾನ್ನೃಣಾಂ ಸ್ನಾನೇನ ತರ್ಪಣಾತ್ ।
ತೇನಾಪಿ ಕಾರಣೇನಾಸೌ ನದೀ ವೈತರಣೀ ಸ್ಮೃತಾ ॥ ೬ ॥

ನೇತ್ರಯೋರ್ದೂಷಿಕಾಯಾಶ್ಚ ತಾಭಿಶ್ಶೈಲಾಸ್ತತೋಭವನ್ ।
ಸುಗ್ರೀವೇಣ ವಾನರೇಣ ಸಖ್ಯಂ ಕರ್ತುಂ ಮಹಾಮನಾಃ ॥ ೭ ॥

ಋಷ್ಯಮೂಕಮಗಾದ್ರಾಮೋ ಲಕ್ಷ್ಮಣೇನಾನುಜೇನ ಚ ।
ಪಂಚಭಿರ್ಮಂತ್ರಿಭಿಸ್ಸಾರ್ಧಂ ಸುಗ್ರೀವೋ ನಾಮ ವಾನರಃ ॥ ೮ ॥

ಯತ್ರಾಸ್ತೇ ವಾಲಿ ಭಯತಃ ಸೋಽಪಶ್ಯದ್ರಾಮಲಕ್ಷ್ಮಣೌ ।
ಚಾಪಬಾಣಧರೌ ವೀರೌ ಗ್ರಸಂತಾವಿವ ಚಾಂಬರಂ ॥ ೯ ॥

---

೫-೫. ಶ್ರೀರಾಮನು ಅಳುತ್ತಿದ್ದಾಗ ಅವನ ಕಣ್ಣಿನಿಂದ ವೈತರಣಿ ಎಂಬ ನದಿಯು ಹುಟ್ಟಿತು. ಇದನ್ನು ನೋಡಿದ ಕೂಡಲೇ ಕಣ್ಣಿಗೆ ನೀರನ್ನು ತರುವುದರಿಂದ ವೈತರಣಿ ಎಂದು ಹೆಸರನ್ನು ಹೊಂದಿತು.

೬. ಅಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನು ಮಾಡುವುದರಿಂದ ಅವರಿಗೆ ತರಣ ಎಂದರೆ ದುಃಖದಿಂದ ದಾಟುವಿಕೆಯನ್ನು ಹೇಳುವುದರಿಂದಲೂ ಕೂಡ ಅದಕ್ಕೆ ವೈತರಣಿ ಎಂದು ಹೆಸರು ಬಂದಿದೆ.

೭-೯. ಆ ರಾಮನು ಅಳುತ್ತಿದ್ದಾಗ ಬಿದ್ದ ಕಣ್ಣಿನ ಜಿಬುರುಗಳೇ ಪರ್ವತವಾದುವು. ಅನಂತರ ಆ ಶ್ರೀರಾಮನು ಕಪಿಯಾದ ಸುಗ್ರೀವನೊಡನೆ ಸ್ನೇಹಮಾಡಿಕೊಳ್ಳಲಿಚ್ಛೆಯುಳ್ಳವನಾಗಿ ತಮ್ಮನಾದ ಲಕ್ಷ್ಮಣನೊಡನೆ ಋಷ್ಯಮೂಕ ಪರ್ವತಕ್ಕೆ ಹೋದನು. ಆ ಸುಗ್ರೀವನು ವಾಲಿಯ ಹೆದರಿಕೆಯಿಂದ ತನ್ನ ಐದು ಜನ ಮಂತ್ರಿಗಳೊಡನೆ ಆ ಋಷ್ಯಮೂಕ ಪರ್ವತದಲ್ಲಿದ್ದನು. ಆ ಸುಗ್ರೀವನು ರಾಮ ಲಕ್ಷ್ಮಣರನ್ನು ನೋಡಿದನು. ಅವರು ಬಿಲ್ಲು ಬಾಣಗಳನ್ನು ಹಿಡಿದು ಆಕಾಶವನ್ನೇ ನುಂಗುವಂತೆ ಕಾಣುತ್ತಿದ್ದರು.

ತೌ ದೃಷ್ಟ್ವಾ ಸುಮಹಾತ್ರಸ್ತೋ ವಾಲಿಪಕ್ಷ್ಯಾವಮನ್ಯತ ।
ಪ್ರಾಸ್ಥಾಪಯದ್ಧನೂಮಂತಂ ಭಿಕ್ಷುರೂಪೇಣ ವಾನರಂ ॥ ೧೦ ॥

ಆತ್ಮಾನಂ ದರ್ಶಯಾಮಾಸ ಹನೂಮಾನ್ ರಾಮಲಕ್ಷ್ಮಣೌ ।
ಕೋ ಭವಾನೀತಿ ಚೋಕ್ತೇಥ ಚತುರ್ಬಾಹುಂ ಕಿರೀಟಿನಂ ॥ ೧೧ ॥

ಶಂಖಚಕ್ರಗದಾಪಾಣಿಂ ವನಮಾಲಾವಿಭೂಷಿತಂ ।
ಶ್ರೀವತ್ಸವಕ್ಷಸಂ ದೇವಂ ಪೀತವಾಸಸಮಚ್ಯುತಂ ॥ ೧೨ ॥

ಲಕ್ಷ್ಮೀ ಸರಸ್ವತೀಭ್ಯಾಂ ಚ ಸಂಶ್ರಿತೋಭಯಪಾರ್ಶ್ವಕಂ ।
ಬ್ರಹ್ಮಪುತ್ರೈಸ್ಸನಂದಾದ್ಯೈಃ ಸ್ತೂಯಮಾನಂ ಸಮಂ ತತಃ ॥ ೧೩ ॥

ದೇವರ್ಷಿ ಪಿತೃಗಂಧರ್ವೈಃ ಸಿದ್ಧವಿದ್ಯಾಧರೋರಗೈಃ ।
ಸೇವ್ಯಮಾನಂ ಮಹಾತ್ಮಾನಂ ಪುಂಡರೀಕವಿಲೋಚನಂ ॥ ೧೪ ॥

---

೧೦. ಆ ಸುಗ್ರೀವನು ಇವರನ್ನು ನೋಡಿ ವಾಲಿಯ ಕಡೆಯುವರೆಂದು ಬಹುವಾಗಿ ಹೆದರಿದನು. ಅದಕ್ಕೋಸ್ಕರವಾಗಿ ಹನುಮಂತನನ್ನು ಭಿಕ್ಷುಕನ ರೂಪದಿಂದ ರಾಮನ ಬಳಿಗೆ ಕಳುಹಿಸಿದನು.

೧೧-೧೨. ಹನುಮಂತನು ಆ ರಾಮ ಲಕ್ಷ್ಮಣರನ್ನು ನೋಡಿ ತನ್ನ ವಿಷಯವನ್ನು ಹೇಳಿ ನೀವಾರೆಂದು ಕೇಳಲು ಆಗ ಆ ಶ್ರೀರಾಮನು ಹನುಮಂತನಿಗೆ ನಾಲ್ಕು ತೋಳುಗಳನ್ನು ಹೊಂದಿ ಕಿರೀಟವನ್ನು ಹಾಕಿಕೊಂಡು ಶಂಖ, ಚಕ್ರ, ಗದೆಗಳನ್ನು ಹಿಡಿದು ವನಮಾಲೆಯನ್ನು ಧರಿಸಿ ಶ್ರೀವತ್ಸವೆಂಬ ಮಚ್ಚೆಯನ್ನು ಹೊಂದಿ ಹೊಂಬಣ್ಣದ ಬಟ್ಟೆಯನ್ನುಟ್ಟ ಅಚ್ಯುತನ ರೂಪವನ್ನು ತೋರಿಸಿದನು.

೧೩, ಲಕ್ಷ್ಮೀ ಸರಸ್ವತಿಯರಿಂದ ಎರಡು ಪಾರ್ಶ್ವಗಳಲ್ಲಿಯೂ ಸೇವಿಸಲ್ಪಡುತ್ತಿರುವ ಬ್ರಹ್ಮನ ಮಕ್ಕಳಾದ ಸನಂದನಾದಿಗಳಿಂದ ಹೊಗಳಲ್ಪಡುತ್ತಿರುವ ಆ ಸ್ವಾಮಿಯ ರೂಪವನ್ನು ತೋರಿಸಿದನು.

೧೪-೧೬. ದೇವತೆಗಳು, ಪಿತೃಗಳು. ಗಂಧರ್ವರು, ಸಿದ್ಧರು, ವಿದ್ಯಾಧರರು, ಉರಗರು, ಇವರಿಂದ ಸೇವಿಸಲ್ಪಡುವ ಮಹಾತ್ಮನಾದ ಪುಂಡರೀಕದಂತೆ ಕಣ್ಣುಗಳುಳ್ಳ

**ಸಹಸ್ರಸೂರ್ಯಸಂಕಾಶಂ ಶತಚಂದ್ರಶುಭಾನನಂ ।**
**ಫಣಾ ಸಹಸ್ರಮತುಲಂ ಧಾರಯಂತಂ ಚ ಲಕ್ಷ್ಮಣಂ** ॥ ೧೫ ॥

**ಅನಂತಂ ರಾಮಶಿರಸಿ ಆತಪತ್ರಂ ಫಣಾಗಣೈಃ ।**
**ದಧಾನಂ ಸರ್ವಲೋಕೇಶಂ ನಾಗಸಂಘೈಶ್ಚ ಸಂಸ್ತುತಂ** ॥ ೧೬ ॥

**ಆತ್ಮಾನಂ ದರ್ಶಯಾಮಾಸ ರಾಮಚಂದ್ರೋ ಹನೂಮತೇ ।**
**ತದ್ರೂಪಂ ಹನುಮಾನ್ ವೀಕ್ಷ್ಯ ಕಿಮೇತದಿತಿವಿಸ್ಮಿತಃ** ॥ ೧೭ ॥

**ಕ್ಷಣಂ ನಿಮೀಲ್ಯ ನಯನೇ ಪುನಸ್ತೋಽಪಶ್ಯದದ್ಭುತಂ ।**
**ಸ್ತುತ್ವಾ ನತ್ವಾ ಚ ಬಹುಧಾ ಸೋಽಬ್ರವೀದ್ರಾಘವಂ ವಚಃ** ॥ ೧೮ ॥

**ಅಹಂ ಸುಗ್ರೀವಸಚಿವೋ ಹನುಮಾನ್ನಾಮ ವಾನರಃ ।**
**ಸುಗ್ರೀವೇಣ ಪ್ರೇಷಿತೋಽಹಂ ಯುವಾನೌ ಜ್ಞಾತುಮಾಗತಃ** ॥ ೧೯ ॥

---

ಸಾವಿರ ಸೂರ್ಯರಂತೆ ಪ್ರಕಾಶಮಾನನಾದ ನೂರುಜನ ಚಂದ್ರರಂತೆ ಮನೋಹರವಾದ ಮುಖವುಳ್ಳ ಆ ಶ್ರೀರಾಮನನ್ನು ಹನುಮಂತನು ನೋಡಿದನು. ಸಾವಿರ ಹೆಡೆಗಳನ್ನು ಧರಿಸಿ ರಾಮನ ತಲೆಯಮೇಲೆ ಆ ಹೆಡೆಗಳಿಂದ ಛತ್ರಿಯನ್ನು ಹಿಡಿಯುತ್ತಿರುವ ಲಕ್ಷ್ಮಣ ರೂಪನಾದ ಅನಂತನನ್ನೂ ನೋಡಿದನು. ಆ ಶೇಷನನ್ನು ಅನೇಕ ಸರ್ಪಗಳು ಹೊಗಳುತ್ತಿದ್ದವು. ರಾಮಚಂದ್ರನು ಹನುಮಂತನಿಗೆ ಇಂತಹ ತನ್ನ ರೂಪವನ್ನು ತೋರಿಸಿದನು.

೧೭–೧೮. ಆ ರೂಪವನ್ನು ಹನುಮಂತನು ನೋಡಿ ಇದೇನೆಂದು ಆಶ್ಚರ್ಯಗೊಂಡನು. ಕ್ಷಣ ಕಾಲ ಕಣ್ಣು ಮುಚ್ಚಿಕೊಂಡಿದ್ದು ಮತ್ತೆ ಅದೇ ಆಶ್ಚರ್ಯವಾದ ರೂಪನ್ನೇ ನೋಡಿದನು. ಆಗ ನಮಿಸಿ ಹೊಗಳಿ ಅನಂತರ ರಾಘವನನ್ನು ಕುರಿತು ಇಂತೆಂದನು.

೧೯. ನಾನು ಸುಗ್ರೀವನ ಸಚಿವನು. ನನ್ನ ಹೆಸರು ಹನುಮಂತನೆಂದು. ನಾನು ಜಾತಿಯಲ್ಲಿ ಕಪಿಯು. ನಿಮ್ಮಿಬ್ಬರನ್ನೂ ತಿಳಿಯಲು ಸುಗ್ರೀವನು ನನ್ನನ್ನು ಕಳುಹಿಸಿರುವನು.

ದೃಷ್ಟ್ವಾ ಯುವಾಂ ಚ ದ್ವಿಭುಜೌ ಚಾಪಬಾಣಧರೌ ಪರಂ ।
ಆಗತ್ಯ ಚಾನ್ಯಥಾ ದೃಷ್ಟಂ ವದ ನೋ ಕೋ ಭವಾನಿತಿ ॥ ೨೦ ॥

ಇತಿ ಪವನಸುತಂ ತಂ ವ್ಯಾಕುಲಂ ವ್ಯಾಹರಂತಂ
ಕಿಮಿತಿಕಥಮಿತೀದಂ ಕಂಪಮಾನಂ ಪ್ಲವಂಗಂ ।
ಕೃತಕರಪುಟಮೌಳಿಂ ಸಂವಿಧೇಯಂ ಭವಂತಂ
ಮಧುರತರಮುದಾರಂ ರಾಮಚಂದ್ರೋಽಬ್ರವೀತ್ತಂ ॥ ೨೧ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಶ್ರೀರಾಮಚತುರ್ಭುಜರೂಪದರ್ಶನಂ
ನಾಮ ದಶಮಃ ಸರ್ಗಃ

---

೨೦. ಧನುರ್ಬಾಣಗಳನ್ನು ಧರಿಸಿರುವ ಎರಡು ಕೈಯುಳ್ಳ ನಿಮ್ಮನ್ನು ನೋಡಿದೆನು. ಆದರೆ ಇಲ್ಲಿಗೆ ಬಂದ ಮೇಲೆ ನಿಮ್ಮ ರೀತಿಯೇ ಬೇರೆಯಾಯಿತು. ಆದರೂ ಕೂಡ ನೀವು ಯಾರು ಎಂಬುದನ್ನು ತಿಳಿಸು.

೨೧. ದುಃಖಗೊಂಡು ಮಾತನಾಡುತ್ತ ಇದೇನು? ಎಂತು! ಎಂದೆನ್ನುತ್ತ ನಡುಗುತ್ತಿರುವ ಕೈ ಮುಗಿದುಕೊಂಡು ಅದನ್ನು ತಲೆಯಮೇಲಿಟ್ಟುಕೊಂಡು ನಮ್ರತೆಯನ್ನು ತೋರಿಸುತ್ತ ಶಿಶ್ರೂಷೆ ಮಾಡುತ್ತಿರುವ ಆ ಹನುಮಂತನನ್ನು ಕುರಿತು ರಾಮಚಂದ್ರನು ಇಂತೆಂದನು.

ಇಂತು ಶ್ರೀ ವಾಲ್ಮೀಕಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಶ್ರೀರಾಮನ ಚತುರ್ಭುಜ ರೂಪ ದರ್ಶನ
ವೆಂಬ ಹತ್ತನೆಯ ಸರ್ಗವು.



## ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅದ್ಭುತ ರಾಮಾಯಣೇ

## ಅಥ ಏಕಾದಶಃ ಸರ್ಗಃ



**ರಾಮಃ ಪ್ರಾಹ ಹನೂಮಂತಮಾತ್ಮಾನಂ ಪುರುಷೋತ್ತಮಃ ।**
**ವತ್ಸ ವತ್ಸ ಹನೂರ್ಮ ತ್ವಂ ಭಕ್ತೋ ಯತ್ಪೃಷ್ಟವಾನಸಿ ।೧॥**

**ತತ್ತೇಹಂ ಸಂಪ್ರವಕ್ಷ್ಯಾಮಿ ಶೃಣುಷ್ವಾವಹಿತೋ ಮಮ ।**
**ಅವಾಚ್ಯಮೇತದ್ವಿಜ್ಞಾನಮಾತ್ಮಗುಹ್ಯಂ ಸನಾತನಂ ॥೨॥**

**ಯನ್ನ ದೇವಾ ವಿಜಾನಂತಿ ಯತಂತೋಪಿ ದ್ವಿಜಾತಯಃ ।**
**ಇದಂ ಜ್ಞಾನಂ ಸಮಾಶ್ರಿತ್ಯ ಬ್ರಹ್ಮಭೂತಾ ದ್ವಿಜೋತ್ತಮಾಃ ॥೩॥**

---

### ಹನ್ನೊಂದನೆಯ ಸರ್ಗವು.

೧-೨. ಆಗ ಪುರುಷೋತ್ತಮನಾದ ರಾಮನು ಹನುಮಂತನಿಗೆ ತಾನು ಯಾರೆಂಬುದನ್ನು ಹೇಳ ತೊಡಗಿದನು. ವತ್ಸನಾದ ಹನುಮಂತನೆ! ನೀನು ನನಗೆ ಭಕ್ತನಾಗಿ ಯಾವುದನ್ನು ಕೇಳಿದೆಯೋ ಅದನ್ನು ಹೇಳುತ್ತೇನೆ. ಸಾವಧಾನದಿಂದ ಕೇಳು. ಇದು ಹೇಳುವುದಕ್ಕಾಗದಿರುವಂಥಾದ್ದು. ವಿಜ್ಞಾನ ರೂಪವಾದುದು. ಆತ್ಮರೂಪವಾದ ಗುಹ್ಯವೂ ಸನಾತನ ರೂಪವೂ ಆದುದು.

೩-೪. ದೇವತೆಗಳಿಗೂ ಕೂಡ ಈ ವಿಷಯವು ತಿಳಿಯದು. ಬ್ರಾಹ್ಮಣರು ಪ್ರಯತ್ನಪಟ್ಟರೂ ಕೂಡ ತಿಳಿದುಕೊಳ್ಳಲಾಗುವುದಿಲ್ಲ. ಬ್ರಾಹ್ಮಣೋತ್ತಮರು ಈ ಜ್ಞಾನವನ್ನೇ ಆಶ್ರಯಿಸಿಕೊಂಡು ಪರಬ್ರಹ್ಮನಲ್ಲಿ ಐಕ್ಯರಾದರು. ಎಷ್ಟೋ ಜನರು

ನ ಸಂಸಾರೇ ಪ್ರಪಶ್ಯಂತಿ ಪೂರ್ವೇಽಪಿ ಬ್ರಹ್ಮವಾದಿನಃ ।
ಗುಹ್ಯಾದ್ಗುಹ್ಯತಮಂ ಸಾಕ್ಷಾತ್ ಗೋಪನೀಯಂ ಪ್ರಯತ್ನತಃ ॥ ೪ ॥

ವಂಶೇ ಭಕ್ತಿಮತೋ ಹ್ಯಸ್ಯ ಭವಂತಿ ಬ್ರಹ್ಮವಾದಿನಃ ।
ಆತ್ಮಾ ಯಃ ಕೇವಲಃ ಸ್ವಚ್ಛಃ ಶಾಂತಃ ಸೂಕ್ಷ್ಮಃ ಸನಾತನಃ ॥ ೫ ॥

ಅಸ್ತಿ ಸರ್ವಾಂತರಸ್ಸಾಕ್ಷಾತ್ ಚಿನ್ಮಾತ್ರಃ ತಮಸಃ ಪರಃ ।
ಸೋಽಂತರ್ಯಾಮೀ ಸ ಪುರುಷಃ ಸ ಪ್ರಾಣಸ್ಸ ಮಹೇಶ್ವರಃ ॥ ೬ ॥

ಸ ಕಾಲಾಗ್ನಿಸ್ತದವ್ಯಕ್ತಂ ಸ ಏವೇದಮಿತಿ ಶ್ರುತಿಃ ।
ಅಸ್ಮಾದ್ವಿಜಾಯತೇ ವಿಶ್ವಮತ್ರೈವ ಪ್ರವಿಲೀಯತೇ ॥ ೭ ॥

ಮಾಯಾವೀ ಮಾಯಯಾ ಬದ್ಧಃ ಕರೋತಿ ವಿವಿಧಾಸ್ತನೂಃ ।
ನ ಚಾಪ್ಯಯಂ ಸಂಸರತಿ ನ ಚ ಸಂಸಾರಯೇತ್ಪ್ರಭುಃ ॥ ೮ ॥

ಬ್ರಹ್ಮನನ್ನೇ ಆಶ್ರಯಿಸಿಕೊಂಡು ಅದರಲ್ಲಿ ಲೀನರಾಗಿ ಸಂಸಾರವೆಂಬುದನ್ನೇ ಮತ್ತೆ ನೋಡದಿದ್ದಾರೆ. ಇದು ಗೋಪ್ಯವಾದ ಪದಾರ್ಥಗಳಲ್ಲೆಲ್ಲಾ ಅತಿ ಗೋಪ್ಯವಾದುದು. ಆದ್ದರಿಂದ ಪ್ರಯತ್ನಪಟ್ಟು ಗುಟ್ಟಾಗಿಟ್ಟುಕೊಳ್ಳಬೇಕು.

೫. ಈ ಬ್ರಹ್ಮನನ್ನು ತಿಳಿದವನ ವಂಶದಲ್ಲಿಯೂ ಕೂಡ ಹುಟ್ಟಿದವರು ಬ್ರಹ್ಮವಾದಿಗಳೇ ಆಗುತ್ತಾರೆ. ಆತ್ಮವೆಂಬ ಪದಾರ್ಥವು ಬಹು ನಿರ್ಮಲವಾದುದು. ಶಾಂತವಾದದು. ಸೂಕ್ಷ್ಮವಾದುದು. ಬಹು ಹಳೆಯದು.

೬. ಆ ಆತ್ಮನು ಸರ್ವರಲ್ಲಿಯೂ ಇರತಕ್ಕವನು. ಚಿದ್ರೂಪನು. ಕತ್ತಲೆಗೆ ಬಹು ದೂರದಲ್ಲಿರತಕ್ಕವನು. ಅವನು ಎಲ್ಲರಲ್ಲಿಯೂ ಇದ್ದುಕೊಂಡಿರುವ ಪುರುಷನು. ಅವನೇ ಪ್ರಾಣರೂಪನಾದ ಮಹೇಶ್ವರನು.

೭-೮. ಆ ಆತ್ಮನೇ ಕಾಲಾಗ್ನಿ ರೂಪನಾದವನು, ಅವ್ಯಕ್ತನಾದವನು, ಶ್ರುತಿಯಿಂದ ಅವನನ್ನು ತಿಳಿದುಕೊಳ್ಳಬಹುದು, ಈ ಆತ್ಮನಿಂದಲೇ ಪ್ರಪಂಚವು ಹುಟ್ಟುತ್ತದೆ, ಈ ಆತ್ಮನಲ್ಲಿಯೇ ಅಡಗುತ್ತದೆ, ಮಾಯೆಯನ್ನು ಮಾಡತಕ್ಕವನು ಇವನೇಯೇ, ಇವನು ಮಾಯೆಯಿಂದ ಬದ್ಧನಾಗಿ ಅನೇಕ ವಿಧವಾದ ಆಕಾರಗಳನ್ನು ಹೊಂದುತ್ತಾನೆ. ಇವನು ಚಲಿಸುವುದೂ ಇಲ್ಲ. ಚಲಿಸುವಂತೆ ಮಾಡುವುದೂ ಇಲ್ಲ.

ನಾಯಂ ಪೃಥ್ವೀ ನ ಸಲಿಲಂ ನ ತೇಜಃ ಪವನೋ ನಭಃ ।
ನ ಪ್ರಾಣೋ ನ ಮನೋಽವ್ಯಕ್ತಂ ನ ಶಬ್ದಃ ಸ್ಪರ್ಶ ಏವ ಚ ॥ ೯ ॥

ನ ರೂಪರಸಗಂಧಾಶ್ಚ ನಾಹಂ ಕರ್ತಾ ನ ವಾಗಪಿ ।
ನ ಪಾಣಿಪಾದೌ ನೋ ಪಾಯುಃ ನ ಚೋಪಸ್ಥಂ ಪ್ಲವಂಗಮ ॥ ೧೦ ॥

ನ ಕರ್ತಾ ನ ಚ ಭೋಕ್ತಾ ಚ ನ ಚ ಪ್ರಕೃತಿಪೂರುಷೌ ।
ನ ಮಾಯಾ ನೈವ ಚ ಪ್ರಾಣಃ ಚೈತನ್ಯಂ ಪರಮಾರ್ಥತಃ ॥ ೧೧ ॥

ಯಥಾ ಪ್ರಕಾಶತಮಸೋಃ ಸಂಬಂಧೋ ನೋಪಪದ್ಯತೇ ।
ತದ್ವದೇವ ನ ಸಂಬಂಧಃ ಪ್ರಪಂಚಪರಮಾತ್ಮನೋಃ ॥ ೧೨ ॥

ಛಾಯಾತರೂ ಯಥಾ ಲೋಕೇ ಪರಸ್ಪರವಿಲಕ್ಷಣೌ ।
ತದ್ವತ್ಪ್ರಪಂಚಪುರುಷೌ ವಿಭಿನ್ನೌ ಪರಮಾರ್ಥತಃ ॥ ೧೩ ॥

---

೯–೧೦. ಎಲೈ ಹನುಮಂತನೇ ! ಈ ಆತ್ಮನು ಭೂಮಿಯಲ್ಲ, ನೀರಲ್ಲ, ತೇಜಸ್ಸಲ್ಲ, ಗಾಳಿಯಲ್ಲ, ಆಕಾಶವಲ್ಲ, ಪ್ರಾಣವಲ್ಲ, ಮನಸ್ಸಲ್ಲ, ಶಬ್ದವಲ್ಲ, ಸ್ಪರ್ಶವಲ್ಲ, ರೂಪವಲ್ಲ, ರಸವಲ್ಲ, ಗಂಧವಲ್ಲ, ಕರ್ತೃವಲ್ಲ, ವಾಕ್ಕೂ ಅಲ್ಲ, ಕೈಕಾಲುಗಳಲ್ಲ, ಪೃಷ್ಠವಲ್ಲ, ಜನನ ಜಾಗವಲ್ಲ, ಇವುಗಳಲ್ಲೊಂದೂ ಅಲ್ಲ.

೧೧. ಅವನು ಕರ್ತೃವಲ್ಲ, ಭೋಕ್ತೃವಲ್ಲ, ಪ್ರಕೃತಿಯೂ ಅಲ್ಲ, ಪುರುಷನೂ ಅಲ್ಲ, ಮಾಯೆಯಲ್ಲ. ಪ್ರಾಣಗಳಲ್ಲ, ಅದು ಚೈತನ್ಯಸ್ವರೂಪವಾದುದು.

೧೨. ಬೆಳಕು ಕತ್ತಲೆಗಳು ಒಂದು ಜಾಗದಲ್ಲಿ ಹೇಗೆ ಇರಲಾರವೋ ಹಾಗೆಯೇ ಪ್ರಪಂಚಪರಮಾತ್ಮರಿಗೆ ಸಂಬಂಧವು ಸೇರುವುದಿಲ್ಲ.

೧೩. ಮರದ ನೆರಳು ಮರದಂತೆಯೇ ಕೆಳಗೆ ಕಂಡು ಬಂದರೂ ಆ ಮರವೂ ಅದರ ನೆರಳೂ ಹೇಗೆ ಬೇರೆಬೇರೆಯಾಗಿವೆಯೋ ಹಾಗೆಯೇ ಪ್ರಪಂಚವೂ ಪುರುಷನೂ ಒಂದಾಗಿ ಕಂಡು ಬಂದರೂ ಸರಿಯಾದ ರೀತಿಯಿಂದ ನೋಡಿದರೆ ಬೇರೆ ಬೇರೆಯಾಗಿರತಕ್ಕವರು.

ಯದ್ಯಾತ್ಮಾ ಮಲಿನೋಽಸ್ವಸ್ಥೋ ವಿಕಾರೀ ಸ್ಯಾತ್ ಸ್ವಭಾವತಃ ।
ನ ಹಿ ತಸ್ಯಭವೇನ್ಮುಕ್ತಿಃ ಜನ್ಮಾಂತರಶತೈರಪಿ ॥ ೧೪ ॥

ಪಶ್ಯಂತಿ ಮುನಯೋ ಮುಕ್ತಾಃ ಸ್ವಾತ್ಮಾನಂ ಪರಮಾರ್ಥತಃ ।
ವಿಕಾರಹೀನಂ ನಿರ್ದುಃಖಮಾನಂದಾತ್ಮಾನಮವ್ಯಯಂ ॥ ೧೫ ॥

ಅಹಂ ಕರ್ತಾ ಸುಖೀ ದುಃಖೀ ಕೃಶಃ ಸ್ಥೂಲೇತಿ ಯಾ ಮತಿಃ ।
ಸಾಪ್ಯಹಂಕೃತಿಸಂಬಂಧಾದಾತ್ಮನ್ಯಾರೋಪ್ಯತೇ ಜನೈಃ ॥ ೧೬ ॥

ವದಂತಿ ವೇದವಿದ್ವಾಂಸಃ ಸಾಕ್ಷಿಣಂ ಪ್ರಕೃತೇಃ ಪರಂ ।
ಭೋಕ್ತಾರಮಕ್ಷಯಂ ಬುದ್ಧ್ವಾ ಸರ್ವತ್ರಸಮವಸ್ಥಿತಂ ॥ ೧೭ ॥

೧೪. ಆತ್ಮನೆಂಬ ಪದಾರ್ಥವು ಮಲಿನವಾಗಿಯಾಗಲಿ ಅಸ್ವಸ್ಥವಾಗಿಯಾಗಲಿ ವಿಕಾರವನ್ನು ಹೊಂದುವುದಾಗಿಯಾಗಲಿ ಇರುವ ಪಕ್ಷದಲ್ಲಿ ಸಾವಿರಾರು ಜನ್ಮಗಳನ್ನು ಎತ್ತಿದರೂ ಅವನಿಗೆ ಮುಕ್ತಿ ಎಂಬುದೇ ಬರುವುದಿಲ್ಲ.

೧೫. ಮುಕ್ತರಾದ ಮುನಿಗಳು ಮಾತ್ರ ಆತ್ಮನನ್ನು ಸರಿಯಾಗಿರುವ ರೀತಿಯಲ್ಲಿ ನೋಡುತ್ತಾರೆ. ಅವನು ವಿಕಾರಿಯಲ್ಲ, ದುಃಖಿಯಲ್ಲ, ಆನಂದಸ್ವರೂಪನು, ನಾಶರಹಿತನು, ಈ ವಿಷಯವು ಆ ಮುಕ್ತರಾದ ಮುನಿಗಳಿಗೆ ತಿಳಿಯುತ್ತದೆ.

೧೬. ನಾನೇ ಮಾಡತಕ್ಕವನು, ನಾನು ಸುಖಿಯು, ನಾನು ದುಃಖಿಯು, ನಾನು ಕೃಶವಾಗಿದ್ದೇನೆ, ನಾನು ದಪ್ಪವಾಗಿದ್ದೇನೆ, ಎಂಬ ಹೆಚ್ಚು ಕಡಿಮೆಗಳನ್ನು ಹೇಳುವಾಗ ಆ ಅಹಂಬುದ್ಧಿಯಿಂದ ಹೇಳುವುದು ಯಾವುದಿದೆಯೋ ಅದು ಜನಗಳಿಂದ ಆತ್ಮನಲ್ಲಿ ಆರೋಪಿಸಲ್ಪಡುತ್ತವೆ. ನಿಜವಾಗಿಯೂ ಆತ್ಮನು ನಿರ್ವಿಕಾರನು.

೧೭. ವೇದವನ್ನು ಅನುಷ್ಠಾನದಲ್ಲಿಟ್ಟುಕೊಂಡಿರುವ ವಿದ್ವಾಂಸರು ಆ ಆತ್ಮನನ್ನು ಸಾಕ್ಷಿಯೆಂದೂ ಪ್ರಕೃತಿಗಿಂತಲೂ ಬೇರೆಯಾದವನೆಂದೂ ಭೋಕ್ತೃ (ತಿನ್ನುವವನು) ಎಂದೂ, ನಾಶರಹಿತನೆಂದೂ, ಎಲ್ಲಾ ಕಡೆಯಲ್ಲಿಯೂ ಇರವವನೆಂದೂ ಹೇಳುತ್ತಾರೆ.

ತಸ್ಮಾದಜ್ಞಾನಮೂಲೋಽಯಂ ಸಂಸಾರಃ ಸರ್ವದೇಹಿನಾಂ ।
ಅಜ್ಞಾನಾದನ್ಯಥಾ ಜ್ಞಾನಂ ತಚ್ಚ ಪ್ರಕೃತಿಸಂಗತಂ ॥ ೧೮ ॥

ನಿತ್ಯೋದಿತಃ ಸ್ವಯಂಜ್ಯೋತಿಃ ಸರ್ವಗಃ ಪುರುಷಃ ಪರಃ ।
ಅಹಂಕಾರಾವಿವೇಕೇನ ಕರ್ತಾಹಮಿತಿ ಮನ್ಯತೇ ॥ ೧೯ ॥

ಪಶ್ಯಂತಿ ಋಷಯೋಽವ್ಯಕ್ತಂ ನಿತ್ಯಂ ಸದಸದಾತ್ಮಕಂ ।
ಪ್ರಧಾನಂ ಪ್ರಕೃತಿಂ ಬುಧ್ವಾ ಕಾರಣಂ ಬ್ರಹ್ಮವಾದಿನಃ ॥ ೨೦ ॥

ತೇನಾತ್ರಸಂಗತೋ ಹ್ಯಾತ್ಮಾ ಕೂಟಸ್ಥೋಽಪಿ ನಿರಂಜನಃ ।
ಆತ್ಮಾನಮಕ್ಷರಂ ಬ್ರಹ್ಮ ನಾವಬುಧ್ಯಂತಿ ತತ್ವತಃ ॥ ೨೧ ॥

---

೧೮. ಆದ್ದರಿಂದ ಎಲ್ಲರಿಗೂ ಈ ಸಂಸಾರವೆಂಬುದು ಅಜ್ಞಾನದಿಂದ (ಸರಿಯಾದ ತಿಳಿವಳಿಕೆ ಇಲ್ಲದಿರುವುದರಿಂದ) ಬಂದದ್ದು ಅಜ್ಞಾನವು ಬಂದರೆ, ಅದರಿಂದ ಜ್ಞಾನವೇ ಬದಲಾಗಿ ಉಂಟಾಗುತ್ತದೆ. ಅದು ಈ ಪ್ರಕೃತಿಗೆ ಸಂಬಂಧ ಪಡುತ್ತದೆ.

೧೯. ಆ ಆತ್ಮನು ಯಾವಾಗಲೂ ಇದ್ದಂತೆಯೇ ಇರುವನು, ತಾನಾಗಿಯೇ ಪ್ರಕಾಶಿಸುವನು, ಎಲ್ಲಾ ಕಡೆಯಲ್ಲಿಯೂ ಇರತಕ್ಕವನು, ಪರಮ ಪುರುಷನು, ಇಂತಹವನನ್ನು ಅಹಂಕಾರವೆಂಬ ಅವಿವೇಕದಿಂದ (ವಿಮರ್ಶೆಯನ್ನು ಮಾಡದೆ) ನಾನೇ ಕರ್ತೃವು ಎಂದು ತಿಳಿಯುತ್ತಾನೆ.

೨೦–೨೧. ಋಷಿಗಳಾದವರು ಸತ್ ಅಸತ್ ರೂಪನಾದ ಆ ಆತ್ಮನನ್ನು ನಿತ್ಯವೂ ನೋಡುತ್ತಾರೆ. ಹಾಗೆ ನೋಡಿದ ಬ್ರಹ್ಮವಾದಿಗಳು ಪ್ರಧಾನನೂ ಪ್ರಕೃತಿಯೂ ಈ ಆತ್ಮನೇ ಎಂದು ತಿಳಿಯುತ್ತಾರೆ. ಅವರು ಈ ಆತ್ಮನು ಕೂಟಸ್ಥನು (ಒಂದು ಕಡೆಗೂ ಬರದಂತೆ ಎಲ್ಲವನ್ನೂ ನೋಡುವವನು) ನಿರಂಜನನು (ಯಾವುದಕ್ಕೂ ಒಳಗಾಗದವನು) ಎಂದು ತಿಳಿದಿರುವರು. ಆದ್ದರಿಂದ ಆತ್ಮನು ಈ ಪ್ರಪಂಚದಲ್ಲಿ ಸೇರಿಕೊಂಡಂತೆ ಕಾಣುತ್ತಾನೆ. ಆದರೆ ನಾಶರಹಿತನಾದ ಬ್ರಹ್ಮ ರೂಪನಾದ ಆತ್ಮನನ್ನು ಸರಿಯಾಗಿ ತಿಳಿದುಕೊಳ್ಳುವುದಿಲ್ಲ.

ಅನಾತ್ಮನ್ಯಾತ್ಮವಿಜ್ಞಾನಂ ತಸ್ಮಾದ್ದುಃಖಂ ತಥೇತರತ್।
ರಾಗದ್ವೇಷಾದಯೋ ದೋಷಾಃ ಸರ್ವೇ ಭ್ರಾಂತಿನಿಬಂಧನಾಃ ॥ ೨೨ ॥

ಕಾರ್ಯೋ ಹ್ಯಸ್ಯ ಭವೇದೇಷಾ ಪುಣ್ಯಾಪುಣ್ಯಮಿತಿಶ್ರುತಿಃ ।
ತದ್ವಶಾದೇವ ಸರ್ವೇಷಾಂ ಸರ್ವದೇಹಸಮುದ್ಭವಃ ॥ ೨೩ ॥

ನಿತ್ಯಃ ಸರ್ವತ್ರಗೋ ಹ್ಯಾತ್ಮಾ ಕೂಟಸ್ಥೋ ದೋಷವರ್ಜಿತಃ ।
ಏಕಸ್ಸಭಿದ್ಯತೇ ಶಕ್ತ್ಯಾ ಮಾಯಯಾ ನ ಸ್ವಭಾವತಃ ॥ ೨೪ ॥

ತಸ್ಮಾದದ್ವೈತಮೇವಾಹುಃ ಮುನಯಃ ಪರಮಾರ್ಥತಃ ।
ಭೇದೋಽವ್ಯಕ್ತಸ್ವಭಾವೇನ ಸಾ ಚ ಮಾಯಾತ್ಮಸಂಶ್ರಯಾ ॥ ೨೫ ॥

---

೨೨. ಆತ್ಮನಲ್ಲದವನಲ್ಲಿ ಆತ್ಮನೆಂಬ ಬುದ್ಧಿ ಬರುವುದರಿಂದಲೇ ಈ ದುಃಖ ಮುಂತಾದುವು ಬರುತ್ತವೆ. ರಾಗ, ದ್ವೇಷ, ಮುಂತಾದ ದೋಷಗಳೆಲ್ಲ ಆತ್ಮನಲ್ಲದವನನ್ನು ಆತ್ಮನೆಂದು ತಿಳಿದಿರುವ ಭ್ರಾನ್ತಿ ಮೂಲಕವಾದುದೆಂದು ತಿಳಿ.

೨೩. ಈತನು ಮಾಡುವ ಕೆಲಸಗಳ ದೆಸೆಯಿಂದ ಪುಣ್ಯಗಳಾಗಲಿ, ಪಾಪಗಳಾಗಲಿ ಬರುತ್ತವೆಂದು ಶ್ರುತಿಗಳೇ ಹೇಳುತ್ತವೆ. ಅದರಿಂದಲೇ ಎಲ್ಲರೂ ಎಲ್ಲಾ ರೀತಿಯಾದ ದೇಹವನ್ನು ಹೊಂದತಕ್ಕದ್ದು.

೨೪. ಆ ಆತ್ಮನು ನಿತ್ಯನು, ಎಲ್ಲಾ ಕಡೆಯಲ್ಲಿಯೂ ಇರುವವನು, ಕೂಟಸ್ಥನು, ದೋಷಗಳಿಲ್ಲದವನು ಅವನು ಒಬ್ಬನೇ, ಅಂತಹವನು ಮಾಯೆಯಿಂದ ಭೇದವುಳ್ಳವನಹಾಗೆ ಕಾಣುತ್ತಾನೆ. ಸ್ವಭಾವವಾಗಿ ಭೇದವಿಲ್ಲದೆ ಇರುತ್ತಾನೆ.

೨೫. ಪರಮಾತ್ಮನು ಒಬ್ಬನಾಗಿದ್ದರೂ ಅವನನ್ನೇ ನಾವು ಮಾಯೆಯಿಂದ ಅನೇಕ ರೀತಿಯಲ್ಲಿ ಕಾಣುತ್ತೇವೆ. ಯೋಚಿಸಿದರೆ ಎಲ್ಲವೂ ಒಂದೇ ಎಂದು ಹೇಳಬಹುದು. ಆದ್ದರಿಂದಲೇ ಅದ್ವೈತವು ಆ ಪರಮಾತ್ಮನಿಗೆ ಇದೆ ಎಂದು ಹೇಳುತ್ತಾರೆ. ಈ ಆತ್ಮನು ಬೇರೆಯಾಗಿ ಕಾಣುವ ಪದಾರ್ಥದಲ್ಲಿ ತಾನು ವ್ಯಕ್ತವಾಗಿ ಕಾಣದಿರುವುದರಿಂದ ಭೇದವು ಎಂದರೆ ದ್ವೈತವಾಗಿರುವಿಕೆಯು. ಆ ದ್ವೈತವು ಮಾಯೆಯಿಂದ ಬಂದುದಾಗಿರುವುದು. ಆದ್ದರಿಂದಲೇ ಮುನಿಗಳು ಅದ್ವೈತವೇ ಸರಿಯೆಂದು ಹೇಳುವರು.

ಯಥಾ ಹಿ ಧೂಮಸಂಪರ್ಕಾನ್ನಾಕಾಶೋ ಮಲಿನೋ ಭವೇತ್ ।
ಅಂತಃಕರಣಜೈರ್ಭಾವೈರಾತ್ಮಾ ತದ್ವನ್ನ ಲಿಪ್ಯತೇ ॥ ೨೬ ॥

ಯಥಾ ಸ್ವಪ್ರಭಯಾ ಭಾತಿ ಕೇವಲಃ ಸ್ಫಟಿಕೋಪಲಃ ।
ಉಪಾಧಿಹೀನೋ ವಿಮಲಃ ತಥೈವಾತ್ಮಾ ಪ್ರಕಾಶತೇ ॥ ೨೭ ॥

ಜ್ಞಾನಸ್ವರೂಪಮೇವಾಹುಃ ಜಗದೇತ ದ್ವಿಚಕ್ಷಣಾಃ ।
ಅರ್ಥಸ್ವರೂಪಮೇವಾಜ್ಞಾಃ ಪಶ್ಯಂತ್ಯನ್ಯೇ ಕುಬುದ್ಧಯಃ ॥ ೨೮ ॥

ಕೂಟಸ್ಥೋ ನಿರ್ಗುಣೋ ವ್ಯಾಪೀ ಚೈತನ್ಯಾತ್ಮಾ ಸ್ವಭಾವತಃ ।
ದೃಶ್ಯತೇ ಹ್ಯರ್ಥ ರೂಪೇಣ ಪುರುಷೈಃ ಭ್ರಾಂತಿದೃಷ್ಟಿಭಿಃ ॥ ೨೯ ॥

೨೬. ಹೊಗೆಯು ಎಷ್ಟು ಹೋದರೂ ಆಕಾಶವು ಅದರಿಂದ ಹೇಗೆ ಲೇಪ ಗೊಳ್ಳುವುದಿಲ್ಲವೋ ಹಾಗೆ ಅಂತಃಕರಣದಲ್ಲಿ ಹುಟ್ಟುವ ಭಾವಗಳಿಂದ ಆತ್ಮನು ಲಿಪ್ತ ನಾಗುವುದಿಲ್ಲ. (ಆತ್ಮನು ಸಂಬಂಧವನ್ನೂ ಹೊಂದುವುದಿಲ್ಲ.)

೨೭. ಸ್ಫಟಿಕಶಿಲೆಯು ತನ್ನ ಕಾಂತಿಯಿಂದಲೇ ಪ್ರಕಾಶಿಸುತ್ತದೆ. ಅದು ನಿರ್ಮಲವಾದುದು. ಅದಕ್ಕೆ ಪ್ರಕಾಶ ಬರುವಂತೆ ಮಾಡುವುದಕ್ಕೆ ಯಾವರೀತಿ ಯಾದ ಆರೋಪಿತ ವರ್ಣಗಳೂ ಇರುವುದಿಲ್ಲ. ಅದರಂತೆಯೇ ಆತ್ಮನು ನಿರ್ಮ ಲನು, ಉಪಾಧಿ ರಹಿತನು, ಪ್ರಕಾಶಿಸುತ್ತಾನೆ.

೨೮. ತಿಳಿದವರು ಈ ಜಗತ್ತು ಜ್ಞಾನಸ್ವರೂಪವಾದುದೆಂದು ಹೇಳುತ್ತಾರೆ. ಅಜ್ಞರಾದವರೂ ಬುದ್ಧಿಯನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸದೆ ಕೆಟ್ಟ ರೀತಿ ಯಲ್ಲಿ ಉಪಯೋಗಿಸುವವರೂ ಈ ಪ್ರಪಂಚವನ್ನು ಅರ್ಥರೂಪವಾದುದೆಂದು ತಿಳಿ ಯುತ್ತಾರೆ. (ರಾಮ ಎಂದರೆ ರಾಮನು ಬರುತ್ತಾನಷ್ಟೆ, ಆ ವ್ಯಕ್ತಿಯು ಅರ್ಥರೂಪ ವಾದುದು).

೨೯. ಆ ಆತ್ಮನು ಕೂಟಸ್ಥನು, ನಿರ್ಗುಣನು, ವ್ಯಾಪಕನು, ಸ್ವಭಾವ ವಾಗಿಯೇ ಚೈತನ್ಯರೂಪನು, ಅಂತಹವನು ಭ್ರಾಂತಿಗೊಂಡವರಿಂದ ಅರ್ಥರೂಪದಲ್ಲಿ ತಿಳಿಯಲ್ಪಡುತ್ತಾನೆ.

**ಯಥಾ ಸಂಲಕ್ಷ್ಯತೇ ವ್ಯಕ್ತಃ ಕೇವಲಃ ಸ್ಫಟಿಕೋ ಜನೈಃ ।**
**ರಕ್ತಿಕಾದ್ಯವ್ಯವಧಾನೇನ ತದ್ವತ್ ಪರಪೂರುಷಃ ॥ ೩೦ ॥**

**ತಸ್ಮಾದಾತ್ಮಾಕ್ಷರಃ ಶುದ್ಧೋ ನಿತ್ಯಃ ಸರ್ವಗತೋಽವ್ಯಯಃ ।**
**ಉಪಾಸಿತವ್ಯೋ ಮಂತವ್ಯಃ ಶ್ರೋತವ್ಯಶ್ಚ ಮುಮುಕ್ಷುಭಿಃ ॥ ೩೧ ॥**

**ಯದಾ ಮನಸಿ ಚೈತನ್ಯಂ ಭಾತಿ ಸರ್ವತ್ರಗಂ ಸದಾ ।**
**ಯೋಗಿನೋಽವ್ಯವಧಾನೇನ ತದಾ ಸಂಪದ್ಯತೇ ಸ್ವಯಂ ॥ ೩೨ ॥**

**ಯದಾ ಸರ್ವಾಣಿ ಭೂತಾನಿ ಸ್ವಾತ್ಮನ್ಯೇವಾಭಿಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ಬ್ರಹ್ಮ ಸಂಪದ್ಯತೇ ತದಾ ॥ ೩೩ ॥**

೩೦. ಸ್ಫಟಿಕ ಶಿಲೆಯು ಯಾವುದರ ಸಂಬಂಧವೂ ಇಲ್ಲದಿರುವಾಗ ವ್ಯಕ್ತವಾಗಿ ಶುದ್ಧವಾಗಿ ಕಾಣುತ್ತದೆ. ಅದಕ್ಕೆ ಕೆಂಪು ಬಣ್ಣವನ್ನು ಒಳಿದರೆ ಕೆಂಪಾಗಿ ಕಾಣುತ್ತದೆ. ಹಾಗೆ ಆ ಪುರುಷನು ಶುದ್ಧನು. ಮಾಯೆಯ ಸಂಬಂಧದಿಂದ ಬೇರೆ ರೀತಿಯಾಗಿ ಕಾಣುತ್ತಾನೆ.

೩೧. ಆತ್ಮನು ನಾಶರಹಿತನು, ಶುದ್ಧನು, ನಿತ್ಯನು, ಎಲ್ಲಾ ಕಡೆಯಲ್ಲಿಯೂ ಇರವವನು, ಅವ್ಯಯನು, ಇಂತಹವನನ್ನು ಉಪಾಸನೆ ಮಾಡಬೇಕು ಸೇವಿಸಬೇಕು ತಿಳಿಯಬೇಕು, ಕೇಳಬೇಕು, ಮೋಕ್ಷಾಪೇಕ್ಷೆಯಿಂದ ಈ ರೀತಿಯಾಗಿ ಮಾಡಬೇಕು.

೩೨. ಆ ರೀತಿಯಾಗಿ ಆತ್ಮನನ್ನು ಭಾವಿಸುತ್ತಿದ್ದರೆ ಮನಸ್ಸಿನಲ್ಲಿ ಆ ಆತ್ಮನು ಸರ್ವದಲ್ಲಿಯೂ ಇರತಕ್ಕವನೆಂದು ತೋರುತ್ತದೆ. ಹಾಗೆ ಭಾವಿಸುತ್ತಿದ್ದರೆ ಅವೇ ಯೋಗವು. ಅವನಿಗೆ ಆ ಯೋಗದಿಂದ ಆತ್ಮನು ಕಂಡುಬಂದರೆ ಆಗ ತಾನೇ ಆತ್ಮನಾಗುತ್ತಾನೆ.

೩೩. ಹೀಗೆ ನೋಡುತ್ತಿರುವಾಗ ಎಲ್ಲಾ ಭೂತಗಳನ್ನು ತನ್ನಲ್ಲಿಯೇ ನೋಡುವಂತಾಗುತ್ತದೆ. ಮತ್ತು ಎಲ್ಲಾ ಪ್ರಾಣಿಗಳಲ್ಲಿಯೂ ತನ್ನನ್ನು ನೋಡುತ್ತಾನೆ. ಮತ್ತು ಆತ್ಮನಿರುವುದನ್ನು ನೋಡುತ್ತಾನೆ. ಆಗ ತಾನೇ ಬ್ರಹ್ಮನಾಗಿ ಪ್ರಕಾಶಿಸುತ್ತಾನೆ.

ಯದಾ ಸರ್ವಾಣಿ ಭೂತಾನಿ ಸಮಾಧಿಸ್ಥೋ ನ ಪಶ್ಯತಿ ।
ಏಕೀಭೂತಃ ಪರೇಣಾಸೌ ತದಾ ಭವತಿ ಕೇವಲಃ ॥ ೩೪ ॥

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿಸ್ಥಿತಾಃ ।
ತದಾಸಾವಮೃತೀಭೂತಃ ಕ್ಷೇಮಂ ಗಚ್ಛತಿ ಪಂಡಿತಃ ॥ ೩೫ ॥

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೬ ॥

ಯದಾ ಪಶ್ಯತಿ ಚಾತ್ಮಾನಂ ಕೇವಲಂ ಪರಮಾರ್ಥತಃ ।
ಮಾಯಾಮಾತ್ರಂ ಜಗತ್ಕೃತ್ಸ್ನಂ ತದಾ ಭವತಿ ನಿರ್ವೃತಃ ॥ ೩೭ ॥

೩೪. ತಾನು ಸಮಾಧಿಸ್ಥಿತಿಯಲ್ಲಿರುವಾಗ ಎಲ್ಲಾ ಪ್ರಾಣಿಗಳನ್ನೂ ನೋಡಿ ಅದರಲ್ಲೆಲ್ಲಾ ಆತ್ಮನನ್ನೂ ತನ್ನನ್ನೂ ನೋಡುತ್ತಿರುವನಷ್ಟೆ! ಸಮಾಧಿಯಲ್ಲಿದ್ದಾಗ ಆ ಪ್ರಾಣಿಗಳೊಂದೂ ಕಾಣದೆ ಎಲ್ಲದರಲ್ಲೂ ತಾನೇ ಸೇರಿಕೊಂಡಂತೆ ಕಂಡುಬಂದರೆ ಆಗ ಕೇವಲಸ್ವರೂಪವಾಗುತ್ತಾನೆ. ಎಂದರೆ ಆವರಣಗಳು ಹೋಗಿ ಶುದ್ಧವಾದದನ್ನೂ ಕಾಣುತ್ತಾನೆ.

೩೫. ಹೀಗೆ ಸಮಾಧಿಯಿಂದ ಆ ಆತ್ಮನನ್ನು ನೋಡಿದಾಗ ಇವನ ಮನಸ್ಸಿನಲ್ಲಿರುವ ಅಪೇಕ್ಷೆಗಳೆಲ್ಲವೂ ಹೊರಟು ಹೋದರೆ ಆಗ್ಗ ಇವನು ಸಾವುನೋವುಗಳನ್ನು ಕಳೆದುಕೊಂಡವನಾಗಿ ಕ್ಷೇಮವನ್ನು ಹೊಂದುತ್ತಾನೆ.

೩೬. ಸಮಾಧಿಯಲ್ಲಿ ಪ್ರಾಣಿಗಳು ಬೇರೆ ಬೇರೆಯಾಗಿ ಕಾಣುತ್ತಿದ್ದುವು ಒಂದಾಗಿ ಕಂಡು ಬಂದರೆ ಅದು ಮತ್ತೆ ವಿಸ್ತಾರವಾಗುವುದಾಗಿಯೂ ಕಂಡುಬಂದರೆ ಆಗ ತಾನು ಬ್ರಹ್ಮನಾಗುತ್ತಾನೆ.

೩೭. ಸರಿಯಾದ ರೀತಿಯಲ್ಲಿರುವ ಪರಮಾತ್ಮನೊಬ್ಬನನ್ನೇ ನೋಡಿ ಈ ಪ್ರಪಂಚವೆಲ್ಲವೂ ಮಾಯೆಯಿಂದ ಕೂಡಿದುದೆಂದು ಯಾವಾಗ ತಿಳಿಯುತ್ತಾನೆಯೋ ಆಗ ಸುಖಿಯಾಗುತ್ತಾನೆ.

**ಯದಾ ಜನ್ಮಜರಾದುಃಖವ್ಯಾಧೀನಾಮೇಕಭೇಷಜಂ ।**
**ಕೇವಲಂ ಬ್ರಹ್ಮವಿಜ್ಞಾನಂ ಜಾಯತೇಸೌ ತದಾ ಶಿವಃ ॥ ೩೮ ॥**

**ಯಥಾ ನದೀನದಾಲೋಕೇ ಸಾಗರೇಣೈಕತಾಂ ಯಯುಃ ।**
**ತದ್ವದಾತ್ಮಾಕ್ಷರೇಣಾಸೌ ನಿಷ್ಕಲೇನೈಕತಾಂ ವ್ರಜೇತ್ ॥ ೩೯ ॥**

**ತಸ್ಮಾದ್ವಿಜ್ಞಾನಮೇವಾಸ್ತಿ ನ ಪ್ರಪಂಚೋ ನ ಸಂಸ್ಥಿತಿಃ ।**
**ಅಜ್ಞಾನೇನಾವೃತಂ ಲೋಕೇ ವಿಜ್ಞಾನಂ ತೇನ ಮುಹ್ಯತಿ ॥ ೪೦ ॥**

**ತತ್ ಜ್ಞಾನಂ ನಿರ್ಮಲಂ ಸೂಕ್ಷ್ಮಂ ನಿರ್ವಿಕಲ್ಪಂ ಯದವ್ಯಯಂ ।**
**ಅಜ್ಞಾನಮಿತಿ ತತ್ಸರ್ವಂ ವಿಜ್ಞಾನಮಿತಿ ಮೇ ಮತಂ ॥ ೪೧ ॥**

೩೮. ಹುಟ್ಟು, ಸಾವು, ಮುಪ್ಪು, ದುಃಖ, ರೋಗಗಳಿಗೆ ಒಂದೇ ಒಂದು ಔಷಧಿ ರೂಪವಾದ ಕೇವಲ ಬ್ರಹ್ಮಜ್ಞಾನವು ಉಂಟಾದಾಗ ಇವನಿಗೆ ಕ್ಷೇಮವಾಗುತ್ತದೆ. ಇವನೇ ಆ ಬ್ರಹ್ಮನೂ ಆಗುತ್ತಾನೆ.

೩೯. ನದಿಗಳೂ, ನದಗಳೂ ಬೇರೆಬೇರೆಯಾಗಿ ಹರಿಯುತ್ತಿದ್ದು ಸಮುದ್ರಕ್ಕೆ ಹೋಗಿ ಸೇರಿದಮೇಲೆ ಹೇಗೆ ಒಂದಾಗುತ್ತವೆಯೋ ಹಾಗೆಯೇ ಆತ್ಮನು ಆತ್ಮನೆಂದೆನಿಸಿಕೊಳ್ಳುವ ಕಲೆಯೊಡನೆ ಸೇರಿ ಒಂದೇ ಆಗುತ್ತಾನೆ.

೪೦. ಆದುದರಿಂದ ಲೋಕದಲ್ಲಿ ವಿಜ್ಞಾನ ಸ್ವರೂಪನಾದ ಆತ್ಮವು ಒಂದೇ ಇರುವುದು. ಪ್ರಪಂಚವಾಗಲಿ, ಅದರ ಅಸ್ತಿತ್ವವಾಗಲಿ ಇರುವುದಿಲ್ಲ. ಲೋಕವು ಅಜ್ಞಾನದಿಂದ ಕೂಡಿರುವುದರಿಂದ ವಿಜ್ಞಾನವು ಅದರಿಂದ ಗೊತ್ತಾಗದೆ ಹೋಗುತ್ತವೆ ಬೇರೆಯಾಗಿಯೂ ತೋರುತ್ತದೆ.

೪೧. ಆ ವಿಜ್ಞಾನವು ನಿರ್ಮಲವಾದುದು, ಸೂಕ್ಷ್ಮವಾದುದು, ವಿಕಲ್ಪವಿಲ್ಲದ್ದು, ನಾಶರಹಿತವಾದುದು, ಅಜ್ಞಾನವೆಂದು ಹೇಳುವುದೆಲ್ಲವೂ ವಿಜ್ಞಾನದಿಂದ ಕೂಡಿದೆ. ಅದರಲ್ಲಿ ತಿಳಿದು ವರ್ತಿಸಬೇಕು ಎಂಬುದೇ ನನ್ನ ಅಭಿಪ್ರಾಯ.

**ಏತತ್ತೇ ಪರಮಂ ಸಾಂಖ್ಯಂ ಭಾಷಿತಂ ಜ್ಞಾನಮುತ್ತಮಂ ।**
**ಸರ್ವವೇದಾಂತಸಾರಂ ಹಿ ಯೋಗಸ್ತತ್ರೈಕಚಿತ್ತತಾ ॥ ೪೨ ॥**

**ಯೋಗಾತ್ಸಂಜಾಯತೇ ಜ್ಞಾನಂ ಜ್ಞಾನಾದ್ಯೋಗಃ ಪ್ರಜಾಯತೇ ।**
**ಯೋಗಜ್ಞಾನಾಭಿಯುಕ್ತಸ್ಯ ನಾವಾಪ್ಯಂ ವಿದ್ಯತೇ ಕ್ವಚಿತ್ ॥ ೪೩ ॥**

**ಯದೇವ ಯೋಗಿನೋ ಯಾಂತಿ ಸಾಂಖ್ಯಂ ತದಭಿಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ತತ್ವವಿತ್ ॥ ೪೪ ॥**

**ಅನ್ಯೇ ಚ ಯೋಗಿನೋ ವತ್ಸ ಐಶ್ವರ್ಯಾಸಕ್ತ ಚೇತಸಃ ।**
**ಮಜ್ಜಂತಿ ತತ್ರ ತತ್ರೈವ ಸತ್ವಾತ್ಮೈಕ್ಯ ಇತಿ ಶ್ರುತಿಃ ॥ ೪೫ ॥**

**ಯತ್ತತ್ಸರ್ವಗತಂ ದಿವ್ಯಮೈಶ್ವರ್ಯಮಚಲಂ ಮಹತ್ ।**
**ಜ್ಞಾನಯೋಗಾಭಿಯುಕ್ತಸ್ತು ದೇಹಾಂತೇ ತದವಾಪ್ನುಯಾತ್ ॥ ೪೬ ॥**

---

೪೨. ಇದೇ ಸಾಂಖ್ಯ ಶಾಸ್ತ್ರವು ಹೇಳಿರುವುದು, ಉತ್ತಮವಾದ ಜ್ಞಾನವು, ಇದೇ ಸರ್ವವೇದಾಂತ ಸಾರವು, ಯೋಗವೆಂದರೆ ಮನಸ್ಸನ್ನು ಒಂದೇ ವಿಷಯದಲ್ಲಿಟ್ಟು ಕೊಂಡಿರುವುದು.

೪೩. ಯೋಗಾಭ್ಯಾಸದಿಂದ ಜ್ಞಾನ ಉಂಟಾಗುತ್ತದೆ, ಜ್ಞಾನದಿಂದಲೇ ಯೋಗವೂ ಉಂಟಾಗುವುದು, ಯೋಗವೂ ಜ್ಞಾನವೂ ಉಂಟಾದವನಿಗೆ ಲೋಕದಲ್ಲಿ ಸಿಕ್ಕದಿರುವುದು ಯಾವುದೂ ಇಲ್ಲ.

೪೪. ಯೋಗಿಗಳು ಯೋಗಾಭ್ಯಾಸದಿಂದ ಯಾವುದನ್ನು ತಿಳಿಯುತ್ತಾರೆಯೋ ಅದೇ ಸಾಂಖ್ಯವು ಎಂದು ತಿಳಿ. ಸಾಂಖ್ಯವೂ ಯೋಗವೂ ಒಂದೆಂದು ತಿಳಿಯುವವನೇ ತತ್ವವನ್ನು ತಿಳಿದವನಾಗುತ್ತಾನೆ.

೪೫. ಎಲೈ ಹನುಮಂತನೆ! ಕೆಲವು ಜನ ಯೋಗಿಗಳು ಐಶ್ವರ್ಯದಲ್ಲಿ ಮನಸ್ಸನ್ನಿಟ್ಟು ಯೋಗಾಭ್ಯಾಸದ ಪರಮಕಾಷ್ಠತೆಯನ್ನು ತಿಳಿದಿದ್ದರೂ ಮಧ್ಯಮಧ್ಯದಲ್ಲಿಯೇ ತಮ್ಮತಮ್ಮ ಸುಖವನ್ನು ಅನುಭವಿಸುವುದಕ್ಕೋಸ್ಕರ ಅಲ್ಲಲ್ಲಿಯೇ ಕೆಲವು ವಿಷಯಗಳನ್ನು ಅನುಭವಿಸುತ್ತಾರೆ. ಅದೂ ಕೂಡ ಆತ್ಮೈಕ್ಯವು ಎಂದೆನಿಸಿಕೊಳ್ಳುತ್ತದೆ.

೪೬. ಎಲ್ಲಾ ಕಡೆಯಲ್ಲಿಯೂ ಇರುತ್ತಿರುವ ಆ ಪರಮಾತ್ಮನೇ ಐಶ್ವರ್ಯವು, ಅದೇ ಅಚಲವು, ಅದೇ ಮಹತ್ತಾದ ವಸ್ತುವು, ಜ್ಞಾನಯೋಗಗಳಿಂದ ಕೂಡಿದವನು ಪ್ರಾಣವನ್ನು ಬಿಟ್ಟಮೇಲೆ ಆ ಆತ್ಮನನ್ನು ಹೊಂದುತ್ತಾನೆ.

ಏಷ ಆತ್ಮಾಹಮವ್ಯಕ್ತೋ ಮಾಯಾವೀ ಪರಮೇಶ್ವರಃ ।
ಕೀರ್ತಿತಸ್ಸರ್ವವೇದೇಷು ಸರ್ವಾತ್ಮಾ ಸರ್ವತೋ ಮುಖಃ ॥ ೪೭ ॥

ಸರ್ವಕಾಮಃ ಸರ್ವರಸಃ ಸರ್ವಗಂಧೋಽಜರೋಮರಃ ।
ಸರ್ವತಃ ಪಾಣಿಪಾದೋಽಹಮಂತರ್ಯಾಮೀ ಸನಾತನಃ ॥ ೪೮ ॥

ಅಪಾಣಿಪಾದೋ ಜವನೋಽಗೃಹೀತೋ ಹೃದಿ ಸಂಸ್ಥಿತಃ ।
ಅಚಕ್ಷುರಪಿ ಪಶ್ಯಾಮಿ ತಥಾಽಕರ್ಣಃ ಶೃಣೋಮ್ಯಹಂ ॥ ೪೯ ॥

ವೇದಾಹಂ ಸರ್ವಮೇವೇದಂ ನ ಮಾಂ ಜಾನಾತಿ ಕಶ್ಚನ ।
ಪ್ರಾಹುರ್ಮಹಾಂತಂ ಪುರುಷಂ ಮಾಮೇಕಂ ತತ್ವದರ್ಶಿನಃ ॥ ೫೦ ॥

ನಿರ್ಗುಣಾಮಲರೂಪಸ್ಯ ಯತ್ತದೈಶ್ವರ್ಯಮುತ್ತಮಂ ।
ಯನ್ನ ದೇವಾ ವಿ ಜಾನಂತಿ ಮೋಹಿತಾ ಮಾಯಯಾ ಮಮ ॥ ೫೧ ॥

---

೪೭.೪೮. ಆ ಆತ್ಮನೆ ನಾನು, ಸರಿಯಾಗಿ ತಿಳಿಯಲಸಾಧ್ಯನು, ಮಾಯಾವಿಯು, ಪರಮೇಶ್ವರನು. ಎಲ್ಲ ವೇದಗಳಲ್ಲಿಯೂ ಹೇಳಲ್ಪಟ್ಟಿರುವವನು, ಎಲ್ಲಾ ಕಡೆಗಳಲ್ಲಿಯೂ ಇರುವವನು, ಎಲ್ಲಾ ಕಡೆಗೂ ಮುಖವುಳ್ಳವನು, ಕಾಲು ಕೈಗಳು ಎಲ್ಲಾ ಕಡೆಗೂ ಇವೆ, ಎಲ್ಲಾ ಪ್ರಾಣಿಗಳಲ್ಲಿಯೂ ಇರುತ್ತೇನೆ, ಸನಾತನನು.

೪೯. ಕೈಕಾಲುಗಳಿಲ್ಲದಿದ್ದರೂ ವೇಗವುಳ್ಳವನು, ಹಿಡಿದುಕೊಳ್ಳಬಲ್ಲವನು, ಹಿಡಿಯುವುದಕ್ಕೆ ಆಗದಿದ್ದರೂ ಹೃದಯದಲ್ಲಿಯೇ ಇರತಕ್ಕವನು, ಕಣ್ಣುಗಳಿಲ್ಲದಿದ್ದರೂ ಕೂಡ ನೋಡುತ್ತೇನೆ, ಕಿವಿಗಳಿಲ್ಲದಿದ್ದರೂ ಕೇಳುತ್ತೇನೆ.

೫೦. ಪ್ರಪಂಚದಲ್ಲಿರುವ ಎಲ್ಲವನ್ನೂ ನಾನು ತಿಳಿದಿದ್ದೇನೆ, ಆದರೆ ನನ್ನನ್ನು ಯಾವನೂ ತಿಳಿಯನು, ತತ್ವದರ್ಶಿಗಳು ನನ್ನನ್ನು ಮಹಾ ಪುರುಷನನ್ನಾಗಿ ಹೇಳುತ್ತಾರೆ.

೫೧. ನಿರ್ಗುಣನು, ಪವಿತ್ರರೂಪವುಳ್ಳವನೂ, ಆತ್ಮನಿಗೆ ಇರುವ ಐಶ್ವರ್ಯವನ್ನು ದೇವತೆಗಳೂ ಕೂಡ ನನ್ನ ಮಾಯೆಯಿಂದ ಮೋಹಿತರಾಗಿ ತಿಳಿಯಲಾರರು.

ಯನ್ಮೇ ಗುಹ್ಯತಮಂ ದೇಹಂ ಸರ್ವಗಂ ತತ್ವದರ್ಶಿನಃ ।
ಪ್ರವಿಷ್ಟಾ ಮಮ ಸಾಯುಜ್ಯಂ ಲಭಂತೇ ಯೋಗಿನೋಽವ್ಯಯಃ ॥ ೫೨ ॥

ಯೇಷಾಂ ಹಿ ನ ಸಮಾಪನ್ನಾ ಮಾಯಾ ವೈ ವಿಶ್ವರೂಪಿಣೀ ।
ಲಭಂತೇ ಪರಮಂ ಶುದ್ಧಂ ನಿರ್ವಾಣಂ ತೇ ಮಯಾ ಸಹ ॥ ೫೩ ॥

ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ಪ್ರಸಾದಾನ್ಮಮ ತೇ ವತ್ಸ ಏತದ್ವೇದಾನುಶಾಸನಂ ॥ ೫೪ ॥

ನಾಪುತ್ರ ಶಿಷ್ಯಯೋಗಿಭ್ಯೋ ದಾತವ್ಯಂ ಹನುಮನ್ ಕ್ವಚಿತ್ ।
ಯದುಕ್ತಮೇತದ್ವಿಜ್ಞಾನಂ ಸಾಂಖ್ಯಯೋಗಸಮಾಶ್ರಯಂ ॥ ೫೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಸಾಂಖ್ಯಯೋಗೋ ನಾಮ
ಏಕಾದಶಃ ಸರ್ಗಃ

೫೨. ಎಲ್ಲ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವ ನನ್ನ ಗುಟ್ಟಾದ ದೇಹವನ್ನು ತತ್ವವನ್ನು ಬಲ್ಲ ವಿದ್ವಾಂಸರು ಹೊಕ್ಕು ನನ್ನ ಸಾಯುಜ್ಯವನ್ನು ಹೊಂದುತ್ತಾರೆ. ಯೋಗಿಗಳೂ ಕೂಡ ನನ್ನ ಸಾಯುಜ್ಯವನ್ನು ಹೊಂದುತ್ತಾರೆ.

೫೩. ಈ ಪ್ರಪಂಚವನ್ನು ಆವರಿಸಿರುವ ಮಾಯೆಯು ಯಾರನ್ನು ಆವರಿಸಿರುವುದಿಲ್ಲವೋ ಅವರೆಲ್ಲರೂ ಶುದ್ಧವೂ, ಪರಮವೂ ಆದ ಆತ್ಮನನ್ನು ಹೊಂದುತ್ತಾರೆ. ನಾನೇ ಅದಾಗಿರುವುದರಿಂದ ನನ್ನಲ್ಲಿ ಸೇರುತ್ತಾರೆ.

೫೪. ಅವರು ನನ್ನೊಡನೆ ಸೇರಿದಮೇಲೆ ಕೋಟಿಕಲ್ಪಗಳವರೆಗೂ ನನ್ನ ಅನುಗ್ರಹದಿಂದ ಮತ್ತೆ ಹುಟ್ಟುವುದಿಲ್ಲ. ಇದೇ ವೇದದಲ್ಲಿಯೂ ಹೇಳಿದೆ.

ಮಗ, ಶಿಷ್ಯ, ಯೋಗಿಗಳನ್ನು ಬಿಟ್ಟು ಮತ್ತಾರಿಗೂ ಇದನ್ನು ಹೇಳಕೂಡದು ಈ ವಿಜ್ಞಾನವು ಸಾಂಖ್ಯಯೋಗಗಳನ್ನು ಆಶ್ರಯಿಸಿಕೊಂಡಿದೆ.

ಇಂತು ಶ್ರೀ ವಾಲ್ಮೀಕಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಸಾಂಖ್ಯಯೋಗವೆಂಬ
ಹನ್ನೊಂದನೆಯ ಸರ್ಗವು.

ಶ್ರೀಃ

॥ ಶ್ರೀಗುರುಭ್ಯೋ ನಮಃ ॥

---

# ಅದ್ಭುತರಾಮಾಯಣೇ

## ದ್ವಾದಶಃ ಸರ್ಗಃ



**ಪುರಾ ರಾಮಃ ಪ್ರವಚನಮುವಾಚ ದ್ವಿಜಪುಂಗವ ।**
**ಅವ್ಯಕ್ತಾದಭವತ್ಕಾಲಃ ಪ್ರಧಾನಂ ಪುರುಷಃ ಪರಃ ॥ ೧ ॥**

**ತೇಭ್ಯಃ ಸರ್ವಮಿದಂ ಜಾತಂ ತಸ್ಮಾತ್ಸರ್ವಮಹಂ ಜಗತ್ ।**
**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿ ಶಿರೋಮುಖಂ ॥ ೨ ॥**

**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ।**
**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ॥ ೩ ॥**

೧. ಎಲೈ ಭರದ್ವಾಜನೆ! ಹಿಂದೆ ರಾಮನು ಈ ರೀತಿಯಾಗಿ ಹನುಮಂತನಿಗೆ ಹೇಳಿದನು. ಅವ್ಯಕ್ತನಾದ ಆ ಆತ್ಮನಿಂದ ಕಾಲವೂ, ಪ್ರಧಾನಪುರುಷನೂ ಉಂಟಾದರು.

೨. ಆ ಅಕಾಲ, ಪ್ರಧಾನ ಪುರುಷ ಈ ಮೂವರಿಂದ ಈ ಜಗತ್ತೆಲ್ಲವೂ ಉಂಟಾಯಿತು. ಆ ಜಗದ್ರೂಪನಾದ ನನಗೆ ಕೈಕಾಲುಗಳು ಎಲ್ಲಾ ಕಡೆಗೂ ಇರುತ್ತವೆ. ಮತ್ತು ಕಣ್ಣು ತಲೆ ಮುಖಗಳು ಎಲ್ಲಾ ಕಡೆಗೂ ಇರುತ್ತವೆ.

೩. ಎಲ್ಲಾ ಕಡೆಗೂ ಕಿವಿಗಳಿರುತ್ತವೆ. ಪ್ರಪಂಚದಲ್ಲಿ ಎಲ್ಲವನ್ನೂ ಆವರಿಸಿ ಕೊಂಡು ಇರುತ್ತೇನೆ. ಎಲ್ಲ ಇಂದ್ರಿಯಗಳ ಗುಣಗಳೂ ಇವೆ. ಆದರೆ ಇಂದ್ರಿಯ ಗಳು ಮಾತ್ರ ಇರುವುದಿಲ್ಲ.

**ಸರ್ವಾಧಾರಂ ಸ್ಥಿರಾನಂದಮವ್ಯಕ್ತಂ ದ್ವೈತವರ್ಜಿತಂ |**
**ಸರ್ವೋಪಮಾನರಹಿತಂ ಪ್ರಮಾಣಾತೀತಗೋಚರಂ || ೪ ||**

**ನಿರ್ವಿಕಲ್ಪಂ ನಿರಾಭಾಸಂ ಸರ್ವಾಭಾಸಂ ಪರಾಮೃತಂ |**
**ಅಭಿನ್ನಂ ಭಿನ್ನಸಂಸ್ಥಾನಂ ಶಾಶ್ವತಂ ಧ್ರುವಮವ್ಯಯಂ || ೫ ||**

**ನಿರ್ಗುಣಂ ಪರಮಂ ವ್ಯೋಮ ತಜ್ಜ್ಞಾನಂ ಸೂರಯೋ ವಿದುಃ |**
**ಸ ಆತ್ಮಾ ಸರ್ವಭೂತಾನಾಂ ಸ ಬಾಹ್ಯಾಭ್ಯಂತರಃ ಪರಃ || ೬ ||**

**ಸೋಽಹಂ ಸರ್ವತ್ರಗಃ ಶಾಂತಃ ಜ್ಞಾನಾತ್ಮಾ ಪರಮೇಶ್ವರಃ |**
**ಮಯಾ ತತಮಿದಂ ವಿಶ್ವಂ ಜಗದವ್ಯಕ್ತರೂಪಿಣಾ || ೭ ||**

**ಮತ್ ಸ್ಥಾನಿ ಸರ್ವಭೂತಾನಿ ಯಸ್ತಂ ವೇದ ಸ ವೇದವಿತ್ |**
**ಪ್ರಧಾನಂ ಪುರುಷಂ ಚೈವ ತತ್ವದ್ವಯಮುದಾಹೃತಂ || ೮ ||**

---

೪–೫. ಆ ನಾನು ಸರ್ವಕ್ಕೂ ಆಧಾರನು. ಸ್ಥಿರವಾದ ಆನಂದವುಳ್ಳವನು. ವ್ಯಕ್ತನಾದವನು, ಎರಡಾಗಿರದೆ ಒಂದೇ ಆಗಿರುವವನು, ಉಪಮಾನಗಳೊಂದೂ ಇಲ್ಲದವನು, ಪ್ರಮಾಣಗಳಿಗೆ ಸಿಕ್ಕದವನು, ವಿಕಲ್ಪವಿಲ್ಲದವನು, ಆಭಾಸರೂಪ ನಾಗದವನು, ಎಲ್ಲದರಂತೆಯೂ ಇರುವವನು, ಉತ್ತಮವಾದ ಅಮೃತಪ್ರಾಯನು, ಭೇದವನ್ನು ಹೊಂದದವನು, ಬೇರೆಬೇರೆ ಜಾಗದಲ್ಲಿರತಕ್ಕವನು, ಶಾಶ್ವತನು, ಧ್ರುವನು, ನಾಶರಹಿತನು.

೬. ಆ ಆತ್ಮವು ಗುಣಗಳಿಲ್ಲದ್ದು, ಉತ್ಕೃಷ್ಟವಾದುದು, ಆಕಾಶದಂತೆ ನಿರ್ಲಿಪ್ತವಾದುದು, ಸರ್ವಭೂತಗಳಲ್ಲಿಯೂ ಇರತಕ್ಕದ್ದು, ಒಳಗೆ ಹೊರಗೆ ಎಲ್ಲಾ ಕಡೆಯಲ್ಲಿಯೂ ಕೂಡ ಇರುತ್ತದೆ, ಎಂಬದಾಗಿ ಜ್ಞಾನಿಗಳು ತಿಳಿದಿರುತ್ತಾರೆ.

೭. ಆ ನಾನು ಎಲ್ಲಾ ಕಡೆಗೂ ಓಡಾಡಿಕೊಂಡಿರುತ್ತೇನೆ, ಶಾಂತನು, ಜ್ಞಾನಸ್ವರೂಪನು, ಪರಮೇಶ್ವರನು, ಅವ್ಯಕ್ತರೂಪಿಯಾದ ನನ್ನಿಂದ ಈ ಪ್ರಪಂಚವು ಎಲ್ಲಾಕೂಡಿಕೊಂಡಿದೆ.

೮. ಭೂತಗಳೆಲ್ಲವೂ ನನ್ನಲ್ಲಿಯೇ ಇರುವುವು. ಆ ರೀತಿಯಾದ ನನ್ನನ್ನು ತಿಳಿದವನೇ ವೇದವನ್ನು ಬಲ್ಲವನಾಗುತ್ತಾನೆ, ಪ್ರಧಾನ ತತ್ವವೆಂದೂ, ಪುರುಷ ತತ್ವ ವೆಂದೂ ತತ್ವವು ಎರಡು ಬಗೆಯಾಗಿರುವುದು.

ತಯೋರನಾದಿರ್ನಿರ್ದಿಷ್ಟಃ ಕಾಲಃ ಸಂಯೋಜಕಃ ಪರಃ ।
ತ್ರಯಮೇತದನಾದ್ಯಂತಮವ್ಯಕ್ತೇ ಸಮವಸ್ಥಿತಂ ॥ ೯ ॥

ತದಾತ್ಮಕಂ ತದನ್ಯತ್ ಸ್ಯಾತ್ ತದ್ರೂಪಂ ಮಾಮಕಂ ವಿದುಃ ।
ಮಹದಾದ್ಯಂ ವಿಶೇಷಾಂತಂ ಸಂಪ್ರಸೂತೇಽಖಿಲಂ ಜಗತ್ ॥ ೧೦ ॥

ಯಾ ಸಾ ಪ್ರಕೃತಿರುದ್ದಿಷ್ಟಾ ಮೋಹಿನೀ ಸರ್ವದೇಹಿನಾಂ ।
ಪುರುಷಃ ಪ್ರಕೃತಿಸ್ಥೋಽಪಿ ಭುಂಕ್ತೇ ಯಃ ಪ್ರಾಕೃತಾನ್ ಗುಣಾನ್ ॥ ೧೧ ॥

ಅಹಂಕಾರಾವಿವಿಕ್ತತ್ವಾತ್ ಪ್ರೋಚ್ಯತೇ ಪಂಚವಿಂಶಕಃ ।
ಆದ್ಯೋ ವಿಕಾರಃ ಪ್ರಕೃತಿಃ ಮಹಾನಾತ್ಮೇತಿ ಕಥ್ಯತೇ ॥ ೧೨ ॥

---

೯. ಈ ಪ್ರಧಾನತತ್ವಕ್ಕೂ, ಪುರುಷ ತತ್ವಕ್ಕೂ ಮೊದಲನೆಯದು ಕಾಲವು, ಅದು ಅನಾದಿಯಾದುದು. ಆ ಪ್ರಧಾನ ತತ್ವವನ್ನೂ, ಪುರುಷ ತತ್ವವನ್ನೂ ಆ ಕಾಲವು ಸೇರಿಸುತ್ತದೆ. ಪ್ರಧಾನತತ್ವ, ಪುರುಷತತ್ವ, ಕಾಲ, ಈ ಮೂರು ಕೊನೆ ಮೊದಲಿಲ್ಲದುವು. ಈ ಮೂರು ಅವ್ಯಕ್ತದಲ್ಲಿರುತ್ತವೆ.

೧೦. ಈ ಆತ್ಮವು ಆ ಮೂವರ ರೂಪವಾದರೂ ಬೇರೆಯಾಗಿರುತ್ತದೆ. ಅದನ್ನೇ ನನ್ನ ರೂಪವೆಂದು ಹೇಳುತ್ತಾರೆ. ಈ ಪ್ರಪಂಚವು ಮಹತ್ತಿನಿಂದ ಮೊದಲು ಮಾಡಿಕೊಂಡು ವಿಶೇಷಾಂತದ ವರೆಗೂ ಉಂಟಾಗಿರುತ್ತದೆ.

೧೧. ದೇಹವನ್ನು ಹೊಂದಿದ ಪ್ರಾಣಿಗಳೆಲ್ಲವನ್ನೂ ಅಜ್ಞಾನದಲ್ಲಿ ಕೆಡಗುವ ಪ್ರಕೃತಿ ಎಂಬುದೊಂದಿದೆಯಷ್ಟೆ! ಇದರಿಂದ ಪುರುಷನು ಪ್ರಕೃತಿಯಲ್ಲಿದ್ದುಕೊಂಡು ಆ ಪ್ರಕೃತಿಯ ಗುಣಗಳೆಲ್ಲವನ್ನೂ ಅನುಭವಿಸುತ್ತಾನೆ.

೧೨. ಆ ಪುರುಷನು ಅಹಂಕಾರದಿಂದ ಬಿಡಲ್ಪಟ್ಟಿರುವುದರಿಂದ ಅವನು ಇಪ್ಪತ್ತೈದು ರೂಪವಾದ ತತ್ವಕ್ಕೆ ಸೇರಿದವನೆಂದು ಹೇಳುತ್ತಾರೆ. ಆದಿಯ ವಿಕಾರವನ್ನು ಪ್ರಕೃತಿಯೆಂದೂ. ಮಹತ್ತೆಂದೂ, ಆತ್ಮವೆಂದೂ ಹೇಳುತ್ತಾರೆ.

ವಿಜ್ಞಾನ ಶಕ್ತಿರ್ವಿಜ್ಞಾನಾತ್ ಅಹಂಕಾರಸ್ತದುತ್ಥಿತಃ ।
ಏಕ ಏವ ಮಹಾನಾತ್ಮಾ ಸೋಽಹಂಕಾರೋಽಭಿಧೀಯತೇ ॥ ೧೩ ॥

ಸ ಜೀವಃ ಸೋಽಂತರಾತ್ಮೇತಿ ಗೀಯತೇ ತತ್ವಚಿಂತಕೈಃ ।
ತೇನ ವೇದಯತೇ ಸರ್ವಂ ಸುಖಂ ದುಃಖಂ ಚ ಜನ್ಮಸು ॥ ೧೪ ॥

ಸ ವಿಜ್ಞಾನಾತ್ಮಕಸ್ತಸ್ಯ ಮನಃ ಸ್ಯಾದುಪಕಾರಕಂ ।
ತೇನಾ ವಿವೇಕತಸ್ತಸ್ಮಾತ್ಸಂಸಾರಃ ಪುರುಷಸ್ಯ ತು ॥ ೧೫ ॥

ಸ ಚಾವಿವೇಕಃ ಪ್ರಕೃತೌ ಸಂಗಾತ್ಕಾಲೇನ ಸೋಽಭವತ್ ।
ಕಾಲಃ ಸೃಜತಿಭೂತಾನಿ ಕಾಲಃ ಸಂಹರತೇ ಪ್ರಜಾಃ ॥ ೧೬ ॥

ಸರ್ವೇ ಕಾಲಸ್ಯವಶಗಾ ನ ಕಾಲಃ ಕಸ್ಯಚಿದ್ವಶೇ ।
ಸೋಽಂತರಾ ಸರ್ವಮೇವೇದಂ ನಿಯಚ್ಛತಿ ಸನಾತನಃ ॥ ೧೭ ॥

---

೧೩. ವಿಜ್ಞಾನದಿಂದ ವಿಜ್ಞಾನ ಶಕ್ತಿಯು ಹುಟ್ಟುತ್ತದೆ. ಆ ವಿಜ್ಞಾನ ಶಕ್ತಿಯಿಂದ ಅಹಂಕಾರವು ಹುಟ್ಟುತ್ತದೆ. ಆತ್ಮವು ಮಹಾ ತತ್ವವೆಂದೆನಿಸುತ್ತದೆ. ಅದೇ ಅಹಂಕಾರವೆಂದೆನಿಸಿಕೊಳ್ಳುತ್ತದೆ.

೧೪. ಆ ಅಹಂಕಾರದಿಂದ ಕೂಡಿದ ಆತ್ಮವೇ ಜೀವನೆಂದೂ ಅಂತರಾತ್ಮವೆಂದೂ ಎನ್ನಿಸಿಕೊಳ್ಳುತ್ತದೆ. ಈ ಜೀವದಿಂದಲೇ ಜನ್ಮವನ್ನು ಹೊಂದಿದಾಗ ಸುಖ ದುಃಖಗಳನ್ನು ತಿಳಿಯುತ್ತಾನೆ.

೧೫. ಆ ಜೀವಾತ್ಮನೇ ವಿಜ್ಞಾನ ಸ್ವರೂಪನು. ಇವನಿಗೆ ಮನಸ್ಸು ಸಹಾಯ ಮಾಡುತ್ತದೆ. ಆ ಮನಸ್ಸಿನ ಅವಿವೇಕದಿಂದ ಈ ಪುರುಷನಿಗೆ ಸಂಸಾರವು ಬರುತ್ತದೆ.

೧೬–೧೭. ಆ ಅವಿವೇಕವು ಪ್ರಕೃತಿ ರೂಪವಾದ ಮಾಯೆಯಲ್ಲಿ ಕಾಲಾನುಕಾಲಕ್ಕೆ ಸೇರಿಹೋಗುತ್ತದೆ. ಕಾಲವೇ ಪ್ರಾಣಿಗಳನ್ನು ಸೃಷ್ಟಿಸುತ್ತದೆ. ಕಾಲವೇ ಪ್ರಾಣಿಗಳನ್ನು ನಾಶಮಾಡುತ್ತದೆ. ಎಲ್ಲವೂ ಕಾಲಕ್ಕೆ ಅಧೀನವಾಗಿರುತ್ತವೆ. ಆ ಕಾಲವು ಯಾವುದಕ್ಕೂ ಅಧೀನವಲ್ಲ. ಆ ಸನಾತನ ಪುರುಷನು ಆಕಾರವಿಲ್ಲದೇನೆ ಎಲ್ಲವನ್ನೂ ತನ್ನ ಆಪ್ಪಣೆಯಂತೆ ನಡೆಸಬಲ್ಲನು.

ಪ್ರೋಚ್ಯತೇ ಭಗವಾನ್ ಪ್ರಾಣಃ ಸರ್ವಜ್ಞಃ ಪುರುಷಃ ಪರಃ ।
ಸರ್ವೇಂದ್ರಿಯೇಭ್ಯಃ ಪರಮಂ ಮನಃ ಪ್ರಾಹುರ್ಮನೀಷಿಣಃ ॥ ೧೮ ॥

ಮನಸಶ್ಚಾಪ್ಯಹಂಕಾರಮಹಂಕಾರಾನ್ಮಹಾನ್ ಪರಃ ।
ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ॥ ೧೯ ॥

ಪುರುಷಾತ್ ಭಗವಾನ್ಪ್ರಾಣಃ ತಸ್ಯ ಸರ್ವಮಿದಂ ಜಗತ್ ।
ಪ್ರಾಣಾತ್ಪರತರಂ ವ್ಯೋಮ ವ್ಯೋಮಾತೀತೋಽಗ್ನಿರೀಶ್ವರಃ ॥ ೨೦ ॥

ಸೋಽಹಂ ಸರ್ವತ್ರಗಶ್ಶಾಂತೋ ಜ್ಞಾನಾತ್ಮಾ ಪರಮೇಶ್ವರಃ ।
ನಾಸ್ತಿ ಮತ್ಪರಮಂ ಭೂತಂ ಮಾಂ ವಿಜ್ಞಾಯ ವಿಮುಚ್ಯತೇ ॥ ೨೧ ॥

ನಿತ್ಯಂ ಹಿ ನಾಸ್ತಿ ಜಗತಿ ಭೂತಂ ಸ್ಥಾವರಜಂಗಮಂ ।
ಋತೇ ಮಾಮೇಕಮವ್ಯಕ್ತಂ ವ್ಯೋಮರೂಪಂ ಮಹೇಶ್ವರ ॥ ೨೨ ॥

---

೧೮. ಆ ಪುರುಷನನ್ನೇ ಭಗವಂತನೆಂದೂ ಸರ್ವಜ್ಞನೆಂದೂ ಹೇಳುತ್ತೇವೆ. ಮತ್ತು ಎಲ್ಲಾ ಇಂದ್ರಿಯಗಳಿಗಿಂತಲೂ ಮೇಲಿನವನೆಂದೂ ಮನಸ್ಸೆಂದೂ ಹೇಳುತ್ತಾರೆ.

೧೯–೨೦. ಮನಸ್ಸಿನಿಂದ ಅಹಂಕಾರವೂ ಅಹಂಕಾರದಿಂದ ಮಹತ್ತ್ವವೂ, ಆ ಮಹತ್ತ್ವದಿಂದ ಅವ್ಯಕ್ತವೂ, ಅವ್ಯಕ್ತದಿಂದ ಪುರುಷನೂ, ಪುರುಷನಿಂದ ಪ್ರಾಣನೂ ಉಂಟಾಗುತ್ತಾರೆ. ಆ ಪ್ರಾಣಕ್ಕೆ ಈ ಜಗತ್ತೆಲ್ಲವೂ ಅಧೀನವಾಗಿದೆ. ಆ ಪ್ರಾಣಕ್ಕಿಂತಲೂ (ವಾಯುವಿಗಿಂತಲೂ) ಆಕಾಶವು ದೊಡ್ಡದು. ಆ ಆಕಾಶವನ್ನು ಮೀರಿದವನು (ಉತ್ಕೃಷ್ಟನು) ಅಗ್ನಿಯು.

೨೧. ಆ ಈಶ್ವರನಾದ ನಾನು ಎಲ್ಲಾ ಕಡೆಯಲ್ಲೂ ಇರುತ್ತೇನೆ. ನಾನು ಶಾಂತನು ಜ್ಞಾನಸ್ವರೂಪನು, ಪರಮೇಶ್ವರನು, ನನಗಿಂತಲೂ ಬೇರೆಯಾದ ಭೂತವೇ ಇಲ್ಲ. ನನ್ನನ್ನು ತಿಳಿಯುವುದರಿಂದಲೇ ಬಂಧವಿಮೋಚನೆಯಾಗುವುದು.

೨೨. ಸ್ಥಾವರ ಜಂಗಮಾತ್ಮಕವಾದ ಭೂತಗಳಲ್ಲಿ ನಿತ್ಯವಾದ ಪದಾರ್ಥಗಳು ಒಂದೂ ಇಲ್ಲವು. ನಾನೊಬ್ಬನೇ ನಿತ್ಯನು. ಆಕಾಶರೂಪವಾದ ನನ್ನನ್ನು ಬಿಟ್ಟರೆ ಮತ್ತಾವುದೂ ನಿತ್ಯವಾದುದಿಲ್ಲ.

**ಸೋಽಹಂ ಸೃಜಾಮಿ ಸಕಲಂ ಸಂಹರಾಮಿ ಸದಾ ಜಗತ್ ।**
**ಮಾಯಿಾ ಮಾಯಾಮಯೋ ದೇವಃ ಕಾಲೇನ ಸಹ ಸಂಗತಃ ॥ ೨೩ ॥**

**ಮತ್ಸನ್ನಿಧಾವೇಷ ಕಾಲಃ ಕರೋತಿ ಸಕಲಂ ಜಗತ್ ।**
**ನಿಯೋಜಯತ್ಯನಂತಾತ್ಮಾ ಹ್ಯೇತದ್ವೇದಾನುಶಾಸನಂ ॥ ೨೪ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ಉಪನಿಷತ್ಕಥನಂ ನಾಮ**
**ದ್ವಾದಶಃ ಸರ್ಗಃ**



---

೨೩. ಆ ನಾನೇ ಜಗತ್ತೆಲ್ಲವನ್ನೂ ಸೃಷ್ಟಿ ಮಾಡುತ್ತೇನೆ. ಮತ್ತು ನಾಶ ಮಾಡುತ್ತೇನೆ. ಮತ್ತು ಮಾಯೆಯನ್ನು ಮಾಡುವವನೂ, ಮಾಯೆಯಿಂದ ಕೂಡಿದವನೂ ಆಗಿ ಕಾಲದಿಂದಲೂ ಕೂಡಿಕೊಂಡಿರುವೆನು.

೨೪. ನನ್ನಲ್ಲಿದ್ದುಕೊಂಡು ನನ್ನ ಅಪ್ಪಣೆಯಂತೆ ಈ ಕಾಲವು ಎಲ್ಲ ಜಗತನ್ನು ಸೃಷ್ಟಿಸುತ್ತಾನೆ, ಅವೆಲ್ಲವನ್ನೂ ಯಾವ ರೀತಿಯಲ್ಲಿರಬೇಕೋ ಹಾಗೆ ಅಪ್ಪಣೆ ಮಾಡುತ್ತಾನೆ, ಆ ಕಾಲನು ಅನಂತನು, ಇದನ್ನೇ ವೇದಗಳೂ ಹೇಳುತ್ತವೆ.

ಇಂತು ಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಉಪನಿಷತ್ಕಥನವೆಂಬ
ಹನ್ನೆರಡನೆಯ ಅಧ್ಯಾಯವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ಅಥ ತ್ರಯೋದಶಃ ಸರ್ಗಃ

ವಕ್ಷ್ಯೇ ಸಮಾಹಿತಮನಾಃ ಶೃಣುಷ್ವ ಪವನಾತ್ಮಜ ।
ಯೇನೇದಂ ಲಭ್ಯತೇ ರೂಪಂ ಯೇನೇದಂ ಸಂಪ್ರವರ್ತತೇ ॥ ೧ ॥

ನಾಹಂ ತಪೋಭಿರ್ವಿವಿಧೈರ್ನದಾನೇನ ನಚೇಜ್ಯಯಾ ।
ಶಕ್ಯೋ ಹಿ ಪುರುಷೈರ್ಜ್ಞಾತು ಮೃತೇ ಭಕ್ತಿಮನುತ್ತಮಂ ॥ ೨ ॥

ಅಹಂ ಹಿ ಸರ್ವಭಾವಾನಾಮಂತಸ್ತಿಷ್ಠಾಮಿ ಸರ್ವಗಃ ।
ಮಾಂ ಸರ್ವಸಾಕ್ಷಿಣಂ ಲೋಕಾ ನ ಜಾನಂತಿ ಪ್ಲವಂಗಮ ॥ ೩ ॥

### ಹದಿಮೂರನೆಯಸರ್ಗವು

೧. ಎಲೈ ಹನುಮಂತನೇ! ಈ ರೂಪವು ಬರುವಿಕೆಯನ್ನೂ, ಅದನ್ನು ಒದಗಿಸುವ ರೀತಿಯನ್ನೂ ಹೇಳುತ್ತೇನೆ, ಸಾವಕಾಶವಾಗಿ ಕೇಳು.

೨. ತಪಸ್ಸಿನಿಂದಾಗಲಿ, ದಾನಗಳಿಂದಾಗಲಿ, ಯಾಗದಿಂದಾಗಲಿ, ಪೂಜೆಯಿಂದಾಗಲಿ, ಜನರು ನನ್ನನ್ನು ತಿಳಿಯಲಾರರು. ಆದರೆ ಉತ್ತಮವಾದ ಭಕ್ತಿಯೊಂದರಿಂದ ಮಾತ್ರ ತಿಳಿಯ ಬಲ್ಲರು.

೩. ಎಲೈ ಹನುಮಂತನೇ! ನಾನು ಎಲ್ಲ ಭಾಗಗಳಲ್ಲಿಯೂ ಒಳಗೆ ಸೇರಿಕೊಂಡಿದ್ದೇನೆ. ನಾನು ಎಲ್ಲಕ್ಕೂ ಸಾಕ್ಷಿಯಾಗಿದ್ದೇನೆ. ಲೋಕವು ನಾನು ಹೀಗಿರುವುದನ್ನು ತಿಳಿಯುವುದಿಲ್ಲ.

ಯಸ್ಯಾಂತರಾ ಸರ್ವಮಿದಂ ಯೋಽಹಿ ಸರ್ವಾಂತರಃ ಪರಃ ।
ಸೋಽಹಂ ಧಾತಾ ವಿಧಾತಾ ಚ ಲೋಕೇಽಸ್ಮಿನ್ ವಿಶ್ವತೋಮುಖಃ ॥ ೪ ॥

ನ ಮಾಂ ಪಶ್ಯಂತಿ ಮುನಯಃ ಸರ್ವೇಽಪಿ ತ್ರಿದಿವೌಕಸಃ ।
ಬ್ರಾಹ್ಮಣಾ ಮನವಃ ಶಕ್ರೋ ಯೇ ಚಾನ್ಯೇ ಪ್ರಥಿತೌಜಸಃ ॥ ೫ ॥

ಗೃಣಂತಿ ಸತತಂ ವೇದಾ ಮಾಮೇಕಂ ಪರಮೇಶ್ವರಂ ।
ಯಜಂತಿ ವಿವಿಧೈರಗ್ನಿಂ ಬ್ರಾಹ್ಮಣಾ ವೈದಿಕೈರ್ಮಖೈಃ ॥ ೬ ॥

ಸರ್ವೇ ಲೋಕಾ ನಮಸ್ಯಂತಿ ಬ್ರಹ್ಮಲೋಕೇ ಪಿತಾಮಹಂ ।
ಧ್ಯಾಯಂತೇ ಯೋಗಿನೋ ದೇವಂ ಭೂತಾಧಿಪತಿಮೀಶ್ವರಂ ॥ ೭ ॥

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚೈವ ಫಲಪ್ರದಃ ।
ಸರ್ವದೇವತನುರ್ಭೂತ್ವಾ ಸರ್ವಾತ್ಮಾ ಸರ್ವಸಂಸ್ಥಿತಃ ॥ ೮ ॥

---

೪. ಈ ಪ್ರಪಂಚವೆಲ್ಲವೂ ಯಾವನೊಳಗೆ ಸೇರಿಕೊಂಡಿದೆಯೋ ಎಲ್ಲದರೊಳಗೂ ಯಾವನು ಸೇರಿಕೊಂಡಿರುವನೋ ಆ ನಾನು ಸೃಷ್ಟಿಕರ್ತನು, ಕಾಪಾಡುವವನೂ ಆಗಿದ್ದೇನೆ. ಈ ಲೋಕದಲ್ಲಿ ಎಲ್ಲಿ ನೋಡಿದರೂ ನಾನೇ ಇದ್ದೇನೆ.

೫-೭. ನನ್ನನ್ನು ಮುನಿಗಳಾಗಲಿ, ದೇವತೆಗಳಾಗಲಿ, ಯಾರೂ ನೋಡಲಾರರು. ಬ್ರಾಹ್ಮಣರು, ಮನುಗಳು, ಇಂದ್ರನು, ಇನ್ನು ಯಾರುಯಾರು ಮಹಾತ್ಮರುಂಟೋ ಅವರು ಯಾರೂ ಕೂಡ ನನ್ನನ್ನು ನೋಡಲಾರರು. ವೇದಗಳು ಮಾತ್ರ ಪರಮೇಶ್ವರನಾದ ನನ್ನನ್ನು ಗೊತ್ತುಮಾಡಿಕೊಂಡು ಕಂಡು ಹಿಡಿಯುತ್ತವೆ. ಬ್ರಾಹ್ಮಣರಾದವರು ವೇದೋಕ್ತವಾದ ಯಾಗಗಳಿಂದ ನನ್ನನ್ನು ಪೂಜಿಸುತ್ತಾರೆ.

೮-೯. ಎಲ್ಲಾ ಜನರೂ ಕೂಡ ಬ್ರಹ್ಮಲೋಕದಲ್ಲಿರುವ ಬ್ರಹ್ಮನನ್ನು ನಮಸ್ಕರಿಸುತ್ತಾರೆ. ಯೋಗಿಗಳು ಭೂತಗಳಿಗೆ ಅಧಿಪತಿಯಾದ ಈಶ್ವರನನ್ನು ಧ್ಯಾನ ಮಾಡುತ್ತಾರೆ. ನಾನಾದರೋ ಎಲ್ಲಾ ಯಜ್ಞಗಳ ಫಲವನ್ನೂ ತಿನ್ನುವವನು.

ಮಾಂ ಪಶ್ಯಂತೀಹ ವಿದ್ವಾಂಸೋ ಧಾರ್ಮಿಕಾ ವೇದವಾದಿನಃ ।
ತೇಷಾಂ ಸನ್ನಿಹಿತೋ ನಿತ್ಯಂ ಯೇ ಭಕ್ತಾ ಮಾಮುಪಾಸತೇ ॥ ೯ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಧಾರ್ಮಿಕಾ ಮಾಮುಪಾಸತೇ ।
ತೇಷಾಂ ದದಾಮಿ ತತ್ಸ್ಥಾನಮಾನಂದಂ ಪರಮಂ ಪರಂ ॥ ೧೦ ॥

ಅನ್ಯೇಽಪಿ ಯೇ ವಿಕರ್ಮಸ್ಥಾಃ ಶೂದ್ರಾದ್ಯಾ ನೀಚಜಾತಯಃ ।
ಭಕ್ತಿಮಂತಃ ಪ್ರಮುಚ್ಯಂತೇ ಕಾಲೇನ ಮಯಿ ಸಂಗತಾಃ ॥ ೧೧ ॥

ನ ಮದ್ಭಕ್ತಾ ವಿನಶ್ಯಂತಿ ಮದ್ಭಕ್ತಾ ವೀತಕಲ್ಮಷಾಃ ।
ಆದಾವೇತತ್ ಪ್ರತಿಜ್ಞಾತಂ ನ ಮೇ ಭಕ್ತಃ ಪ್ರಣಶ್ಯತಿ ॥ ೧೨ ॥

---

ಅವುಗಳಿಗೆ ಫಲವನ್ನು ಕೊಡುವವನು, ನಾನು ಎಲ್ಲಾ ದೇವತೆಗಳ ಆಕಾರವನ್ನೂ ಹೊಂದಿ ಅವರಲ್ಲಿ ಇರುತ್ತೇನೆ, ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತೇನೆ, ವೇದ ವಾದಿಗಳಾದ ವಿದ್ವಾಂಸರು ನನ್ನನ್ನು ನೋಡುತ್ತಾರೆ, ನನ್ನನ್ನು ಭಯದಿಂದ ಸೇವಿಸುವ ಭಕ್ತರ ಬಳಿಯಲ್ಲಿ ನಾನು ಯಾವಾಗಲೂ ಇರುವೆನು.

೧೦. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಯಾರು ಧಾರ್ಮಿಕರೋ ಅವರು ನನ್ನನ್ನು ಸೇವಿಸುತ್ತಾರೆ. ಅವರಿಗೆ ಆನಂದಾತ್ಮಕವಾದ ಪರಮ ಪದವನ್ನು ಕೊಡುತ್ತೇನೆ.

೧೧. ಶೂದ್ರರೇ ಮುಂತಾದ ಕೆಳಗಿನ ಜಾತಿಯವರೂ ತಮ್ಮತಮ್ಮ ಕೆಲಸ ವನ್ನು ಮಾಡದವರೂ ಭಕ್ತಿಯಿಂದಿದ್ದರೆ ಕೆಲವು ಕಾಲದ ಮೇಲೆ ಮುಕ್ತಿಯನ್ನು ಹೊಂದುತ್ತಾರೆ. ಮತ್ತು ನನ್ನಲ್ಲಿ ಸೇರುತ್ತಾರೆ.

೧೨. ನನ್ನಲ್ಲಿ ಭಕ್ತರಲ್ಲದವರು ನಾಶವಾಗುತ್ತಾರೆ, ನನ್ನ ಭಕ್ತರು ಪಾಪ ಗಳನ್ನು ಕಳೆದುಕೊಳ್ಳುತ್ತಾರೆ, ನನ್ನ ಭಕ್ತನಾದವನು ನಾಶವಾಗುವುದೇ ಇಲ್ಲ, ಇದನ್ನು ಮೊದಲೇ ಪ್ರತಿಜ್ಞೆ ಮಾಡಿದ್ದೇನೆ.

**ಯೋ ವಾ ನಾದತಿನಿಂ ತಂ ಮೂಢೋ ದೇವದೇವಂ ಸ ನಿಂದತಿ ।**
**ಯೋಹಿ ತಂ ಪೂಜಯೇದ್ಭಕ್ತ್ಯಾ ಸ ಪೂಜಯತಿ ಮಾಂ ಸದಾ ॥ ೧೩ ॥**

**ಪತ್ರಂ ಪುಷ್ಪಂ ಫಲಂ ತೋಯಂ ಮದಾರಾಧನಕಾರಣಾತ್ ।**
**ಯೋ ಮೇ ದದಾತಿ ನಿಯತಃ ಸ ಮೇ ಭಕ್ತಃ ಪ್ರಿಯೋ ಮತಃ ॥ ೧೪ ॥**

**ಅಹಂ ಹಿ ಜಗತಾಮಾದೌ ಬ್ರಹ್ಮಾಣಂ ಪರಮೇಶ್ವರಂ ।**
**ನಿಧಾಯ ದತ್ತವಾನ್ ವೇದಾನ್ ಅಶೇಷಾನಾಸ್ಯನಿಸ್ಸೃತಾನ್ ॥ ೧೫ ॥**

**ಅಹಮೇವ ಹಿ ಸರ್ವೇಷಾಂ ಯೋಗಿನಾಂ ಗುರುರವ್ಯಯಃ ।**
**ಧಾರ್ಮಿಕಾಣಾಂ ಚ ಗೋಪ್ತಾಹಂ ನಿಹಂತಾ ವೇದವಿದ್ವಿಷಾಂ ॥ ೧೬ ॥**

**ಅಹಂ ವೈ ಸರ್ವಸಂಸಾರಾತ್ ರೋಚಕೋ ಯೋಗಿನಾಮಿಹ ।**
**ಸಂಸಾರಹೇತುರೇವಾಹಂ ಸರ್ವಸಂಸಾರವರ್ಜಿತಃ ॥ ೧೭ ॥**

---

೧೩. ಯಾವನು ಬುದ್ಧಿಯಿಲ್ಲದೆ ಆ ನನ್ನ ಭಕ್ತನನ್ನು ನಿಂದಿಸುವನೋ ಅವನು ದೇವದೇವನನ್ನೇ ನಿಂದಿಸುತ್ತಾನೆ. ಯಾವನು ಆ ನನ್ನ ಭಕ್ತನನ್ನು ಪೂಜಿಸುವನೋ ಅವನು ಯಾವಾಗಲೂ ನನ್ನನ್ನೇ ಪೂಜಿಸುತ್ತಾನೆ.

೧೪. ನನ್ನ ಪೂಜೆಗೋಸ್ಕರ ಪತ್ರೆ, ಹೂ, ಹಣ್ಣು, ನೀರು ಇವನ್ನು ಯಾವನು ನನಗೆ ಭಕ್ತಿಯಿಂದ ಕೊಡುತ್ತಾನೆಯೋ ಅವನು ನನಗೆ ಪ್ರಿಯನು.

೧೫. ನಾನು ಜಗತ್ತನ್ನು ಸೃಷ್ಟಿಮಾಡುವುದಕ್ಕೆ ಮೊದಲೇ ಪರಮೇಷ್ಠಿಯಾದ ಬ್ರಹ್ಮನನ್ನು ನಿಲ್ಲಿಸಿ ಅವನಿಗೆ ನನ್ನ ಮುಖದಿಂದ ಹೊರಟ ವೇದಗಳನ್ನೆಲ್ಲಾ ಕೊಟ್ಟೆನು.

೧೬. ನಾನೇನೇ ಎಲ್ಲ ಯೋಗಿಗಳಿಗೂ ಗುರುವು, ನಾಶರಹಿತನು, ಧಾರ್ಮಿಕರನ್ನು ನಾನೇ ಕಾಪಾಡುತ್ತೇನೆ. ವೇದವನ್ನು ದ್ವೇಷಿಸುವವರನ್ನು ನಾಶಮಾಡುವೆನು.

೧೭. ನಾನೇನೇ ಸಂಸಾರದಿಂದ ಯೋಗಿಗಳಿಗೆ ಬಿಡುಗಡೆಯನ್ನು ಮಾಡುವವನು. ಸಂಸಾರಕ್ಕೆ ಕಾರಣನೂ ನಾನೇನೇ. ನನಗೆ ಸಂಸಾರವಿಲ್ಲ.

**ಅಹಮೇವ ಹಿ ಸಂಹರ್ತಾ ಸ್ರಷ್ಟಾಹಂ ಪರಿಪಾಲಕಃ ।**
**ಮಾಯಾವೀ ಮಾಯಿಕಾ ಶಕ್ತಿಃ ಮಾಯಾಲೋಕವಿಮೋಹಿನೀ ॥ ೧೮ ॥**

**ಮಮೈವ ಚ ಪರಾಶಕ್ತಿಃ ಯಾ ಸಾ ವಿದ್ಯೇತಿ ಗೀಯತೇ ।**
**ನಾಶಯಾಮಿ ತಯಾ ಮಾಯಾಂ ಯೋಗಿನಾಂ ಹೃದಿ ಸಂಸ್ಥಿತಃ ॥ ೧೯ ॥**

**ಅಹಂ ಹಿ ಸರ್ವಶಕ್ತೀನಾಂ ಪ್ರವರ್ತಕನಿವರ್ತಕಃ ।**
**ಆಧಾರಭೂತಸ್ಸರ್ವಾಸಾಂ ನಿಧಾನಮಮೃತಸ್ಯ ಚ ॥ ೨೦ ॥**

**ಏಕಾ ಸರ್ವಾಂತರಾ ಶಕ್ತಿಃ ಕರೋತಿ ವಿವಿಧಂ ಜಗತ್ ।**
**ಭೂತ್ವಾ ನಾರಾಯಣೋಽನಂತೋ ಜಗನ್ನಾಥೋ ಜಗನ್ಮಯಃ ॥ ೨೧ ॥**

**ತೃತೀಯಾ ಮಹತೀ ಶಕ್ತಿಃ ನಿಹಂತಿ ಸಕಲಂ ಜಗತ್ ।**
**ತಾಮಸೀ ಮೇ ಸಮಾಖ್ಯಾತಾ ಕಾಲಾತ್ಮಾ ರುದ್ರರೂಪಿಣೀ ॥ ೨೨ ॥**

---

೧೮. ಪ್ರಪಂಚವೆಲ್ಲವನ್ನೂ ನಾನೇ ನಾಶಮಾಡುತ್ತೇನೆ. ಕಾಪಾಡುತ್ತೇನೆ. ಸೃಷ್ಟಿಸುತ್ತೇನೆ. ನನ್ನ ಶಕ್ತಿಯು ಮಾಯೆಯಿಂದ ಕೂಡಿದುದು. ಆ ಮಾಯೆಯು ಲೋಕವನ್ನೇ ಮೋಹಿಸುತ್ತದೆ.

೧೯. ನನ್ನಲ್ಲಿರುವ ಪರಾಶಕ್ತಿಯನ್ನೇ ವಿದ್ಯೆಯೆಂದು ಹೇಳುತ್ತಾರೆ. ಆ ವಿದ್ಯೆಯಿಂದ ಯೋಗಿಗಳ ಹೃದಯದಲ್ಲಿದ್ದುಕೊಂಡು ಮಾಯೆಯನ್ನು ನಾಶಮಾಡುತ್ತೇನೆ.

೨೦. ನಾನೇ ಎಲ್ಲಾ ಶಕ್ತಿಗಳನ್ನೂ ಮುಂದೆ ಬರುವಂತೆ ಮಾಡುತ್ತೇನೆ. ಮತ್ತು ಹಿಂದೆ ಹೋಗುವಂತೆ ಮಾಡುತ್ತೇನೆ. ಎಲ್ಲಾ ಭೂತಗಳಿಗೂ ಆಧಾರನು. ಅಮೃತಕ್ಕೆ ಸಿಲ್ಲುವ ಜಾಗವು.

೨೧. ನನ್ನ ಒಂದು ಶಕ್ತಿಯು ಎಲ್ಲದರಲ್ಲಿಯೂ ಇದ್ದುಕೊಂಡು ಜಗತ್ತನ್ನೆಲ್ಲವನ್ನು ಸೃಷ್ಟಿಸುತ್ತದೆ. ಆಗ ಅದು ನಾರಾಯಣ, ಅನಂತ, ಜಗನ್ನಾಥ, ಜಗನ್ಮಯನೆಂದು ಹೆಸರನ್ನು ಹೊಂದುತ್ತದೆ.

೨೨. ಮೂರನೆಯದಾದ ಒಂದು ಶಕ್ತಿಯು ಎಲ್ಲಾ ಜಗತ್ತನ್ನೂ ನಾಶಮಾಡುತ್ತದೆ. ಆ ಶಕ್ತಿಗೆ ತಾಮಸಶಕ್ತಿಯೆಂದು ಹೆಸರು. ಅದು ಕಾಲರೂಪವಾದುದು. ರುದ್ರರೂಪವಾದುದು.

ಧ್ಯಾನೇನ ಮಾಂ ಪ್ರಪಶ್ಯಂತಿ ಕೇಚಿತ್ ಜ್ಞಾನೇನ ಚಾಪರೇ ।
ಅಪರೇ ಭಕ್ತಿಯೋಗೇನ ಕರ್ಮಯೋಗೇನ ಚಾಪರೇ ।
ಸರ್ವೇಷಾಮೇವಭಕ್ತಾನಾಮೇಷಃ ಪ್ರಿಯತಮೋ ಮಮ ॥ ೨೩ ॥

ಯೋ ಹಿ ಜ್ಞಾನೇನ ಮಾಂ ನಿತ್ಯಮಾರಾಧಯತಿ ನಾನ್ಯಥಾ ।
ಅನ್ಯೇ ಚ ಯೇ ತ್ರಯೋ ಭಕ್ತಾ ಮದಾರಾಧನಕಾಂಕ್ಷಿಣಃ ॥ ೨೪ ॥

ತೇಽಪಿ ಮಾಂ ಪ್ರಾಪ್ನುವಂತ್ಯೇವ ನಾವರ್ತಂತೇ ಚ ವೈ ಪುನಃ ।
ಮಯಾ ತತಮಿದಂ ಕೃತ್ಸ್ನಂ ಏತದ್ಯೋ ವೇದ ಸೋಽಮೃತಃ ॥ ೨೫ ॥

ಪಶ್ಯಾಮ್ಯಶೇಷಮೇವೇದಂ ವರ್ತಮಾನಂ ಸ್ವಭಾವತಃ ।
ಕರೋತಿ ಕಾಲೇ ಭಗವಾನ್ ಮಹಾಯೋಗೇಶ್ವರಃ ಸ್ವಯಂ ॥ ೨೬ ॥

---

೨೩. ನನ್ನನ್ನು ಕೆಲವರು ಧ್ಯಾನದಿಂದಲೂ, ಕೆಲವರು ಜ್ಞಾನದಿಂದಲೂ, ಕೆಲವರು ಭಕ್ತಿಯಿಂದಲೂ, ಕೆಲವರು ಕರ್ಮದಿಂದಲೂ, ತಿಳಿಯುತ್ತಾರೆ.

೨೪-೨೫. ನನ್ನನ್ನು ನಿತ್ಯವೂ ಜ್ಞಾನದಿಂದ ಯಾವನು ಆರಾಧಿಸುವನೋ ಅವನು ಎಲ್ಲಾ ಭಕ್ತರಿಗಿಂತಲೂ ನನಗೆ ಪ್ರೀತಿಪಾತ್ರನು. ಉಳಿದ ಮೂರು ಜನರಾದ ದಾಸಿ, ಯೋಗಿ, ಕರ್ಮಿಗಳೂ ಕೂಡ ನನ್ನನ್ನು ಆರಾಧಿಸುತ್ತಾರೆ. ಅವರೂ ಕೂಡ ನನ್ನನ್ನೇ ಹೊಂದುತ್ತಾರೆ ಮತ್ತೆ ಹುಟ್ಟುವುದೇ ಇಲ್ಲ. ಈ ಪ್ರಪಂಚವು ನನ್ನಿಂದಲೇ ವ್ಯಾಪ್ತವಾಗಿದೆ. ಇದನ್ನು ತಿಳಿದಿರತಕ್ಕವನು ಅಮೃತವನ್ನು ಹೊಂದುತ್ತಾನೆ. ಮುಕ್ತನಾಗುತ್ತಾನೆ.

೨೬. ಯಾವುಯಾವುವು ಪ್ರಪಂಚದಲ್ಲಿ ಸ್ವಭಾವವಾಗಿರುವುವೋ ಅವೆಲ್ಲವನ್ನೂ ಆ ಶಿವನು ನೋಡುತ್ತಿದ್ದಾನೆ. ಯೋಗೇಶ್ವರನಾದ ಆ ಶಿವನು ತಾನೇನೇ ಆಯಾಕಾಲದಲ್ಲಿ ಆ ಯೋಗವನ್ನು ಮಾಡುತ್ತಾನೆ. ಆ ಶಿವನೇ ನಾನಾಗಿದ್ದೇನೆ.

**ಯೋಗಂ ಸಂಪ್ರೋಚ್ಯತೇ ಯೋಗೀ ಮಾಯಿಾ ಶಾಸ್ತ್ರೇಷು ಸೂರಿಭಿಃ ।**
**ಯೋಗೇಶ್ವರೋಽಸೌ ಭಗವಾನ್ ಮಹಾದೇವೋ ಮಹಾನ್ ಪ್ರಭುಃ ॥ ೨೭ ॥**

**ಮಹತ್ವಾತ್ಸರ್ವಸತ್ವಾನಾಂ ಪರತ್ವಾತ್ಪರಮೇಶ್ವರಃ ।**
**ಪ್ರೋಚ್ಯತೇ ಭಗವಾನ್ ಬ್ರಹ್ಮಾ ಮಹಾನ್ ಬ್ರಹ್ಮಮಯೋ ಯತಃ ॥ ೨೮ ॥**

**ಯೋ ಮಾಮೇವ ವಿಜಾನಾತಿ ಮಹಾಯೋಗೇಶ್ವರೇಶ್ವರಂ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೨೯ ॥**

**ಸೋಽಹಂ ಪ್ರೇರಯಿತಾ ದೇವಃ ಪರಮಾನಂದಮಾಶ್ರಿತಃ ।**
**ತಿಷ್ಠಾಮಿ ಯೋಗೀ ಸತತಂ ಯಸ್ತದ್ವೇದ ಸ ವೇದವಿತ್ ॥ ೩೦ ॥**

೨೭. ಜ್ಞಾನಿಗಳು ಶಾಸ್ತ್ರದಲ್ಲಿ ಹೇಳಿರುವುದನ್ನು ಮಾಯೆಯ ವಿಷಯವೆಂದೂ ಯೋಗಿಗಳು ಯೋಗದ ವಿಷಯವೆಂದೂ ಹೇಳುತ್ತಾರೆ. ಆ ಪ್ರಭುವೂ, ಮಹಾತ್ಮನೂ, ಭಗವಂತನೂ ಆದ ಶಿವನೇ ಯೋಗಕ್ಕೆ ಒಡೆಯನು.

೨೮. ಎಲ್ಲಾ ಪ್ರಾಣಿಗಳಿಗಿಂತಲೂ ಮಹತ್ವವುಳ್ಳವನಾದುದರಿಂದ ಮಹಾತ್ಮನೆಂದೂ ಎಲ್ಲಾ ಪ್ರಾಣಿಗಳಿಗಿಂತಲೂ ಪರರೂಪನಾದುದರಿಂದ ಪರಮೇಶ್ವರನೆಂದೂ ಹೇಳುತ್ತಾರೆ. ಹೀಗಿರುವುದರಿಂದಲೇ ಆ ಬ್ರಹ್ಮನಿಗೆ ಪರಮೇಶ್ವರನೆಂದು ಹೆಸರು. ಅವನೂ ಕೂಡ ಬ್ರಹ್ಮಮಯನು. ಮಹತ್ವವೂ ಬ್ರಹ್ಮಮಯವು. ಆದ್ದರಿಂದ ಆ ಮಹೇಶ್ವರನು ಬ್ರಹ್ಮನು.

೨೯. ಮಹಾಯೋಗೀಶ್ವರನಾದ ನನ್ನನ್ನು ನಾನು ಹೇಳಿದ ರೀತಿಯಾಗಿ ಯಾವನು ತಿಳಿಯುತ್ತಾನೆಯೋ ಅವನು ಚಲಿಸಿ ಭಂಗವಾಗದ ಯೋಗವನ್ನು ತಿಳಿದು ಆ ರೀತಿ ಮಾಡಿಕೊಳ್ಳುತ್ತಾನೆ. ಅದರಲ್ಲಿ ಸಿದ್ಧಿಯನ್ನು ಹೊಂದುತ್ತಾನೆ. ಸಂಶಯವೇ ಇಲ್ಲ.

೩೦. ನಾನು ಪರಮಾನಂದವನ್ನು ಹೊಂದಿ ಅವೆಲ್ಲಕ್ಕೂ ಪ್ರೇರಕನಾಗಿದ್ದೇನೆ. ಆ ರೀತಿಯಲ್ಲಿ ಪ್ರೇರಿಸುತ್ತ ಯೋಗವನ್ನು ಮಾಡುತ್ತಲೇ ಇರುತ್ತೇನೆ. ಅದೆಲ್ಲವನ್ನೂ ತಿಳಿಯುವವನೇ ವೇದವನ್ನು ಬಲ್ಲವನು.

**ಇತಿ ಗುಹ್ಯತಮಂ ಜ್ಞಾನಂ ಸರ್ವವೇದೇಷು ನಿಶ್ಚಿತಂ ।**
**ಪ್ರಸನ್ನಚೇತಸೇ ದೇಯಂ ಧಾರ್ಮಿಕಾಯಾಹಿತಾಗ್ನಯೇ ॥ ೩೧ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ಭಕ್ತಿಯೋಗೋ ನಾಮ**
**ತ್ರಯೋದಶಃ ಸರ್ಗಃ**

---

೩೧. ಇದೇ ಗುಹ್ಯತಮವಾದ ಜ್ಞಾನವು. ಎಲ್ಲಾ ವೇದಗಳಲ್ಲಿಯೂ ಇದನ್ನು ಸ್ಥಿರೀಕರಿಸಿ ಹೇಳಿದ್ದಾರೆ. ಈ ಯೋಗವನ್ನು ನಿರ್ಮಲವಾದ ಮನಸ್ಸುಳ್ಳ ಧಾರ್ಮಿಕನಾದ ಅಗ್ನಿಹೋತ್ರವನ್ನು ಮಾಡುವವನಿಗೆ ಉಪದೇಶಿಸಬೇಕು.

ಇಂತು ವಾಲ್ಮೀಕಿ ಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಭಕ್ತಿಯೋಗವೆಂಬ
ಹದಿಮೂರನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತ ರಾಮಾಯಣೇ

## ಅಥ ಚತುರ್ದಶಃ ಸರ್ಗಃ

ಸರ್ವಲೋಕೈಕನಿರ್ಮಾತಾ ಸರ್ವಲೋಕೈಕ ರಕ್ಷಿತಾ ।
ಸರ್ವಲೋಕೈಕಸಂಹರ್ತಾ ಸರ್ವಾತ್ಮಾ ಹಂಸನಾತನಃ ॥ ೧ ॥

ಸರ್ವೇಷಾಮೇವ ವಸ್ತೂನಾಮಂತರ್ಯಾಮೀ ಪಿತಾಹ್ಯಹಂ ।
ಮಯ್ಯೇವಾಂತಸ್ಥಿತಂ ಸರ್ವಂ ನಾಹಂ ಸರ್ವತ್ರ ಸಂಸ್ಥಿತಃ ॥ ೨ ॥

ಭವತಾ ಚಾದ್ಭುತಂ ದೃಷ್ಟಂ ಯತ್ಸ್ವರೂಪಂ ತು ಮಾಮಕಂ ।
ಮಮೈಷಾ ಹ್ಯುತ್ತಮಾ ವತ್ಸ ಮಾಯಯಾ ದರ್ಶಿತಾ ಮಯಾ ॥ ೩ ॥

## ಹದಿನಾಲ್ಕನೆಯ ಸರ್ಗವು

೧. ನಾನೇ ಎಲ್ಲಾ ಲೋಕಗಳನ್ನು ಸೃಷ್ಟಿಸುವವನು. ಅವೆಲ್ಲವನ್ನೂ ಕಾಪಾಡುವವನೂ ನಾನೇ ಮತ್ತು ಅವೆಲ್ಲವನ್ನೂ ನಾಶಮಾಡುತ್ತೇನೆ. ನಾನೇ ಸರ್ವಾತ್ಮನೂ ಸನಾತನನೂ ಆಗಿದ್ದೇನೆ.

೨. ಎಲ್ಲಾ ವಸ್ತುಗಳ ಒಳಗಡೆಯಲ್ಲಿಯೂ ನಾನೇ ಇದ್ದೇನೆ. ಅವೆಲ್ಲಕ್ಕೂ ನಾನೇ ತಂದೆಯು. ಎಲ್ಲವೂ ಕೂಡ ನನ್ನೊಳಗೆ ಇದ್ದುಕೊಂಡಿರುತ್ತವೆ. ನಾನು ಎಲ್ಲಾ ಕಡೆಯಲ್ಲಿಯೂ ಇರುವುದಿಲ್ಲ.

೩. ಎಲೈ ಹನುಮನೆ! ನನ್ನ ಅದ್ಭುತವಾದ ರೂಪವನ್ನು ನೀನು ನೋಡಿದೆ. ಇದನ್ನು ನಾನು ನಿನಗೆ ದೃಷ್ಟಾಂತವಾಗಿ ತೋರಿಸಿರುವೆನು. ಅದನ್ನೂ ಮಾಯೆಯಿಂದಲೇ ತೋರಿಸಿದ್ದೇನೆ.

ಸರ್ವೇಷಾಮೇವ ಭಾವಾನಾಮಂತರಾ ಸಮವಸ್ಥಿತಃ ।
ಪ್ರೇರಯಾಮಿ ಜಗತ್ಸರ್ವಂ ಕ್ರಿಯಾಶಕ್ತಿರಿಯಂ ಮಮ ॥ ೪ ॥

ಮಯೇದಂ ಚೇಷ್ಟತೇ ವಿಶ್ವಂ ತತ್ ಸ್ವಭಾವಾನುವರ್ತಿ ಚ ।
ಸೋಽಹಂ ಕಾಲೇ ಜಗತ್ ಕೃತ್ಸ್ನಂ ಕರೋಮಿ ಹನುಮನ್ ಕಿಲ ॥ ೫ ॥

ಸಂಹರಾಮ್ಯೇಕರೂಪೇಣ ದ್ವಿಧಾವಸ್ಥಾ ಮಮೈವ ತು ।
ಆದಿಮಧ್ಯಾಂತ ನಿರ್ಮುಕ್ತೋ ಮಾಯಾ ತತ್ರ ಪ್ರವರ್ತಕಃ ॥ ೬ ॥

ಕ್ಷೋಭಯಾಮಿ ಚ ಸರ್ಗಾದೌ ಪ್ರಧಾನಪುರುಷಾವುಭೌ ।
ತಾಭ್ಯಾಂ ಸಂಜಾಯತೇ ಸರ್ವಂ ಸಂಯುಕ್ತಾಭ್ಯಾಂ ಪರಸ್ಪರಂ ॥ ೭ ॥

ಮಹದಾದಿಕ್ರಮೇಣೈವ ಮಮ ತೇಜೋ ವಿಜೃಂಭಿತಂ ।
ಯೋ ಹಿ ಸರ್ವಜಗತ್ಸಾಕ್ಷೀ ಕಾಲಚಕ್ರಪ್ರವರ್ತಕಃ ॥ ೮ ॥

---

೪. ಎಲ್ಲಾ ಪದಾರ್ಥಗಳ ಒಳಗಡೆಯಲ್ಲಿಯೂ ನಾನೇ ಇದ್ದೇನೆ. ಹಾಗಿದ್ದು ಕೊಂಡು ಈ ಜಗತ್ತನ್ನೆಲ್ಲಾ ಪ್ರೇರಿಸುತ್ತಿರುತ್ತೇನೆ. ಇದೇ ನನ್ನ ಕ್ರಿಯಾಶಕ್ತಿಯು.

೫. ನಾನು ಪ್ರಪಂಚವೆಲ್ಲವನ್ನೂ ಹೀಗೆ ಆಡಿಸುತ್ತಿರುತ್ತೇನೆ. ಇಂತಹ ನಾನು ಅನುಗುಣವಾದ ಕಾಲಬಂದಾಗ ಪ್ರಪಂಚವನ್ನೆಲ್ಲಾ ನಿರ್ಮಿಸುತ್ತೇನೆ.

೬. ಇದೇ ರೀತಿಯಲ್ಲಿಯೇ ಈ ಜಗತ್ತನ್ನು ನಾಶ ಮಾಡುತ್ತೇನೆ. ನನ್ನ ಅವಸ್ಥೆಯು ಹೀಗೆ ಎರಡು ರೀತಿಯಾಗಿದೆ. ನನಗೆ ಆದಿ ಮಧ್ಯ ಅಂತಗಳಾವುವೂ ಇಲ್ಲ. ಯಾವಾಗಲೂ ಈ ಮಾಯೆಯನ್ನೇ ನಡೆಸುತ್ತಿರುತ್ತೇನೆ.

೭. ನಾನು ಸೃಷ್ಟಿ ಮಾಡುವುದಕ್ಕೆ ಮೊದಲು ಆ ಉಳಿದ ಇಬ್ಬರನ್ನೂ ರೇಗಿಸುತ್ತೇನೆ. ಅವರಿಬ್ಬರೂ ಸೇರಿಕೊಂಡು ಈ ಪ್ರಪಂಚವೆಲ್ಲವನ್ನೂ ಸೃಷ್ಟಿಸುತ್ತಾರೆ.

೮. ಮಹತ್ತೇ ಮೊದಲಾದ ಈ ತತ್ವರೀತಿಯಿಂದ ನನ್ನ ತೇಜಸ್ಸು ಲೋಕದಲ್ಲಿ ಪ್ರಕಾಶಿತವಾಗಿದೆ. ನಾನು ಜಗತ್ತಿಗೆ ಸಾಕ್ಷಿ ರೂಪನಾಗಿ ಕಾಲ ಚಕ್ರವನ್ನು ನಡೆಸುತ್ತೇನೆ.

**ಹಿರಣ್ಯಗರ್ಭೋ ಮಾರ್ತಂಡಃ ಸೋಽಪಿ ಮದ್ದೇಹಸಂಭವಃ ।**
**ತಸ್ಮೈ ದಿವ್ಯಂ ಸ್ವಮೈಶ್ವರ್ಯಂ ಜ್ಞಾನಯೋಗಂ ಸನಾತನಂ ॥ ೯ ॥**

**ದತ್ತವಾನಾತ್ಮಜಾನ್ ವೇದಾನ್ ಕಲ್ಪಾದೌ ಚತುರಃ ಕಿಲ ।**
**ಸ ಮನ್ನಿಯೋಗತೋ ಬ್ರಹ್ಮಾ ಸದಾ ಮದ್ಭಾವಭಾವಿತಃ ॥ ೧೦ ॥**

**ದಿವ್ಯಂ ತನ್ಮಾಮಕೈಶ್ವರ್ಯಂ ಸರ್ವದಾ ವಹತಿ ಸ್ವಯಂ ।**
**ಸ ಸರ್ವಲೋಕನಿರ್ಮಾತಾ ಮನ್ನಿಯೋಗೇನ ಸರ್ವವಿತ್ ॥ ೧೧ ॥**

**ಭೂತ್ವಾ ಚತುರ್ಮುಖಃ ಸರ್ಗಂ ಸೃಜತ್ಯೇವಾತ್ಮಸಂಭವಃ ।**
**ಯೋಽಪಿ ನಾರಾಯಣೋಽನಂತೋ ಲೋಕಾನಾಂ ಪ್ರಭವೋಽವ್ಯಯಃ ॥ ೧೨ ॥**

**ಮಮೈವ ಪರಮಾ ಮೂರ್ತಿಃ ಕರೋತಿ ಪರಿಪಾಲನಂ ।**
**ಯೋಽಂತಕಸ್ಸರ್ವಭೂತಾನಾಂ ರುದ್ರಃ ಕಾಲಾತ್ಮಕಃ ಪ್ರಭುಃ ॥ ೧೩ ॥**

೯–೧೦. ಮಾರ್ತಾಂಡನಾದ ಹಿರಣ್ಯಗರ್ಭ ಬ್ರಹ್ಮನು ನನ್ನ ದೇಹದಿಂದಲೇ ಹುಟ್ಟಿದನು. ಅವನಿಗೆ ಕಲ್ಪದ ಆದಿಯಲ್ಲಿ ನನ್ನ ಐಶ್ವರ್ಯ ರೂಪವಾದ ಸನಾತನವಾದ ಜ್ಞಾನ ಯೋಗವನ್ನು ಕೊಟ್ಟೆನು ಮತ್ತು ನಾಲ್ಕು ವೇದಗಳನ್ನೂ ಕೊಟ್ಟೆನು. ಆ ಬ್ರಹ್ಮನು ನನ್ನ ಅಪ್ಪಣೆಯಂತೆ ಮಾಡುತ್ತ ನನ್ನ ಅಭಿಪ್ರಾಯವನ್ನೇ ಯಾವಾಗಲೂ ಹೊಂದಿರುವನು.

೧೧. ಆ ಬ್ರಹ್ಮನು ನನ್ನಲ್ಲಿರುವ ಮುಖ್ಯ ಭಾಗಗಳನ್ನು ಯಾವಾಗಲೂ ಹೊಂದಿರುವನು. ಸರ್ವ ಲೋಕಗಳನ್ನು ನಿರ್ಮಿಸುವ ಆ ಬ್ರಹ್ಮನು ನನ್ನ ಅಪ್ಪಣೆಯಂತೆ ನಾಲ್ಕು ಮುಖಗಳನ್ನು ಹೊಂದಿ ಎಲ್ಲವನ್ನೂ ಸೃಷ್ಟಿಸುತ್ತಾನೆ.

೧೨–೧೩. ನಾರಾಯಣನೆಂದು ಹೆಸರನ್ನು ಹೊಂದಿ ಅನಂತನೆಂದು ಪ್ರಸಿದ್ಧನಾಗಿ ನಾಶ ರಹಿತನಾಗಿರುವ ಆ ಪ್ರಭುವು ನನ್ನ ಮೂರ್ತಿಯೇ ಆಗಿರುವುದು. ಆ ಮೂರ್ತಿಯೇ ಪ್ರಪಂಚವನ್ನು ಪರಿಪಾಲನೆ ಮಾಡುತ್ತದೆ. ಯಾವಾತನು ಪ್ರಪಂಚವನ್ನು ಸಂಹಾರ ಮಾಡುತ್ತಾ ಕಾಲ ಸ್ವರೂಪನಾಗಿ ರುದ್ರನೆಂದು ಪ್ರಸಿದ್ಧನಾಗಿರುವನೋ ಅವನೂ ನನ್ನ ದೇಹವೇ. ಅವನು ನನ್ನ ಅಪ್ಪಣೆಯ ಮೇರೆ ಯಾವಾಗಲೂ ಪ್ರಾಣಿಗಳನ್ನು ಕೊಲ್ಲುತ್ತಿರುವನು.

**ಮದಾಜ್ಞಯಾಸೌ ಸತತಂ ಸಂಹರತ್ಯೇವ ಮೇ ತನುಃ ।**
**ಹವ್ಯಂ ವಹತಿ ದೇವಾನಾಂ ಕವ್ಯಂ ಕವ್ಯಾಶಿನಾಮಪಿ ॥ ೧೪ ॥**

**ಪಾಕಂ ಚ ಕುರುತೇ ವಹ್ನಿಃ ಸೋಽಪಿ ಮಚ್ಛಕ್ತಿಚೋದಿತಃ ।**
**ಭುಕ್ತಮಾಹಾರಜಾತಂ ಯತ್ ಪಚತ್ಯೇತದಹರ್ನಿಶಂ ॥ ೧೫ ॥**

**ವೈಶ್ವಾನರೋಽಗ್ನಿರ್ಭಗವಾನೀಶ್ವರಸ್ಯ ನಿಯೋಗತಃ ।**
**ಯೋ ಹಿ ಸರ್ವಾಂಭಸಾಂ ಯೋನಿರ್ವರುಣೋ ದೇವಪುಂಗವಃ ॥ ೧೬ ॥**

**ಸ ಸಂಜೀವಯತೇ ಸರ್ವಮೀಶಸ್ಯೈವ ನಿಯೋಗತಃ ।**
**ಯೋಽಂತಸ್ತಿಷ್ಠತಿ ಭೂತಾನಾಂ ಬಹಿರ್ದೇವೋ ನಿರಂಜನಃ ॥ ೧೭ ॥**

೧೪. ಯಾವನು ನನ್ನ ಅಪ್ಪಣೆಯಂತೆ ದೇವತೆಗಳಿಗೆ ಹವಿಸ್ಸನ್ನೂ ಪಿತೃಗಳಿಗೆ ಕವ್ಯವನ್ನೂ ಹೊತ್ತುಕೊಂಡು ಹೋಗಿ ಕೊಡುತ್ತ ಶಖೆಯಿಂದ ಅನೇಕ ಬಗೆಯಾದ ಪಾಕಗಳನ್ನು ಮಾಡುತ್ತಾನೋ ಅಂತಹ ಅಗ್ನಿಯು ನನ್ನ ಶಕ್ತಿಯಿಂದಲೇ ಪ್ರೇರಿಸಲ್ಪಟ್ಟವನು.

೧೫. ಊಟಮಾಡಿದ ಆಹಾರವನ್ನು ಯಾವನು ಯಾವಾಗಲೂ ಜೀರ್ಣ ಮಾಡುತ್ತಾನೆಯೋ ಆ ವೈಶ್ವಾನರನೆಂಬ ಅಗ್ನಿಯು ನನ್ನ ಅಪ್ಪಣೆಯಿಂದಲೇ ಆ ಕೆಲಸವನ್ನು ಮಾಡುತ್ತಾನೆ.

೧೬. ನೀರಿಗೆಲ್ಲಾ ಸ್ಥಾವಭೂತನಾದ ದೇವಶ್ರೇಷ್ಠನಾದ ವರುಣನು ಎಲ್ಲವನ್ನೂ ಬದುಕಿಸುತ್ತಿರುವುದು ಈಶನಾದ ನನ್ನ ಅಪ್ಪಣೆಯಮೇರೆಗೆ.

೧೭. ಯಾವ ವಾಯುವು ಪ್ರಾಣಿಗಳ ದೇಹದೊಳಗಿದ್ದುಕೊಂಡು ಅವನ್ನು ಪ್ರಾಣವಂತರನ್ನಾಗಿ ಮಾಡುತ್ತ ಹೊರಗಡೆಯಲ್ಲಿಯೂ ಪ್ರಪಂಚಕ್ಕೆ ಉಪಕಾರಕನಾಗಿರುವನೋ ಆ ವಾಯುವೂ ಕೂಡ ನನ್ನ ಅಪ್ಪಣೆಯ ಮೇರೆಗೆ ಪ್ರಾಣಿಗಳ ಶರೀರವನ್ನು ಧರಿಸಿಕೊಂಡಿರುವನು.

ಮದಾಜ್ಞಯಾಸೌ ಭೂತಾನಾಂ ಶರೀರಾಣಿ ಬಿಭರ್ತಿ ಹಿ ।
ಯೋಽಪಿ ಸಂಜೀವನೋ ನೃಣಾಂ ದೇವಾನಾಮಮೃತಾಕರಃ ॥ ೧೮ ॥

ಸೋಮಃ ಸ ಮನ್ನಿಯೋಗೇನ ಚೋದಿತಃ ಕಿಲ ವರ್ತತೇ ।
ಯಃ ಸ್ವಭಾಸಾ ಜಗತ್ ಕೃತ್ಸ್ನಂ ಪ್ರಕಾಶಯತಿ ಸರ್ವದಾ ॥ ೧೯ ॥

ಸೂರ್ಯೋ ವೃಷ್ಟಿಂ ವಿತನುತೇ ಶಾಸ್ತ್ರೇಣೈವ ಸ್ವಯಂಭುವಃ ।
ಯೋಽಪ್ಯಶೇಷ ಜಗಚ್ಛಾಸ್ತಾ ಶಕ್ರಃ ಸರ್ವಾಮರೇಶ್ವರಃ ॥ ೨೦ ॥

ಯಜ್ವಾನಾಂ ಫಲದೋ ದೇವೋ ವರ್ತತೇಽಸೌ ಮದಾಜ್ಞಯಾ ।
ಯಃ ಪ್ರಶಾಸ್ತಾಹ್ಯಸಾಧೂನಾಂ ವರ್ತತೇ ನಿಯಮಾದಿಹ ॥ ೨೧ ॥

ಯಮೋ ವೈವಸ್ವತೋ ದೇವೋ ದೇವದೇವನಿಯೋಗತಃ ।
ಯೋಽಪಿ ಸರ್ವಧನಾಧ್ಯಕ್ಷೋ ಧನಾನಾಂ ಸಂಪ್ರದಾಯಕಃ ॥ ೨೨ ॥

೧೮. ಯಾವನು ಮನುಷ್ಯರನ್ನು ಜೀವಿಸುವಂತೆ ಮಾಡಿ ದೇವತೆಗಳಿಗೆ ಅಮೃತವನ್ನು ಕೊಡುತ್ತಾನೆಯೋ ಅಂತಹ ಚಂದ್ರನೂ ಕೂಡ ನನ್ನ ಅಪ್ಪಣೆಯ ಮೇರೆಗೆ ಪ್ರೇರಿಸಲ್ಪಟ್ಟವನಾಗಿ ಆ ಕೆಲಸವನ್ನು ಮಾಡುತ್ತಾನೆ

೧೯. ಯಾವನು ತನ್ನ ಕಾಂತಿಯಿಂದ ಪ್ರಪಂಚವೆಲ್ಲವನ್ನೂ ಬೆಳಗುತ್ತಾನೆಯೋ ಮತ್ತು ಮಳೆಯನ್ನು ಕೂಡ ಸುರ್ಯಿಸುವನೋ ಅಂತಹ ಸೂರ್ಯನು ನನ್ನ ಅಪ್ಪಣೆಯಿಂದಲೇ ಆ ಕೆಲಸವನ್ನು ಮಾಡುತ್ತಾನೆ.

೨೦. ಪ್ರಪಂಚವನ್ನೆಲ್ಲಾ ಕಾಪಾಡುವ ದೇವತೆಗಳಿಗೆಲ್ಲಾ ಒಡೆಯನಾದ, ಯಜ್ಞಗಳಿಗೆ ಫಲವನ್ನು ಕೊಡುವ ಇಂದ್ರನು ನನ್ನ ಅಪ್ಪಣೆಯಂತೆಯೇ ಇದ್ದಾನೆ.

೨೧. ಯಾವನು ದುಷ್ಟರನ್ನು ಶಿಕ್ಷಿಸುತ್ತ ಒಂದು ನಿಯಮದಂತೆ ಇರುವನೋ ಅಂತಹ ವೈವಸ್ವತ ಯಮನೂ ಕೂಡ ದೇವದೇವನಾದ ನನ್ನ ಅಪ್ಪಣೆಯನ್ನು ನಡೆಸುತ್ತಲೇ ಇರುವನು.

೨೨. ಎಲ್ಲಾ ಧನಗಳಿಗೂ ಅಧ್ಯಕ್ಷನಾದ ಧನವನ್ನು ಎಲ್ಲರಿಗೂ ಕೊಡುವ ಆ ಕುಬೇರನು ದೇವದೇವನಾದ ನನ್ನ ಅಪ್ಪಣೆಯ ಮೇರೆಗೆ ಇರುವನು.

**ಸೋಽಪೀಶ್ವರನಿಯೋಗೇನ ಕುಬೇರೋ ವರ್ತತೇ ಸದಾ ।**
**ಯಸ್ಸರ್ವರಕ್ಷಸಾಂ ನಾಥಸ್ತಾಪಸಾನಾಂ ಫಲಪ್ರದಃ ॥ ೨೩ ॥**

**ಮನ್ನಿಯೋಗಾದಸೌ ದೇವೋ ವರ್ತತೇ ನಿರ್ಋತಿಸ್ಸದಾ ।**
**ವೇತಾಳಗಣಭೂತಾನಾಂ ಸ್ವಾಮೀ ಭೋಗಫಲಪ್ರದಃ ॥ ೨೪ ॥**

**ಈಶಾನಸ್ಸರ್ವಭಕ್ತಾನಾಂ ಸೋಽಪಿ ತಿಷ್ಠೇನ್ಮಮಾಜ್ಞಯಾ ।**
**ಯೋ ವಾಮದೇವೋಽಂಗಿರಸಃ ಶಿಷ್ಯೋ ರುದ್ರಗಣಾಗ್ರಣೀಃ ॥ ೨೫ ॥**

**ರಕ್ಷಕೋ ಯೋಗಿನಾಂ ನಿತ್ಯಂ ವರ್ತತೇಽಸೌ ಮದಾಜ್ಞಯಾ ।**
**ಯಶ್ಚ ಸರ್ವಜಗತ್ಪೂಜ್ಯೋ ವರ್ತತೇ ವಿಘ್ನಕಾರಕಃ ॥ ೨೬ ॥**

**ವಿನಾಯಕೋ ಧರ್ಮನೇತಾ ಸೋಽಪಿ ಮದ್ವಚನಾತ್ಕಿಲ ।**
**ಯೋಽಪಿ ವೇದವಿದಾಂ ಶ್ರೇಷ್ಠೋ ದೇವಸೇನಾಪತಿಃ ಪ್ರಭುಃ ॥ ೨೭ ॥**

೨೩. ರಾಕ್ಷಸರಿಗೆ ಅಧಿಪನಾದ ತಪಸ್ಸಿಗೆ ಫಲದಾಯಕನಾದ ನಿರ್ಋತಿಯು ನನ್ನ ಅಪ್ಪಣೆಯನ್ನು ಪಾಲಿಸುತ್ತಲೇ ಇರುವನು.

೨೪. ಬೇತಾಳ, ಭೂತಗಳು ಇವುಗಳಿಗೆ ಒಡೆಯನಾದ ಭೋಗದಫಲವನ್ನು ಕೊಡುವ ಭಕ್ತರಿಗೆ ಕೇಳಿದುದನ್ನು ಕೊಡುವ ಈಶಾನನು ನನ್ನ ಅಪ್ಪಣೆಯ ಮೇರೆಗೆ ಇರುವನು.

೨೫. ಅಂಗೀರಸನ ಶಿಷ್ಯನಾದ ವಾಮದೇವನೆಂಬ ಹೆಸರುಳ್ಳ ರುದ್ರಗಣಗಳಲ್ಲಿ ಮೊದಲನೆಯವನಾದ ಯೋಗಿಗಳಿಗೆ ರಕ್ಷಕನಾದ ವಾಮದೇವನು ನನ್ನ ಅಪ್ಪಣೆಯಂತೆ ಇದ್ದುಕೊಂಡಿರುತ್ತಾನೆ.

೨೬. ಜಗತ್ತಿಗೆ ಪೂಜ್ಯನಾಗಿ ವಿಘ್ನವನ್ನುಂಟುಮಾಡುವವನಾಗಿ ಧರ್ಮಕ್ಕೆ ಒಡೆಯನಾದ ವಿನಾಯಕನು ನನ್ನ ಅಪ್ಪಣೆಯಂತೆಯೇ ಇರುವನು.

೨೭. ವೇದವನ್ನು ಬಲ್ಲವರಲ್ಲಿ ಶ್ರೇಷ್ಠನಾದ ದೇವತೆಗಳ ಸೇನಾಪತಿಯಾದ ಸ್ಕಂದನು ನನ್ನ ಅಪ್ಪಣೆಯನ್ನು ಹೊಂದಿಯೇ ಇರುವನು.

ಸ್ಕಂದೋಸೌ ವರ್ತತೇ ನಿತ್ಯಂ ಸ್ವಯಂಭೂಪ್ರತಿಚೋದಿತ ।
ಯೇ ಚ ಪ್ರಜಾನಾಂ ಪತಯೋ ಮರೀಚ್ಯಾದ್ಯಾ ಮಹರ್ಷಯಃ ॥ ೨೮ ॥

ಸೃಜಂತಿ ವಿವಿಧಂ ಲೋಕಂ ಪರಸ್ಯೈವ ನಿಯೋಗತಃ ।
ಯಾ ಚ ಶ್ರೀಃ ಸರ್ವಭೂತಾನಾಂ ದದಾತಿ ವಿಪುಲಾಂ ಶ್ರಿಯಂ ॥ ೨೯ ॥

ಪತ್ನೀ ನಾರಾಯಣಸ್ಯಾಸೌ ವರ್ತತೇ ಮದನುಗ್ರಹಾತ್ ।
ವಾಚಂ ದದಾತಿ ವಿಪುಲಾಂ ಯಾ ಚ ದೇವೀ ಸರಸ್ವತೀ ॥ ೩೦ ॥

ಸಾಪೀಶ್ವರನಿಯೋಗೇನ ಚೋದಿತಾ ಸಂಪ್ರವರ್ತತೇ ।
ಯಾಶೇಷಪುರುಷಾ ಘೋರಾತ್ ನರಕಾತ್ತಾರಯತ್ಯಪಿ ॥ ೩೧ ॥

ಸಾವಿತ್ರೀ ಸಂಸ್ಮೃತಾ ದೇವೀ ದೇವಾಜ್ಞಾನುವಿಧಾಯಿನೀ ।
ಪಾರ್ವತೀ ಪರಮಾ ದೇವೀ ಬ್ರಹ್ಮವಿದ್ಯಾ ಪ್ರದಾಯಿನೀ ॥ ೩೨ ॥

೨೮. ಪ್ರಜೆಗಳಿಗೆ ಪತಿಗಳು ಎನ್ನಿಸಿಕೊಂಡು ಇರುವ ಮರೀಚಿಯೇ ಮುಂತಾದ ಋಷಿಗಳು ನನ್ನ ಅಪ್ಪಣೆಯ ಮೇರೆಗೆ ನಾನಾ ಬಗೆಯಾದ ಪ್ರಾಣಿಗಳನ್ನು ಸೃಷ್ಟಿಸುವರು.

೨೯. ಎಲ್ಲಾ ಪ್ರಾಣಿಗಳಿಗೂ ಬಹುವಾದ ಸಂಪತ್ತನ್ನು ಕೊಡುವ ನಾರಾಯಣನಿಗೆ ಹೆಂಡತಿಯಾದ ಲಕ್ಷ್ಮಿಯು ನನ್ನ ಅನುಗ್ರಹದಿಂದಲೇ ಹಾಗಿರುವಳು.

೩೦. ಎಲ್ಲರಿಗೂ ಬೇಕಾದಂತೆ ಮಾತನ್ನು ಕೊಡುವ ಸರಸ್ವತಿಯು ಆ ಈಶ್ವರನ ಅಪ್ಪಣೆಯಂತೆಯೇ ಇರುವಳು.

೩೧. ನರಕಕ್ಕೆ ಬೀಳದಂತೆ ಜನಗಳನ್ನು ಕಾಪಾಡುವ ಸಾವಿತ್ರಿ ಎಂಬ ದೇವಿಯು ನಮ್ಮ ಅಪ್ಪಣೆಯಂತಿದ್ದಾಳೆ.

೩೨. ಧ್ಯಾನ ಮಾಡಿದವರಿಗೆಲ್ಲಾ ಬ್ರಹ್ಮ ವಿದ್ಯೆಯನ್ನು ಬೋಧಿಸುವ ಪಾರ್ವತಿಯು ನನ್ನ ಅಪ್ಪಣೆಯಂತೆಯೇ ಇರುವಳು.

ಯಾಪಿ ಧ್ಯಾತಾ ವಿಶೇಷೇಣ ಸಾಪಿ ಮದ್ವಚನಾನುಗಾ ।
ಯೋಽನಂತೋಽ ಮಹಿಮಾನಂತಃ ಶೇಷೋಽಶೇಷಾಮರಪ್ರಭುಃ ॥ ೩೩ ॥

ದಧಾತಿ ಶಿರಸಾ ಲೋಕಂ ಸೋಽಪಿ ದೇವನಿಯೋಗತಃ ।
ಯೋಽಗ್ನಿಃ ಸಂವರ್ತಕೋಽ ನಿತ್ಯಂ ಬಡಬಾರೂಪಸಂಸ್ಥಿತಃ ॥ ೩೪ ॥

ಪಿಬತ್ಯಖಿಲಮಂಭೋಧಿಮೀಶ್ವರಸ್ಯ ನಿಯೋಗತಃ ।
ಆದಿತ್ಯಾ ವಸವೋ ರುದ್ರಾ ಮರುತಶ್ಚ ತಥಾಶ್ವಿನೌ ॥ ೩೫ ॥

ಅನ್ಯಾಶ್ಚ ದೇವತಾಸ್ಸರ್ವಾ ಮಚ್ಛಾಸನಮಧಿಷ್ಠಿತಾಃ ।
ಗಂಧರ್ವಾ ಉರಗಾ ಯಕ್ಷಾಃ ಸಿದ್ಧಾಃ ಸಾಧ್ಯಾಶ್ಚ ಚಾರಣಾಃ ॥ ೩೬ ॥

ಭೂತರಕ್ಷಃಪಿಶಾಚಾಶ್ಚ ಸ್ಥಿತಾಃ ಶಾಸ್ತ್ರೇ ಸ್ವಯಂಭುವಃ ।
ಕಲಾ ಕಾಷ್ಠಾ ನಿಮೇಷಾಶ್ಚ ಮುಹೂರ್ತಾ ದಿರಸಾಃ ಕ್ಷಣಾಃ ॥ ೩೭ ॥

---

೩೩. ಅನಂತವಾದ ಮಹಿಮೆಯುಳ್ಳ ಎಲ್ಲಾ ದೇವತೆಗಳಿಗೂ ಒಡೆಯನಾದ ಶೇಷನು ನನ್ನ ಅಪ್ಪಣೆಯಂತೆ ಲೋಕಗಳನ್ನು ತಲೆಯಿಂದ ಹೊತ್ತಿರುವನು.

೩೪. ಸಂವರ್ತಕನೆಂಬ ಅಗ್ನಿಯು ನಿತ್ಯವೂ ಬಡಬೆಯ ರೂಪವನ್ನು ಹೊಂದಿ ಸಮುದ್ರವನ್ನೆಲ್ಲಾ ಕುಡಿಯುತ್ತಿರುವುದು ನನ್ನ ಅಪ್ಪಣೆಯಂತೆಯೇ.

೩೫. ಆದಿತ್ಯರು, ವಸುಗಳು, ರುದ್ರರು, ಮರುತ್ತುಗಳು, ಅಶ್ವಿನೀದೇವತೆಗಳು ಮಿಕ್ಕ ಎಲ್ಲಾ ದೇವತೆಗಳೂ ಕೂಡ ನನ್ನ ಅಪ್ಪಣೆಯಂತೆಯೇ ಇದ್ದಾರೆ.

೩೬. ಗಂಧರ್ವರು, ಉರಗರು, ಯಕ್ಷರು, ಸಿದ್ಧರು, ಸಾಧ್ಯರು, ಚಾರಣರು, ಭೂತಗಳು, ರಕ್ಷರು, ಪಿಶಾಚರು ಇವರೆಲ್ಲರೂ ನನ್ನ ಅಪ್ಪಣೆಯಂತೆ ಇದ್ದುಕೊಂಡಿರುವರು.

೩೭. ಕಲೆಗಳು, ಕಾಷ್ಠಗಳು, ನಿಮೇಷಗಳು, ಮುಹೂರ್ತಗಳು, ದಿವಸಗಳ, ಕ್ಷಣಗಳು, ಋತುಗಳು, ವರ್ಷಗಳು, ಪಕ್ಷಗಳು ಇವೆಲ್ಲವೂ ಕೂಡ ನನ್ನ ಅಪ್ಪಣೆಯಂತೆ ನಡೆದುಕೊಂಡಿವೆ.

ಋತ್ವಬ್ದಮಾಸಪಕ್ಷಾಶ್ಚ ಸ್ಥಿತಾಃ ಶಾಸ್ತ್ರೇ ಪ್ರಜಾಪತೇಃ ।
ಯುಗಮನ್ವಂತರಾಣ್ಯೇವ ಮಮ ತಿಷ್ಠಂತಿ ಶಾಸನೇ ॥ ೩೮ ॥

ಪರಾಶ್ಚೈವ ಪರಾರ್ಧಾಶ್ಚ ಕಾಲಭೇದಾಸ್ತಥಾಪರೇ ।
ಚತುರ್ವಿಧಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥ ೩೯ ॥

ನಿಯೋಗಾದೇವ ವರ್ತಂತೆ ಸರ್ವಾಣ್ಯೇವ ಸ್ವಯಂಭುವಃ ।
ಪತ್ತನಾನಿ ಚ ಸರ್ವಾಣಿ ಭುವನಾನಿ ಚ ಶಾಸನಾತ್ ॥ ೪೦ ॥

ಬ್ರಹ್ಮಾಂಡಾನಿ ಚ ವರ್ತಂತೇ ದೇವಸ್ಯ ಪರಮಾತ್ಮನಃ ।
ಅತೀತಾನ್ಯಪ್ಯಸಂಖ್ಯಾನಿ ಬ್ರಹ್ಮಾಂಡಾನಿ ಮದಾಜ್ಞಯಾ ॥ ೪೧ ॥

ಪ್ರವೃತ್ತಾನಿ ಪದಾರ್ಥೌಘೈಃ ಸಹಿತಾನಿ ಸಮಂತತಃ ।
ಬ್ರಹ್ಮಾಂಡಾನಿ ಭವಿಷ್ಯಂತಿ ಸಹ ವಸ್ತುಭಿರಾತ್ಮಗೈಃ ॥ ೪೨ ॥

೩೮-೩೯. ಯುಗಗಳು, ಮನ್ವಂತರಗಳು, ಪರಗಳು, ಪರಾರ್ಧಗಳು, ಕಾಲ ಭೇದಗಳು, ನಾಲ್ಕು ಬಗೆಯ ಭೂತಗಳು, ಸ್ಥಾವರಜಂಗಮಗಳು ಇವೆಲ್ಲವೂ ಕೂಡ ನನ್ನ ಅಪ್ಪಣೆಯಂತಿವೆ.

೪೦. ಪಟ್ಟಣಗಳು, ರಾಜ್ಯಗಳು, ಲೋಕಗಳು, ಬ್ರಂಹ್ಮಾಂಡಗಳು, ಇವೆಲ್ಲವೂ ಕೂಡ ನನ್ನ ಅಪ್ಪಣೆಯಂತೆ ನಡೆದುಕೊಂಡಿವೆ.

೪೧. ಅನೇಕವಾದ ಬ್ರಂಹ್ಮಾಂಡಗಳು ನನ್ನ ಅಪ್ಪಣೆಯಂತೆ ಕಳೆದು ಹೋದುವು. ಅನೇಕ ಬ್ರಹ್ಮಾಂಡಗಳು ಪದಾರ್ಥಗಳೊಡನೆ ಎಲ್ಲಾ ಕಡೆಯಲ್ಲಿಯೂ ಉಂಟಾದುವು.

೪೨. ಅನೇಕವಾದ ಬ್ರಹ್ಮಾಂಡಗಳು ಅವುಗಳಲ್ಲಿರುವ ಪದಾರ್ಥಗಳೊಡನೆ ಮುಂದೆಯೂ ಹುಟ್ಟುತ್ತವೆ. ಅವೆಲ್ಲವೂ ಕೂಡ ಪರಮಾತ್ಮನ ಅಪ್ಪಣೆಯನ್ನು ಪಾಲಿಸುತ್ತವೆ.

**ಹರಿಷ್ಯಂತಿ ಸಹೈವಾಜ್ಞಾಂ ಪರಸ್ಯ ಪರಮಾತ್ಮನಃ ।**
**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ॥ ೪೩ ॥**

**ಭೂತಾದಿರಾದಿ ಪ್ರಕೃತಿಃ ನಿಯೋಗಾನ್ಮಮ ವರ್ತತೇ ।**
**ಯಾಶೇಷಸರ್ವಜಗತಾಂ ಮೋಹಿನೀ ಸರ್ವದೇಹಿನಾಂ ॥ ೪೪ ॥**

**ಮಾಯಾಪಿ ವರ್ತತೇ ನಿತ್ಯಂ ಸಾಪೀಶ್ವರನಿಯೋಗತಃ ।**
**ವಿಧೂಯಮೋಹಕಲಿಲಂ ಯಯಾ ಪಶ್ಯತಿ ತತ್ಪದಂ ॥ ೪೫ ॥**

**ಸಾಪಿ ವಿದ್ಯಾಮಹೇಶಸ್ಯ ನಿಯೋಗಾದ್ವಶವರ್ತಿನೀ ।**
**ಬಹುನಾತ್ರ ಕಿಮುಕ್ತೇನ ಮಮಶಕ್ತ್ಯಾತ್ಮಕಂ ಜಗತ್ ॥ ೪೬ ॥**

**ಮಯ್ಯೈವ ಪೂರ್ಯತೇ ವಿಶ್ವಂ ಮಯ್ಯೇವ ಪ್ರಲಯಂ ವ್ರಜೇತ್ ।**
**ಅಹಂ ಹಿ ಭಗವಾನೀಶಃ ಸ್ವಯಂಜ್ಯೋತಿಸ್ಸನಾತನಃ ॥ ೪೭ ॥**

೪೩. ಭೂಮಿ, ನೀರು, ಬೆಂಕಿ, ವಾಯು, ಆಕಾಶ, ಮನಸ್ಸು, ಬುದ್ಧಿ ಇವೇ ಮುಂತಾದ ಪ್ರಾಣಿಗಳ ಮುಖ್ಯ ಪದಾರ್ಥಗಳು ನನ್ನ ಅಪ್ಪಣೆಯಂತೆ ನಡೆಯುತ್ತವೆ.

೪೪. ಎಲ್ಲಾ ಪ್ರಪಂಚಗಳಿಗೂ ಮತ್ತು ದೇಹಿಗಳಿಗೂ ಅಜ್ಞಾನವನ್ನು ತಂದೊದಗಿಸುವ ಮಾಯೆಯೂ ಕೂಡ ನನ್ನ ಅಪ್ಪಣೆಯಂತೆ ನಡೆದುಕೊಳ್ಳುತ್ತವೆ.

೪೫. ಮನುಷ್ಯನು ಮೋಹಜಾಲವನ್ನು ತಿರಸ್ಕರಿಸಿ ಪರಮಪದವನ್ನು ನೋಡುವ ಆ ಉತ್ತಮ ವಿದ್ಯೆಯೂ ಕೂಡ ನನ್ನ ಅಪ್ಪಣೆಯಂತೆಯೇ ಇರುತ್ತದೆ.

೪೬. ಬಹುವಾಗಿ ಹೇಳಿದುದರಿಂದ ಪ್ರಯೋಜನವೇನು? ಜಗತ್ತೇ ನನ್ನ ಶಕ್ತಿಯಿಂದ ಕೂಡಿದೆ. ನಾನೇ ಪ್ರಪಂಚವನ್ನು ಇರುವಂತೆ ಸೃಷ್ಟಿಸುತ್ತೇನೆ. ಅದು ನನ್ನಲ್ಲಿಯೇ ಮತ್ತೆ ಅಡಗುತ್ತದೆ.

೪೭. ನಾನೇ ಈಶ್ವರನು ನಾನೇ ಜ್ಯೋತಿಸ್ವರೂಪನು, ನಾನೇ ಸನಾತನನು, ನಾನೇ ಪರಮಾತ್ಮನು, ನಾನೇ ಪರಂಜ್ಯೋತಿಯು, ನಾನೇ ಬ್ರಹ್ಮನು, ನನಗಿಂತ ಬೇರೆಯದಾವುದೂ ಇರುವುದೇ ಇಲ್ಲ.

**ಪರಮಾತ್ಮ ಪರಂ ಬ್ರಹ್ಮ ಮತ್ತೋಽಹ್ಯನ್ಯನ್ನ ವಿದ್ಯತೇ ।**
**ಇತ್ಯೇ ತತ್ಪರಮಂ ಜ್ಞಾನಂ ಭವತೇ ಕಥಿತಂ ಮಯಾ ॥ ೪೮ ॥**

**ಜ್ಞಾತ್ವಾ ವಿಮುಚ್ಯತೇ ಜಂತು ಜನ್ಮಸಂಸಾರಬಂಧನಾತ್ ।**
**ಮಾಯಾಮಾಶ್ರಿತ್ಯ ಜಾತೋಽಹಂ ಗೃಹೇ ದಶರಥಸ್ಯ ಹಿ ॥ ೪೯ ॥**

**ರಾಮೋಽಹಂ ಲಕ್ಷ್ಮಣೋ ಹ್ಯೇಷಃ ಶತ್ರುಘ್ನೋ ಭರತೋಽಪಿ ಚ ।**
**ಚತುರ್ಧಾ ಸಂಪ್ರಭೂತೋಽಹಂ ಕಥಿತಂ ತೇಽನಿಲಾತ್ಮಜ ॥ ೫೦ ॥**

**ಮಯಾ ಸ್ವರೂಪಂ ಚ ತವ ಕಥಿತಂ ಯತ್ ಪ್ಲವಂಗಮ ।**
**ಕೃಪಯಾ ತದ್ಧೃದಾ ಧಾರ್ಯಂ ನ ವಿಸ್ಮರ್ತವ್ಯಮೇವ ಹಿ ॥ ೫೧ ॥**

**ಯೇನೇದಂ ಪಠ್ಯತೇ ನಿತ್ಯಂ ಸಂವಾದೋ ಭವತೋ ಮಮ ।**
**ಜೀವನ್ಮುಕ್ತೋ ಭವೇತ್ಸೋಽಪಿ ಸರ್ವಪಾಪೈಃ ಪ್ರಮುಚ್ಯತೇ ॥ ೫೨ ॥**

---

೪೮. ಇದೇ ಪರಮಜ್ಞಾನವು. ಇದನ್ನು ನಿನಗೆ ಹೇಳಿದ್ದೇನೆ. ಇದನ್ನು ತಿಳಿದರೆ ಪ್ರಾಣಿಯು ಸಂಸಾರದಿಂದ ಮುಕ್ತನಾಗುತ್ತಾನೆ.

೪೯–೫೦. ನಾನು ಮಾಯೆಯನ್ನು ಆಶ್ರಯಿಸಿಕೊಂಡು ದಶರಥನ ಮನೆಯಲ್ಲಿ ಹುಟ್ಟಿದ್ದೇನೆ. ನಾನೇ ರಾಮನು, ಇವನೇ ಲಕ್ಷ್ಮಣನು, ಭರತ ಶತ್ರುಘ್ನರೆಂಬುವರು ಬೇರೆ ಇರುವರು. ಹೀಗೆ ನಾಲ್ಕು ಭಾಗವಾಗಿ ಹುಟ್ಟಿದ್ದೇನೆ. ಎಲೈ ಹನುಮಂತನೇ! ಇದನ್ನೆಲ್ಲಾ ನಿನಗೆ ನಾನು ಹೇಳಿದ್ದೇನೆ.

೫೧. ಎಲೈ ಕಪಿಶ್ರೇಷ್ಠನೇ! ನಾನು ಹೇಳಿದ ಈ ನನ್ನ ಸ್ವರೂಪವನ್ನು ಮರೆಯಬೇಡ. ದಯಪಿಟ್ಟು ಇದನ್ನು ಮನಸ್ಸಿನಲ್ಲಿಟ್ಟುಕೋ.

೫೨. ಎಲೈ ಕಪಿಯೇ! ನಿನ್ನ ನನ್ನ ಈ ಸಂವಾದವನ್ನು ಯಾವನು ನಿತ್ಯವೂ ಓದುತ್ತಾನೆಯೋ ಅವನು ಪಾಪಗಳನ್ನೆಲ್ಲಾ ಕಳೆಗುಕೊಂಡು ಜೀವನ್ಮುಕ್ತನಾಗುತ್ತಾನೆ.

ಶ್ರಾವಯೇದ್ವಾ ದ್ವಿಜಾನ್ ಶುದ್ಧಾನ್ ಬ್ರಹ್ಮಚರ್ಯಪರಾಯಣಾನ್ ।
ಯೋ ವಾ ವಿಚಾರಯೇದರ್ಥಂ ಸ ಯಾತಿ ಪರಮಾಂ ಗತಿಂ ॥ ೫೩ ॥

ಯಶ್ಚೈತಚ್ಛೃಣುಯಾನ್ನಿತ್ಯಂ ಭಕ್ತಿಯುಕ್ತೋ ದೃಢವ್ರತಃ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೫೪ ॥

ತಸ್ಮಾತ್ಸರ್ವಪ್ರಯತ್ನೇನ ಪಠಿತವ್ಯೋ ಮುನೀಷಿಭಿಃ ।
ಶ್ರೋತವ್ಯಶ್ಚಾಪಿ ಮಂತವ್ಯೋ ವಿಶೇಷಾದ್ಬ್ರಾಹ್ಮಣೈಸ್ಸದಾ ॥ ೫೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಭಗವದ್ಧನುಮತ್ಸಂವಾದೋ
ನಾಮ ಚತುರ್ದಶಃ ಸರ್ಗಃ



೫೩. ಯಾವನು ಶುದ್ಧರೂ, ಬ್ರಹ್ಮಚಾರಿಗಳೂ ಆದವರಿಗೆ ಇದನ್ನು ಹೇಳುತ್ತಾನೆಯೋ ಅವನು ಪಾಪವನ್ನು ಕಳೆದುಕೊಂಡು ಶುದ್ಧನಾಗುತ್ತಾನೆ. ಯಾವನು ಇದರ ಅರ್ಥವನ್ನು ವಿಚಾರಿಸುತ್ತಾನೆಯೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

೫೪. ಯಾವನು ಭಕ್ತಿಯಿಂದ ಕೂಡಿಕೊಂಡು ದೃಢವ್ರತನಾಗಿ ಇದನು ಕೇಳುತ್ತಾನೆಯೋ ಅವನು ಪಾಪವನ್ನು ಕಳೆದುಕೊಂಡು ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೫೫. ಆದ್ದರಿಂದ ಜ್ಞಾನಿಗಳು ಪ್ರಯತ್ನಪಟ್ಟು ಇದನ್ನು ಕೇಳಬೇಕು, ಓದಬೇಕು, ಮನನ ಮಾಡಿಕೊಳ್ಳಬೇಕು, ಬ್ರಾಹ್ಮಣರಾದವರು ವಿಶೇಷದಿಂದ ಓದಬೇಕು.

ಇಂತು ವಾಲ್ಮೀಕಿ ಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಹದಿನಾಲ್ಕನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತ ರಾಮಾಯಣೇ

## ಅಥ ಪಂಚದಶಃ ಸರ್ಗಃ



ಧ್ಯಾತ್ವಾ ಹೃದಿಸ್ಥಂ ಪ್ರಣಿಪತ್ಯ ಮೂರ್ಧ್ನಾ
ಬದ್ಧಾಂಜಲಿರ್ವಾಯುಸುತೋ ಮಹಾತ್ಮಾ ।
ಓಂ ಕಾರಮುಚ್ಚಾರ್ಯ ವಿಲೋಕ್ಯ-ದೇವ
ಮಂತಃಶರೀರೇ ನಿಹಿತಂ ಗುಹಾಯಾಂ ॥ ೧ ॥

ರಾಮಂ ಮಹಾತ್ಮನಮಕುಂಠಶಕ್ತಿಂ
ಸನಂದಮುಖ್ಯೈಃ ಸ್ತುತಮಪ್ರಮೇಯಂ ।
ತುಷ್ಟಾವ ಚ ಬ್ರಹ್ಮಮಯೈರ್ವಚೋಭಿ
ರಾನಂದಪೂರ್ಣಾಯತಮಾನಸಃ ಸನ್ ॥ ೨ ॥

## ಹದಿನೈದನೆಯ ಸರ್ಗವು

೧. ವಾಯುವಿನ ಮಗನಾದ ಹನುಮಂತನು ಇದನ್ನು ಕೇಳಿ ಹೃದಯದಲ್ಲಿಯೇ ಇರುವ ಆ ಸ್ವಾಮಿಯನ್ನೇ ಧ್ಯಾನಮಾಡುತ್ತ ಕೈಮುಗಿದುಕೊಂಡು ಓಮ್ ಎಂದು ಉಚ್ಚಾರ ಮಾಡುತ್ತ ಶರೀರದ ಹೃದಯವೆಂಬ ಗುಹೆಯಲ್ಲಿ ಇರುತ್ತಿರುವ ಆ ಸ್ವಾಮಿಯನ್ನು ನೋಡಿದನು.

೨. ಮಹಾತ್ಮನೂ ಅಗಾಧ ಶಕ್ತಿವಂತನೂ ಸನಂದನೇ ಮುಂತಾದವರಿಂದ ಹೊಗಳಲ್ಪಡತಕ್ಕವನೂ ಅಳತೆಗೆ ಸಿಕ್ಕದವನೂ ಆದ ಆ ರಾಮನನ್ನು ಹನುಮಂತನು ಆನಂದದಿಂದ ತುಂಬಿರುವ ಮನಸ್ಸುಳ್ಳವನಾಗಿ ಬ್ರಹ್ಮರೂಪವನ್ನು ಹೇಳುವ ಮಾತುಗಳಿಂದ ಸ್ತುತಿಸಿದನು.

ತ್ವಾಮೇಕಮೀಶಂ ಪುರುಷಂ ಪುರಾಣಂ
ಪ್ರಾಣೇಶ್ವರಂ ರಾಮಮನಂತಯೋಗಂ ।
ನಮಾಮಿ ಸರ್ವಾಂತರಸನ್ನಿವಿಷ್ಟಂ
ಪ್ರಚೇತಸಂ ಬ್ರಹ್ಮಮಯಂ ಪವಿತ್ರಂ ॥ ೩ ॥

ಪಶ್ಯಂತಿ ತ್ವಾಂ ಮುನಯೋ ಬ್ರಹ್ಮಯೋನಿಂ
ದಾಂತಾಶ್ಶಾಂತಾ ವಿಮಲಂ ರುಕ್ಮವರ್ಣಂ ।
ಧ್ಯಾತ್ವಾತ್ಮಸ್ಥಮಚಲಂ ಸ್ವೇ ಶರೀರೇ
ಕವಿಂ ಪರೇಭ್ಯಃ ಪರಮಂ ಪರಂ ಚ ॥ ೪ ॥

ತ್ವತ್ತಃ ಪ್ರಸೂತಾ ಜಗತಃ ಪ್ರಸೂತಿಃ
ಸರ್ವಾತ್ಮಸೃಷ್ಟೇಃ ಪರಮಾಣುಭೂತಃ ।
ಅಣೋರಣೀಯಾನ್ ಮಹತೋ ಮಹೀಯಾನ್
ತ್ವಾಮೇವ ಸರ್ವಂ ಪ್ರವದಂತಿ ಸಂತಃ ॥ ೫ ॥

೩. ಏಕನೂ, ಈಶ್ವರನೂ, ಪುರಾಣಪುರುಷನೂ, ಪ್ರಾಣೇಶ್ವರನೂ, ಅನಂತ ಮೂರ್ತಿಯೂ, ಎಲ್ಲರಲ್ಲಿಯೂ ಇರತಕ್ಕವನೂ, ಒಳ್ಳೆಯ ಮನಸ್ಸುಳ್ಳವನೂ ಬ್ರಹ್ಮ ವಿಕಾರನೂ, ಪವಿತ್ರನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ.

೪. ಎಲೈ ಸ್ವಾಮಿಯೇ! ಬ್ರಹ್ಮನಿಗೂ ಉತ್ಪತ್ತಿಸ್ಥಾನನಾದ ನಿನ್ನನ್ನು ಮುನಿಗಳು ನೋಡಬಲ್ಲರು. ಅವರು ನೋಡಬೇಕಾದರೆ ಶಾಂತಿಯೂ ಇಂದ್ರಿಯ ನಿಗ್ರಹವೂ ಅವಶ್ಯಕವು. ಅಂತಹವರು ಸ್ವರ್ಣದ ವರ್ಣವುಳ್ಳ ನಿನ್ನನ್ನು ನೋಡ ಬಲ್ಲರು. ತಮ್ಮಲ್ಲಿಯೇ ಇರುವ ಅಚಲವಾದ ಎಲ್ಲವನ್ನೂ ನೋಡತಕ್ಕ ಎಲ್ಲರಿಗಿಂತಲೂ ಉತ್ಕೃಷ್ಟನಾದ ಪರಾತ್ಪರನಾದ ನಿನ್ನನ್ನು ಆ ಮುನಿಗಳು ತಿಳಿದು ಧ್ಯಾನಿಸುತ್ತಾರೆ.

೫. ಜಗತ್ತೆಲ್ಲವನ್ನೂ ಸೃಷ್ಟಿ ಮಾಡುವ ಬ್ರಹ್ಮನು ನಿನ್ನಿಂದ ಉತ್ಪನ್ನ ನಾದವನು. ಎಲ್ಲಾ ಪ್ರಾಣಿಗಳ ಆತ್ಮ ಸೃಷ್ಟಿಯಾಗುವುದಕ್ಕೆ ಪರಮಾಣುರೂಪನಾದ ನೀನೇ ಕಾರಣನಾಗಿದ್ದೀಯೆ. ನೀನು ಅಣುವಿಗಿಂತಲೂ ಅಣುವು. ಮಹತ್ತಿಗಿಂತಲೂ ಮಹಾ ಪದಾರ್ಥವು. ಎಲ್ಲವೂ ನೀನೇ ಆಗಿದ್ದೀಯೆ. ಎಂದು ತಿಳಿದವರು ಹೇಳುತ್ತಾರೆ.

ಹಿರಣ್ಯಗರ್ಭೋಽಜಗದಂತರಾತ್ಮಾ
ತ್ವತ್ತೋಽಧಿಜಾತಃ ಪುರುಷಃ ಪುರಾಣಃ ।
ಸ ಜಾಯಮಾನೋಽ ಭವತಾ ವಿಸೃಷ್ಟೋಽ
ಯಥಾವಿಧಾನಂ ಸಕಲಂ ಸಸರ್ಜ ॥ ೬ ॥

ತ್ವತ್ತೋಽವೇದಾಃ ಸಕಲಾಸ್ಸಂಪ್ರವೃತ್ತಾಃ
ತ್ವಯ್ಯೇವಾಂತೇಽ ಸಂಸ್ಥಿತಿಂ ತೇಽ ಲಭಂತೇಽ ।
ಪಶ್ಯಾಮಿ ತ್ವಾಂ ಜಗತೋಽ ಹೇತುಭೂತಂ
ನೃತ್ಯಂತಂ ಸ್ವೇಽ ಹೃದಯೇಽ ಸನ್ನಿವಿಷ್ಟಂ ॥ ೭ ॥

ತ್ವಯ್ಯೈವೇದಂ ಭ್ರಾಮ್ಯತೇಽ ಬ್ರಹ್ಮಚಕ್ರಂ
ಮಯಾವೀಽ ತ್ವಂ ಜಗತಾಮೇಽಕನಾಥಃ ।
ನಮಾಮಿ ತ್ವಾಂ ಶರಣಂ ಸಂಪ್ರಪದ್ಯೇಽ
ಯೋಽಗಾತ್ಮಾನಂ ಚಿತ್ಪತಿಂ ದಿವ್ಯನೃತ್ಯಂ ॥ ೮ ॥

೬. ಹಿರಣ್ಯಗರ್ಭನಾದ ಜಗತ್ತಿಗೆ ಆತ್ಮಸ್ವರೂಪನಾದ ಆ ಪುರಾಣಪುರುಷನಾದ ಬ್ರಹ್ಮನು ನಿನ್ನಿಂದಲೇ ಉತ್ಪನ್ನನಾದನು, ಅವನನ್ನು ಉತ್ಪತ್ತಿ ಮಾಡಿಬಿಟ್ಟೊಡನೆಯೇ ಅವನು ಎಲ್ಲವನ್ನೂ ಕ್ರಮವಾಗಿ ಸೃಷ್ಟಿಮಾಡಿದನು.

೭. ಸಕಲ ವೇದಗಳೂ ನಿನ್ನಿಂದ ಹುಟ್ಟಿದುವು. ಪ್ರಳಯಕಾಲದಲ್ಲಿ ನಿನ್ನಲ್ಲಿಯೇ ಅವು ಬಂದು ಸೇರುತ್ತವೆ. ಜಗತ್ತಿಗೆ ಕಾರಣಭೂತನಾದ ಹೃದಯಾಕಾಶದಲ್ಲಿದ್ದುಕೊಂಡು ಕುಣಿಯುತ್ತಿರುವ ನಿನ್ನನ್ನು ಯಾವಾಗಲೂ ನೋಡುತ್ತಿರುತ್ತೇನೆ.

೮. ಬ್ರಹ್ಮನ ಈ ಚಕ್ರವನ್ನು (ಬ್ರಹ್ಮಾಂಡವನ್ನು) ನೀನು ನಡೆಸುತ್ತಿದ್ದೀಯೆ. ನೀನು ಮಾಯಾವಿಯು. ಪ್ರಪಂಚಕ್ಕೆಲ್ಲವೂ ಒಡೆಯನು, ನಿನಗೆ ನಮಸ್ಕರಿಸುತ್ತೇನೆ, ನಿನ್ನನ್ನು ಮರೆಹೊಗುತ್ತೇನೆ, ನೀನು ಯೋಗಾತ್ಮನು, ಚಿತ್ತಿಗೆ ಯಜಮಾನನು (ಚಿದ್ರೂಪನು) ಉತ್ತಮವಾದ ಆಟವುಳ್ಳವನು.

ಪಶ್ಯಾಮಿ ತ್ವಾಂ ಪರಮಾಕಾಶಮಧ್ಯೇ
ನೃತ್ಯಂತಂ ತೇ ಮಹಿಮಾನಂ ಸ್ಮರಾಮಿ ।
ಸರ್ವಾತ್ಮಾನಂ ಬಹುಧಾ ಸನ್ನಿವಿಷ್ಟಂ
ಬ್ರಹ್ಮಾನಂದ ಮನುಭೂಯಾನುಭೂಯ ॥ ೯ ॥

ಓಂಕಾರಸ್ತೇ ವಾಚಕೋ ಮುಕ್ತಿಬೀಜಂ
ತ್ವಾಮಕ್ಷರಂ ಪ್ರಕೃತೌ ಗೂಢರೂಪಂ ।
ತಂ ತ್ವಾಂ ಸತ್ಯಂ ಪ್ರವದಂತೀಹ ಸಂತಃ
ಸ್ವಯಂ ಪ್ರಭಂ ಭವತೋ ಯತ್ಪ್ರಕಾಶಂ ॥ ೧೦ ॥

ಸ್ತುವಂತಿ ತ್ವಾಂ ಸತತಂ ಸರ್ವದೇವಾಃ
ನಮಂತಿ ತ್ವಾಮೃಷಯಃ ಕ್ಷೀಣದೋಷಾಃ ।
ಶಾಂತಾತ್ಮಾನಃ ಸತ್ಯಸಂಧಂ ವರಿಷ್ಠಂ
ವಿಶಂತಿ ತ್ವಾಂ ಯತಯೋ ಬ್ರಹ್ಮನಿಷ್ಠಾಃ ॥ ೧೧ ॥

೯. ನೀನು ಹೃದಾಕಾಶ ಮಧ್ಯದಲ್ಲಿ ಕುಣಿಯುವಂತೆ ನೋಡುತ್ತಿದ್ದೇನೆ. ನಿನ್ನ ಮಹಿಮೆಯನ್ನು ಸ್ಮರಿಸಿಕೊಳ್ಳುತ್ತಿದ್ದೇನೆ. ನೀನು ಸರ್ವಾತ್ಮನು, ಅನೇಕರೀತಿಯಿಂದಿರುವವನು. ಅಂತಹ ನಿನ್ನನ್ನು ಬ್ರಹ್ಮಾನಂದವನ್ನು ತಿಳಿದು ಅನುಭವಿಸಿ, ಅನುಭವಿಸಿ ಸ್ಮರಿಸುತ್ತ ನೋಡುತ್ತಿದ್ದೇನೆ.

೧೦. ಮುಕ್ತಿಗೆ ಕಾರಣವಾದ ಓಂಕಾರವು ನಿನ್ನನ್ನು ಹೇಳುವ ಶಬ್ದವು. ನೀನು ನಾಶರಹಿತನು, ಪ್ರಕೃತಿಯಲ್ಲಿ ಸೇರಿಕೊಂಡು ಕಾಣದಂತೆ ಇದ್ದೀಯೆ. ವಿದ್ವಾಂಸರು ನಿನ್ನನ್ನು ಸತ್ಯರೂಪನನ್ನಾಗಿ ಹೇಳುತ್ತಾರೆ. ನಿನ್ನಲ್ಲಿರುವ ಪ್ರಕಾಶವು ತಾನಾಗಿ ಬೆಳಗುವಂಥಾದ್ದು.

೧೧. ಎಲ್ಲಾ ದೇವತೆಗಳೂ ಯಾವಾಗಲೂ ನಿನ್ನನ್ನು ಹೊಗಳುತ್ತಾರೆ. ಪಾಪರಹಿತರಾದ ಋಷಿಗಳು ನಿನ್ನನ್ನು ನಮಿಸುತ್ತಾರೆ. ಬ್ರಹ್ಮನಲ್ಲಿ ಆಸಕ್ತರಾದ ಶಾಂತರಾದ ಋಷಿಗಳು ಸತ್ಯದಲ್ಲಿ ನಿರತನಾದ ನಿನ್ನಲ್ಲಿ ಬಂದು ಸೇರುತ್ತಾರೆ.

ಏಕೋ ವೇದಃ ಬಹುಶಾಖೋಹ್ಯನಂತಃ
ತ್ವಾಮೇವೈಕಂ ಬೋಧಯತ್ಯೇಕರೂಪಂ ।
ಸಂವೇದ್ಯಂ ತ್ವಾಂ ಶರಣಂ ಯೇ ಪ್ರಸನ್ನಾಃ
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ ॥ ೧೨ ॥

ಭವಾನೀಶೋऽಣಿಮಾದಿಮಾಂಸ್ತೇಜೋರಾಶಿಃ
ಬ್ರಹ್ಮಾ ವಿಶ್ವಂ ಪರಮೇಷ್ಠೀ ವರಿಷ್ಠಃ ।
ಆತ್ಮಾನಂದಂ ಚಾನುಭೂಯಾಸುಶೇತೇ
ಸ್ವಯಂಜ್ಯೋತಿರ್ವಚನೋ ನಿತ್ಯಮುಕ್ತಃ ॥ ೧೩ ॥

ಏಕೋ ದೇವಸ್ತ್ವಂ ಕರೋಷೀಹ ವಿಶ್ವಂ
ತ್ವಂ ಪಾಲಯಸ್ಯಖಿಲಂ ವಿಶ್ವರೂಪಃ ।
ತ್ವಯ್ಯೇವಾಂತೇ ವಿಲಯಂ ವಿಂದತೀದಂ
ನಮಾಮಿ ತ್ವಾಂ ಶರಣಂ ತ್ವಾಂ ಪ್ರಸನ್ನಃ ॥ ೧೪ ॥

---

೧೨. ವೇದವು ಒಂದೇ ಆದರೂ ಅದು ಶಾಖೋಪಶಾಖೆಗಳಾಗಿ ಅನಂತವಾಗಿವೆ. ಅವೆಲ್ಲವೂ ಕೂಡ ನಿನ್ನನ್ನು ಒಬ್ಬನೆಂದು ಒಂದೇ ರೀತಿಯಾಗಿ ಹೇಳುತ್ತವೆ. ಅವುಗಳಿಂದ ಬೋಧಿತನಾದ ನಿನ್ನನ್ನು ತಿಳಿದುಕೊಂಡವರಿಗೆ ಶಾಂತಿಯೇ ಹೊರತು ಮಿಕ್ಕವರಿಗಿರುವುಲ್ಲ.

೧೩. ನೀನು ಈಶ್ವರನು, ಎಂದರೆ ಐಶ್ವರ್ಯದಿಂದ ಕೂಡಿದವನು, ಅಣಿಮಾ ಮಹಿಮೆ, ಲಘಿಮ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ ವಶಿತ್ವವೆಂಬ ಅಷ್ಟಸಿದ್ಧಿಗಳುಳ್ಳವನು ನೀನು ಆತ್ಮಾನಂದವನ್ನು ಅನುಭವಿಸುತ್ತ ಮೇಲಾಗಿದ್ದೀಯೆ, ಸ್ವಪ್ರಕಾಶನು, ಜ್ಯೋತಿರೂಪನೆಂದೆನಿಸಿಕೊಳ್ಳುವನು, ನಿತ್ಯಮುಕ್ತನು.

೧೪. ನೀನು ಪ್ರಪಂಚಕ್ಕೆಲ್ಲಾ ಒಬ್ಬನೇ ದೇವರು, ನೀನೇ ವಿಶ್ವವನ್ನು ಸೃಷ್ಟಿಸುತ್ತೀಯೆ, ನೀನೇ ವಿಶ್ವರೂಪನಾಗಿ ಅವೆಲ್ಲವನ್ನೂ ಕಾಪಾಡುತ್ತೀಯೆ, ಕೊನೆಗೆ ನೀನೇ ನಾಶಮಾಡಿ ನಿನ್ನಲ್ಲಿಯೇ ಸೇರಿಹೋಗುತ್ತದೆ, ನಿನ್ನನ್ನು ಶರಣುಹೊಂದುತ್ತೇನೆ ಮತ್ತು ನಮಸ್ಕರಿಸುತ್ತೇನೆ.

ತ್ವಾಮೇಕಮಾಹುಃ ಪರಮಂ ಚ ರಾಮಂ
ಪ್ರಾಣಂ ವಹಂತಂ ಹರಿಮಿತ್ರಮೀಶಂ ।
ಇಂದುಂ ಮೃತ್ಯುಮನಲಂ ಚೇಕಿತಾನಂ
ಧಾತಾರಮಾದಿತ್ಯ ಮನೇಕರೂಪಂ ॥ ೧೫ ॥

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯವಿಶ್ವಸ್ಯ ಪರಂ ನಿಧಾನಂ ।
ತ್ವಮವ್ಯಯಃ ಶಾಶ್ವತೋ ಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋತ್ತಮೋಽಸಿ ॥ ೧೬ ॥

ತ್ವಮೇವ ವಿಷ್ಣುಃ ಚತುರಾನನಸ್ತ್ವಂ
ತ್ವಮೇವ ರುದ್ರೋ ಭಗವಾನಪೀಶಃ ।
ತ್ವಂ ವಿಶ್ವನಾಭಿಃ ಪ್ರಕೃತಿಃ ಪ್ರತಿಷ್ಠಾ
ಸರ್ವೇಶ್ವರಸ್ತ್ವಂ ಪರಮೇಶ್ವರೋಽಪಿ ॥ ೧೭ ॥

---

೧೫. ಉತ್ತಮೋತ್ತಮನಾದ ರಾಮನಾದ ನಿನ್ನನ್ನು ಒಬ್ಬನೇ ಮೂರ್ತಿಯನ್ನಾಗಿ ಹೇಳುತ್ತಾರೆ. ನೀನೇ ಹರಿಮಿತ್ರನಾದ ಪ್ರಾಣಸ್ವರೂಪನು, ಈಶ್ವರನು, ನೀನೇ ಚಂದ್ರನು, ಮೃತ್ಯುವು, ಅಗ್ನಿಯು, ಚೇಕಿತಾನನು, ಧಾತೃವು, ಆದಿತ್ಯನು, ಈ ರೀತಿಯಾಗಿ ಅನೇಕ ರೂಪನಾಗಿದ್ದೀಯೆ.

೧೬. ನೀನು ನಾಶರಹಿತನು, ತಿಳಿಯುವುದಕ್ಕೆ ಉತ್ತಮ ಪದಾರ್ಥವು, ನೀನೇ ಈ ಜಗತ್ತಿಗೆ ಮೊದಲನೆಯ ಕಾರಣನು, ಶಾಶ್ವತನು, ಧರ್ಮವನ್ನು ಕಾಪಾಡುವವನು, ಸನಾತನನು, ಪುರುಷೋತ್ತಮನು.

೧೭. ನೀನೇ ವಿಷ್ಣುವು, ಬ್ರಹ್ಮನು, ರುದ್ರನು, ಭಗವಂತನಾದ ಈಶ್ವರನು, ನೀನೇ ಪ್ರಪಂಚಕ್ಕೆ ನಿಯಾಮಕನು, ಪ್ರಕೃತಿಸ್ವರೂಪನು, ಸ್ಥಿರನು, ಸರ್ವಕ್ಕೂ ಈಶ್ವರನು, ಪರಮೇಶ್ವರನೂ ಕೂಡ ಆಗಿದ್ದೀಯೆ.

ತ್ವಾಮೇಕಮಾಹುಃ ಪುರುಷಂ ಪುರಾಣ
ಮಾದಿತ್ಯವರ್ಣಂ ತಮಸಃ ಪರಸ್ತಾತ್ ।
ಚಿನ್ಮಾತ್ರಮವ್ಯಕ್ತಮಚಿಂತ್ಯರೂಪಂ
ಖಂ ಬ್ರಹ್ಮಶೂನ್ಯಂ ಪ್ರಕೃತಿಂ ನಿರ್ಗುಣಂ ಚ ॥ ೧೮ ॥

ಯದಂತರಾ ಸರ್ವಮಿದಂ ವಿಭಾತಿ
ಯದವ್ಯಯಂ ನಿರ್ಮಲಮೇಕರೂಪಂ ।
ಕಿಮಪ್ಯಚಿಂತ್ಯಂ ತವರೂಪಮೇತ
ತ್ತದಂತರಾ ಯತ್ಪ್ರತಿಭಾತಿತತ್ತ್ವಂ ॥ ೧೯ ॥

ಯೋಗೇಶ್ವರಂ ರೂಪಮನಂತಶಕ್ತಿಂ
ಪರಾಯಣಂ ಬ್ರಹ್ಮತನುಂ ಪವಿತ್ರಂ ।
ನಮಾಮ ಸರ್ವೇ ಶರಣಾರ್ಥಿನಸ್ತ್ವಾಂ
ಪ್ರಸೀದ ಭೂತಾಧಿಪತೇ ಪ್ರಸೀದ ॥ ೨೦ ॥

---

೧೮. ನಿನ್ನೊಬ್ಬನನ್ನೇ ಪುರಾಣಪುರುಷನನ್ನಾಗಿ ಹೇಳುತ್ತಾರೆ, ಆದಿತ್ಯನಂತಿದ್ದೀಯೆ, ಕತ್ತಲೆಗಿಂತ ಬಹು ದೂರದಲ್ಲಿದ್ದೀಯೆ, ಚಿತ್‌ಸ್ವರೂಪನು, ವ್ಯಕ್ತನಲ್ಲದವನು, ನೀನು ಹೀಗಿರುತ್ತೀಯೆ ಎಂದು ಯೋಚಿಸಲೂ ಆಗುವುದಿಲ್ಲ, ಆಕಾಶರೂಪನು, ಬ್ರಹ್ಮನು, ಶೂನ್ಯನಾಗಿರತಕ್ಕವನು, ಪ್ರಕೃತಿಯೂ, ನಿರ್ಗುಣನು.

೧೯. ಯಾವುದನ್ನು ಹೊಂದಿ ಈ ಜಗತ್ತು ಪ್ರಕಾಶಿಸುತ್ತದೆಯೋ ಅದೇ ನೀನಾಗಿದ್ದೀಯೆ. ಅವ್ಯಯನೂ, ನಿರ್ಮಲನೂ, ಏಕರೂಪನೂ, ಆಗಿದ್ದೀಯೆ. ನಿನ್ನ ಈ ರೂಪವು ಯೋಚಿಸುವುದಕ್ಕೇ ಆಗದ ಯಾವುದೋ ಒಂದು ರೀತಿಯಲ್ಲಿದೆ. ಈ ವಿಶ್ವದಲ್ಲಿ ಯಾವುದಿಲ್ಲದಿದ್ದರೆ ಅವು ಪ್ರಕಾಶಿಸುವುದಿಲ್ಲವೋ ಆ ಪದಾರ್ಥವು ನೀನಾಗಿದ್ದೀಯೆ.

೨೦. ನೀನು ಯೋಗೇಶ್ವರನು, ಅನಂತಶಕ್ತಿಯುಳ್ಳವನು, ಉತ್ತಮನು, ಬ್ರಹ್ಮನು, ಪವಿತ್ರನು, ನಾವೆಲ್ಲರೂ ಶರಣವನ್ನು ಕೇಳುತ್ತ ನಿನ್ನನ್ನು ನಮಿಸುತ್ತೇವೆ, ಎಲೈ ಭೂತಗಳಿಗೊಡೆಯನೆ! ಪ್ರಸನ್ನನಾಗು, ಪ್ರಸನ್ನನಾಗು.

ತ್ವತ್ಪಾದಪದ್ಮಸ್ಮರಣಾದಶೇಷಂ
ಸಂಸಾರಬೀಜಂ ವಿಲಯಂ ಪ್ರಯಾತಿ ।
ಮನೋನಿಯಮ್ಯ ಪ್ರಣಿಧಾಯ ಕಾಯಂ
ಪ್ರಸಾದಯಾಮ್ಯೇಕರಸಂ ಭವಂತಂ ॥ ೨೦ ॥

ನಮೋಸ್ತು ರಾಮಾಯ ಭವೋದ್ಭವಾಯ
ಕಾಲಾಯ ಸರ್ವೈಕಹರಾಯ ತುಭ್ಯಂ ।
ನಮೋಸ್ತು ರಾಮಾಯ ಕಪರ್ದಿನೇ ತೇ
ನಮೋಗ್ನಯೇ ದರ್ಶಯ ರೂಪಮುಗ್ರ್ಯಂ ॥ ೨೨ ॥

ತತಸ್ಸಭಗವಾನ್ ರಾಮೋ ಲಕ್ಷ್ಮಣೇನ ಸಹ ಪ್ರಭುಃ ।
ಸಂಹೃತ್ಯ ಪರಮಂ ರೂಪಂ ಪ್ರಕೃತಿಸ್ಥೋಽಭವತ್‌ಸ್ವಯಂ ॥ ೨೩ ॥

ಸ ತಸ್ಯ ಸ್ತವಮಾಕರ್ಣ್ಯ ವಾಯುಪುತ್ರಸ್ಯ ಧೀಮತಃ ।
ಪ್ರಾಹ ಗಂಭೀರಯಾ ವಾಚಾ ಹನುಮಂತಂ ರಘೂತ್ತಮಃ ॥ ೨೪ ॥

---

೨೧. ಎಲೈ ಸ್ವಾಮಿಯೇ! ನಿನ್ನ ಪಾದಪದ್ಮಗಳನ್ನು ಸ್ಮರಿಸುವುದರಿಂದ ಈ ಜನನ ಮರಣ ರೂಪವಾದ ಸಂಸಾರಕ್ಕೆ ಕಾರಣವಾದುವೆಲ್ಲವೂ ನಾಶವಾಗುತ್ತವೆ. ಮನಸ್ಸನ್ನು ನಿಗ್ರಹಿಸಿಕೊಡು, ದೇಹವನ್ನು ಕುಗ್ಗಿಸಿ ಬ್ರಹ್ಮಾನಂದ ರೂಪನಾದ ನಿನ್ನನ್ನು ತೃಪ್ತಿಪಡಿಸಿ ಪ್ರಸನ್ನನನ್ನಾಗಿ ಮಾಡುತ್ತೇನೆ.

೨೨. ಸಂಸಾರಿಯಾಗಿ ಹುಟ್ಟಿ ರಾಮನೆಂದು ಪ್ರಸಿದ್ಧಿಗೊಂಡ ನಿನಗೆ ನಮಸ್ಕಾರವು. ಎಲ್ಲವನ್ನೂ ನಾಶಮಾಡುವ ಕಾಲರೂಪನಾದ ನಿನಗೆ ನಮಸ್ಕಾರವು. ಜಟೆಯನ್ನು ಧರಿಸಿರುವ ರಾಮನಾದ ನಿನಗೆ ನಮಸ್ಕಾರವು. ಅಗ್ನಿಯಾದ ನಿನಗೆ ನಮಸ್ಕಾರವು, ನಿನ್ನ ರಾಮಾವತಾರದ ಮುಂದೆ ಮಾಡಬೇಕಾದ ಕೆಲಸದ ರೂಪವನ್ನು ತೋರಿಸು.

೨೩. ಆಗ ಆ ಶ್ರೀರಾಮನು ತನ್ನ ವಿಶ್ವರೂಪವನ್ನು ಉಪಸಂಹರಿಸಿ ಮೊದಲಿನ ರೀತಿಯನ್ನು ಹೊಂದಿ ಲಕ್ಷ್ಮಣನೊಡನೆ ನಿಂತನು.

೨೪. ಆ ರಘೂತ್ತಮನಾದ ಶ್ರೀ ರಾಮನು ಹನುಮಂತನ ಸ್ತೋತ್ರವನ್ನು ಕೇಳಿ ಗಂಭೀರವಾದ ಮಾತಿನಿಂದ ಇಂತೆಂದನು.

**ಸ್ತೋಷ್ಯಂತಿ ಯೇऽನಯೋಸ್ತುತ್ಯಾ ತೇಯಾ ಯಾಸ್ಯಂತಿ ಪರಾಂ ಗತಿಂ ।**
**ಸ್ಥಿರೋ ಭವ ಹನೂಮಂಸ್ತ್ವಂ ಕಾರ್ಯಮೌಪಯಿಕಂ ಕುರು ॥ ೨೫ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ಹನುಮತ್ಕೃತಸ್ತವರಾಜೇ**
**ಪಂಚದಶಃ ಸರ್ಗಃ**



೨೫. ಎಲೈ ಹನುಮಂತನೇ! ಈ ಸ್ತುತಿಯಿಂದ ಯಾರು ನನ್ನನ್ನು ಸ್ತುತಿಸುವರೋ ಅವರು ಉತ್ತಮಗತಿಯನ್ನು ಹೊಂದುತ್ತಾರೆ. ಈ ನೀನು ಧೈರ್ಯವಾಗಿರು. ಸದ್ಯದಲ್ಲಿ ಮಾಡಬೇಕಾದ ಉಪಯುಕ್ತವಾದ ಕೆಲಸವನ್ನು ಮಾಡು.

ಇಂತು ವಾಲ್ಮೀಕಿಋಷಿಯಿಂದ ಹೇಳಲ್ಪಟ್ಟ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಹನುಮಂತನು ಸ್ತುತಿಸಿದ
ಸ್ತವರಾಜವೆಂಬ ಹದಿನೈದನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತ ರಾಮಾಯಣೇ

## ಅಥ ಷೋಡಶಃ ಸರ್ಗಃ



ರಾಮಃ ಪ್ರತ್ಯಾಹ ಚ ಪುನಃ ಹನೂಮಂತಂ ಮಹಾದ್ಯುತಿಃ ।
ರಕ್ಷಸಾ ಮೇ ಹೃತಾ ಭಾರ್ಯಾ ರಾವಣೇನ ದುರಾತ್ಮನಾ ॥ ೧ ॥

ಸುಗ್ರೀವೇಣ ಸಮಂ ಸಖ್ಯಂ ಕಾರಯೊದ್ಯ ಪ್ಲವಂಗಮ ।
ಹಸಿತ್ವಾ ಮಧುರಂ ವೀರೋ ಹನೂಮಾನಬ್ರವೀದ್ವಚಃ ॥ ೨ ॥

ತವ ಭಾರ್ಯಾ ಮಹಾಭಾಗ ರಾವಣೇನ ಹೃತೇತಿ ಯತ್ ।
ವಿಶ್ವಂ ಯಥೇದಮಾಭಾತಿ ತಥೇದಂ ಪ್ರತಿಭಾತಿ ಮೇ ॥ ೩ ॥

---

## ಹದಿನಾರನೆಯ ಸರ್ಗವು.

೧. ಆ ರಾಮನು ಹನುಮಂತನನ್ನು ಕುರಿತು ಎಲೈ ಹನುಮಂತನೆ! ನನ್ನ ಹೆಂಡತಿಯನ್ನು ದುರಾತ್ಮನಾದ ರಾವಣನು ಕದ್ದುಕೊಂಡು ಹೋಗಿರುವನು.

೨. ಆದ್ದರಿಂದ ನನಗೆ ಸುಗ್ರೀವನೊಡನೆ ಸ್ನೇಹವನ್ನು ಮಾಡಿಸು. ಎಂದನು. ಆಗ ಆ ವೀರನಾದ ಹನುಮಂತನು ಹುಸಿನಗೆ ನಗುತ್ತಾ ಇಂತೆಂದನು.

೩. ಎಲೈ ಮಹಾನುಭಾವನೆ! ನಿನ್ನ ಹೆಂಡತಿಯನ್ನು ರಾವಣನು ಕದ್ದನೆಂದು ಹೇಳುತ್ತಿರುವೆಯಲ್ಲ! ಅದು ಈ ಪ್ರಪಂಚವು ಇರುವುದು ಅಸತ್ಯವಾದರೂ ಸತ್ಯದಂತೆ ಹೇಗೆ ಕಾಣುವುದೋ ಹಾಗೆ ನನಗೆ ಕಾಣುತ್ತದೆ.

ತಥಾಪಿ ಪ್ರಭುಣಾದಿಷ್ಟಂ ಕಾರ್ಯಮೇವ ಹಿ ಕಿಂಕರೈಃ ।
ಇತ್ಯುಕ್ತ್ವಾ ಹನುಮಾಂ ಸ್ತೂರ್ಣಂ ಪ್ರಸನ್ನೇನಾಂತರಾತ್ಮನಾ ॥ ೪ ॥

ಆರೋಪ್ಯ ಸ್ಕಂಧಯೋರ್ವೀರೌ ಸುಗ್ರೀವಾಂತಿಕಮಾನಯತ್ ।
ತೌ ದೃಷ್ಟ್ವಾ ಪುರುಷವ್ಯಾಘ್ರೌ ಸುಗ್ರೀವೋ ವಾನರೋತ್ತಮಃ ॥ ೫ ॥

ವಾಲಿನಂ ತಂ ಜಿತಂ ಮೇನೇ ಪ್ರಾಪ್ತಾಂ ಮೇನೇ ರುಮಾಂ ಸ್ತ್ರಿಯಂ ।
ಸಖ್ಯಂ ಚಕಾರ ರಾಮೇಣ ದಿಷ್ಟ್ಯಾ ದಿಷ್ಟ್ಯೇತಿ ಚಾಬ್ರವೀತ್ ॥ ೬ ॥

ವಾಲಿನೋ ವಿಲಯಂ ಕೃತ್ವಾ ರಾಜ್ಯಂ ಚಾಸ್ಮೈ ನಿವೇದ್ಯ ಚ ।
ನಾನಾದೇಶ್ಯಾನ್ ವಾನರಾಂಶ್ಚ ಆನಾಯ್ಯ ರಘುನಂದನೌ ॥ ೭ ॥

ಹನೂಮದಂಗದಾರೂಢೌ ಭ್ರಾತರೌ ರಾಮಲಕ್ಷ್ಮಣೌ ।
ಸಿಂಧೋಸ್ತಟಂ ತೌ ಯಯತುಃ ಸುಗ್ರೀವೇಣ ಸಹ ಪ್ರಭುಃ ॥ ೮ ॥

---

೪. ಆದರೂ ಕೂಡ ಪ್ರಭುಗಳು ಹೇಳಿದುದನ್ನು ಆಳುಗಳು ಮಾಡಿಯೇ ಮಾಡಬೇಕು ಎಂದುಕೊಂಡು ಪ್ರೀತಿ ಪೂರ್ವಕವಾದ ಮನಸ್ಸಿನಿಂದ ಹೇಳಿದನು.

೫–೬. ಒಡನೆಯೇ ಆ ಹನುಮಂತನು ಎರಡು ಹೆಗಲುಗಳ ಮೇಲೆಯೂ ಇಬ್ಬರನ್ನೂ ಕೂರಿಸಿಕೊಂಡು ಸುಗ್ರೀವನ ಬಳಿಗೆ ಕರೆದುಕೊಂಡು ಹೋದನು. ಆ ವಾನರೋತ್ತಮನಾದ ಸುಗ್ರೀವನು ಇವರನ್ನು ನೋಡಿ ವಾಲಿಯನ್ನು ಜಯಿಸಿದಂತೆಯೂ ತನ್ನ ಹೆಂಡತಿಯಾದ ರುಮೆಯನ್ನು ಹೊಂದಿದಂತೆಯೂ ತಿಳಿದುಕೊಂಡನು. ಆಗ ಒಡನೆಯೇ ರಾಮನೊಡನೆ ಸ್ನೇಹವನ್ನು ಮಾಡಿಕೊಂಡು ಸಂತೋಷ ಸಂತೋಷ ಎಂದು ಹೇಳಿದನು.

೭–೮. ಆಗ ಆ ರಾಮನು ವಾಲಿಯನ್ನು ಕೊಂದು ಆ ರಾಜ್ಯವನ್ನು ಸುಗ್ರೀವನಿಗೆ ಕೊಟ್ಟು ನಾನಾ ದೇಶಗಳಲ್ಲಿರುವ ಕಪಿಗಳನ್ನು ಕರೆಸಿ ರಾಮಲಕ್ಷ್ಮಣರು ತಾವು ಹನುಮಂತ ಅಂಗದರ ಹೆಗಲಮೇಲೆ ಕುಳಿತುಕೊಂಡು ಸುಗ್ರೀವನೊಡನೆಯೂ, ಆ ಕಪಿಗಳೊಡನೆಯೂ ಸಮುದ್ರದ ತೀರಕ್ಕೆ ಹೋದರು.

ಪಾರೇ ಸಮುದ್ರಂ ಲಂಕಾಂ ಚ ನಿರೂಪ್ಯಾಹ ರಘೂತ್ತಮಃ ।
ವಾನರಾ ಹಿ ಯಥಾ ಯಾಂತಿ ಲಂಕಾಂ ಲಕ್ಷ್ಮಣ ತತ್ಕುರು ॥ ೯ ॥

ರಾಮಸ್ಯ ವಚನಂ ಶ್ರುತ್ವಾ ಸಮುದ್ರಂ ಪ್ರಾಹ ಲಕ್ಷ್ಮಣಃ ।
ಸಿಂಧೋ ತ್ವಂ ಸ್ತಂಭಯಾತ್ಮಾನಂ ಯಥಾ ಯಾಸ್ಯಂತಿ ವಾನರಾಃ ॥ ೧೦ ॥

ಸಿಂಧುಸ್ತು ಪ್ರಭುಣಾದಿಷ್ಟಂ ನ ಶುಶ್ರಾವ ಯದಾ ತದಾ ।
ಲಕ್ಷ್ಮಣಃ ಕ್ರೋಧಸಂದೀಪ್ತಃ ಪಪಾತಾಬ್ಧೇರ್ಜಲಾಂತರೇ ॥ ೧೧ ॥

ತದ್ದೇಹವಹ್ನಿ ಶಿಖಯಾ ಶುಶೋಷ ಜಲಧೇರ್ಜಲಂ ।
ಯಾದಾಂಸಿ ಸ್ಥಲಭಾಜೀನಿ ದೇವಾ ಭೀತಾ ದಿಶೋದ್ರವನ್ ॥ ೧೨ ॥

ತದ್ದೃಷ್ಟ್ವಾ ಮಹದಾಶ್ಚರ್ಯಂ ವಾನರಾ ವಿಸ್ಮಯಂ ಗತಾಃ ।
ಹಾಹಾಕಾರಂ ಪ್ರಚಕ್ರುಸ್ತೇ ಲೋಕಾಸ್ಸರ್ವೇ ಚರಾಚರಾಃ ॥ ೧೩ ॥

---

೯. ಲಂಕೆಯು ಸಮುದ್ರದಾಚೆ ಇರುವುದನ್ನು ನೋಡಿ ರಾಮನು ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೇ! ಈ ಕಪಿಗಳು ಸಮುದ್ರವನ್ನು ದಾಟಿ ಆ ಲಂಕೆಗೆ ಹೋಗುವಂತೆ ಮಾಡು ಎಂದನು.

೧೦. ಲಕ್ಷ್ಮಣನು ರಾಮನ ಮಾತನ್ನು ಕೇಳಿ ಸಮುದ್ರನನ್ನು ಕುರಿತು ಎಲೈ ಸಮುದ್ರನೆ! ನೀನು ಈ ಕಪಿಗಳು ಲಂಕೆಗೆ ಹೋಗುವಂತೆ ನಿನ್ನನ್ನು ದಾಟುವುದಕ್ಕೆ ನೀನು ಗಟ್ಟಿಯಾಗು ಎಂದನು.

೧೧. ಆ ಸಮುದ್ರರಾಜನು ಪ್ರಭುವಾದ ರಾಮನು ಹೇಳಿದಂತೆ ಮಾಡದಿದ್ದುದನ್ನು ನೋಡಿ ಲಕ್ಷ್ಮಣನು ಕೋಪಗೊಂಡು ಆ ಸಮುದ್ರದ ನೀರಿನಲ್ಲಿ ಬಿದ್ದನು.

೧೨. ಅವನ ದೇಹದಲ್ಲಿರುವ ಬೆಂಕಿಯ ಜ್ವಾಲೆಯಿಂದ ಆ ಸಮುದ್ರದ ನೀರು ಬತ್ತಿಹೋಗಲು ಅದರೊಳಗಿದ್ದ ಜಂತುಗಳು ನೆಲದ ಮೇಲೆ ಬಂದುವು. ದೇವತೆಗಳು ಹೆದರಿಕೊಂಡು ಸಿಕ್ಕಿದಕಡೆ ಓಡಿದರು.

೧೩. ಈ ಲಕ್ಷ್ಮಣನು ಮಾಡಿದ ಆಶ್ಚರ್ಯವನ್ನು ನೋಡಿ ಕಪಿಗಳೆಲ್ಲರೂ ಆಶ್ಚರ್ಯಗೊಂಡರು. ಲೋಕಗಳಲ್ಲಿರುವ ಚರಾಚರ ಪ್ರಾಣಿಗಳು ಹಾ ಹಾ ಎಂದು ಕೂಗಿದುವು.

ಋಷಯೋ ಭೂತಸಂಘಾಶ್ಚ ಸ್ವಸ್ತಿ ಸ್ವಸ್ತೀತಿ ಚಾಬ್ರುವನ್ ।
ರಾಘವೋ ಲಕ್ಷ್ಮಣಂ ಪ್ರಾಹ ನೈತದ್ಯುಕ್ತಂ ತ್ವಯಾ ಕೃತಂ ॥ ೧೪ ॥

ಪುನರೇವಂ ಪೂರಯಾಮಿ ಸೀತಾವಿರಹಜೇನ ನೈ ।
ಅಶ್ರುಣೇತಿ ಪ್ರತಿಜ್ಞಾಯ ತಂ ತಥಾ ಪೂರಯತ್ಪ್ರಭುಃ ॥ ೧೫ ॥

ರಾಮೋಪರಿ ತದಾಕಾಶಾತ್ ಪುಷ್ಪವೃಷ್ಟಿಃ ಪಪಾತ ಹ ।
ಲೋಕಾಶ್ಚ ಸುಸ್ಥಿತಾ ಆಸನ್ ಚಿಂತಯಿತ್ವಾ ಪುನಃ ಪುನಃ ॥ ೧೬ ॥

ಸಿಂಧುನಾ ಸಂಸ್ತುತೋ ರಾಮಃ ಸೇತುಂ ಸಿಂಧೌ ಬಬಂಧ ಹ ।
ಲಂಕಾಯಾಂ ರಾವಣಂ ಹತ್ವಾ ಸಗಣಂ ಮಧುಸೂದನಃ ॥ ೧೭ ॥

ಆರೋಪ್ಯ ಪುಷ್ಪಕೇ ಸೀತಾಂ ವಿಭೀಷಣಸಹಾಯವಾನ್ ।
ಅಯೋಧ್ಯಾಮಗಮದ್ರಾಮಃ ಸುಗ್ರೀವ ಹನುಮಾದಿಭಿಃ ॥ ೧೮ ॥

---

೧೪. ಋಷಿಗಳೂ ಮತ್ತುಳಿದ ಪ್ರಾಣಿಗಳೂ ಕೂಡ ಸ್ವಸ್ತಿ ಸ್ವಸ್ತಿ (ಪ್ರಪಂಚಕ್ಕೆ ಒಳ್ಳೆಯದಾಗಲಿ ಒಳ್ಳೆಯದಾಗಲಿ ಎಂದೆನ್ನುತ್ತಿದ್ದರು. ಆಗ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೆ! ಇದು ಯೋಗ್ಯವಲ್ಲವೆಂದನು.

೧೫. ಎಲೈ ಲಕ್ಷ್ಮಣನೇ! ಸೀತೆಯ ವಿರಹದಿಂದ ಉಂಟಾದ ಕಣ್ಣೀರಿನಿಂದ ಮತ್ತೆ ಆ ಸಮುದ್ರವನ್ನು ತುಂಬುತ್ತೇನೆ. ಎಂದೆನ್ನುತ್ತ ಮತ್ತೆ ತುಂಬಿದನು.

೧೬. ಆಗ ರಾಮನ ಮೇಲೆ ಆಕಾಶದಿಂದ ಪುಷ್ಪವೃಷ್ಟಿಯು ಬಿದ್ದಿತು. ಲೋಕವೆಲ್ಲವೂ ಕೂಡ ಆ ರಾಮನ ಶಕ್ತಿಯನ್ನು ಯೋಚಿಸಿ ನೋಡಿ ಆಶ್ಚರ್ಯಗೊಂಡು ಸುಖವಾಗಿದ್ದನು.

೧೭-೧೮. ಆಗ ಸಮುದ್ರರಾಜನು ರಾಮನನ್ನು ಸ್ತುತಿಸಲು ಆ ರಾಮನು ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದನು. ಲಂಕೆಗೆ ಹೋಗಿ ರಾವಣನನ್ನೂ ಅವನ ಅನುಯಾಯಿಗಳನ್ನೂ ಕೊಂದು ವಿಭೀಷಣನ ಸಹಾಯದಿಂದ ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಕೂರಿಸಿಕೊಂಡು ಸುಗ್ರೀವ ಹನುಮಂತರೇ ಮುಂತಾದವರೊಡನೆ ಅಯೋಧ್ಯೆಗೆ ಹೋದನು.

**ಆನಂದೇ ಯೋಜಯಾಮಾಸ ಭ್ರಾತೄ್ನ್ ಮಾತೄಶ್ಚ ಬಾಂಧವಾನ್ ।**
**ರಾಜಾ ಸರ್ವಸ್ಯಲೋಕಸ್ಯ ಪ್ರಜಾನಾಮನುರಂಜನಃ ॥ ೧೯ ॥**

**ರಾಮಂ ರಾಜಾನಮಾಸಾದ್ಯ ತಿರ್ಯಂಚೋಽಪಿ ಯಯುರ್ಮುದಂ ।**
**ದೇವದುಂದುಭಯೋ ನೇದುಃ ಸರ್ವದಾ ಹಿ ನಭಸ್ಥಲೇ ।**
**ವವರ್ಷುಃ ಜಲದಾಃ ಕಾಲೇ ಪುಷ್ಪವೃಷ್ಟಿಃ ಪಪಾತ ಚ ॥ ೨೦ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ರಾಮರಾಜ್ಯೋಪಲಂಭನಂ**
**ನಾಮ ಷೋಡಶಃ ಸರ್ಗಃ**



---

೧೯. ಆ ರೀತಿಯಾಗಿ ಊರಿಗೆ ಹೋಗಿ ತಮ್ಮಂದಿರನ್ನೂ ತಾಯಿಯರನ್ನೂ ಬಾಂಧವರನ್ನೂ ಸಂತೋಷಪಡಿಸಿದನು. ಪ್ರಪಂಚಕ್ಕೆಲ್ಲಾ ರಾಜನಾಗಿ ಪ್ರಜೆಗಳನ್ನು ಸಂತೋಷಪಡಿಸುತ್ತಿದ್ದನು.

೨೦. ರಾಮನು ರಾಜನಾಗಲು ಎಲ್ಲರೂ ಆತನನ್ನು ರಾಜನನ್ನಾಗಿ ಹೊಂದಿ ಸಂತೋಷಪಟ್ಟರು. ಮನುಷ್ಯರಲ್ಲದ ಕೀಳು ಪ್ರಾಣಿಗಳೂ ಕೂಡ ಸಂತೋಷ ಗೊಂಡುವು. ದೇವದುಂದುಭಿಗಳು ಯಾವಾಗಲೂ ಅಂತರಿಕ್ಷದಲ್ಲಿ ಧ್ವನಿ ಮಾಡುತ್ತಿದ್ದುವು. ಮೋಡಗಳು ಸರಿಯಾದ ಕಾಲದಲ್ಲಿ ಮಳೆಯನ್ನು ಸುರಿಸುತ್ತಿದ್ದುವು. ಪುಷ್ಪವೃಷ್ಟಿಯಾಗುತ್ತಿದ್ದಿತು.

ಇಂತು ವಾಲ್ಮೀಕಿಋಷಿ ಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ರಾಮನಿಗೆ ರಾಜ್ಯವು ಸಿಕ್ಕಿತು ಎಂಬ
ಹದಿನಾರನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅದ್ಭುತರಾಮಾಯಣೇ

## ಅಥ ಸಪ್ತದಶಃ ಸರ್ಗಃ



ಪ್ರಾಪ್ತ ರಾಜ್ಯಸ್ಯ ರಾಮಸ್ಯ ರಾಕ್ಷಸಾನಾಂ ಕ್ಷಯೇ ಕೃತೇ ।
ಆಜಗ್ಮುರ್ಮುನಯಸ್ತತ್ರ ರಾಘವಂ ಪ್ರತಿನಂದಿತುಂ ॥ ೧ ॥

ವಿಶ್ವಾಮಿತ್ರೋ ಯವಕ್ರೀತೋ ರೈಭ್ಯಶ್ಚ್ಯವನ ಏವ ಚ ।
ಕಣ್ವಶ್ಚ ಮುನಿಶಾರ್ದೂಲೋ ಯೇ ಪೂರ್ವಾಂ ದಿಶಮಾಶ್ರಿತಾಃ ॥ ೨ ॥

ಸ್ವಸ್ತ್ಯಾತ್ರೇಯಶ್ಚ ನಮುಚೋ ರಿಮುಚೋಗಸ್ತ್ಯ ಏವ ಚ ।
ಆಜಗ್ಮುರ್ಮುನಯಸ್ತತ್ರ ಯೇ ಶ್ರಿತಾ ದಕ್ಷಿಣಾಂ ದಿಶಂ ॥ ೩ ॥

---

### ಹದಿನೇಳನೆಯ ಸರ್ಗವು.

೧. ರಾಕ್ಷಸರನ್ನು ಕೊಂದು ರಾಮನು ರಾಜ್ಯವನ್ನು ಹೊಂದಿ ಪಟ್ಟಾಭಿಷೇಕ ಮಾಡಿಕೊಂಡಮೇಲೆ ಋಷಿಗಳೆಲ್ಲರೂ ರಾಘವನನ್ನು ಅಭಿನಂದಿಸಲು ಅಯೋಧ್ಯೆಗೆ ಬಂದರು.

೨. ವಿಶ್ವಾಮಿತ್ರ, ಯವಕ್ರೀತ, ರೈಭ್ಯ, ಚ್ಯವನ, ಕಣ್ವ ಇವರೇ ಮುಂತಾದ ಪೂರ್ವ ದಿಕ್ಕಿನಲ್ಲಿನ ಋಷಿಗಳೆಲ್ಲರೂ ಬಂದರು.

೩. ಆತ್ರೇಯ, ನಮುಚಿ, ಅರಿಮುಚ, ಅಗಸ್ತ್ಯ ಇವರೇ ಮುಂತಾದ ದಕ್ಷಿಣ ದಿಕ್ಕಿನಲ್ಲಿದ್ದ ಋಷಿಗಳೂ ಬಂದರು.

ಉಪಗುಃ ಕಾಮಠೋ ಧೂಮ್ರೋ ರೌದ್ರಾಶ್ವೋ ಮುನಿಪುಂಗವಃ ।
ಆಜಗ್ಮುರ್ಮುನಯಸ್ತತ್ರ ಯೇ ಪ್ರತೀಚೀಂ ಸಮಾಶ್ರಿತಾಃ ॥ ೪ ॥

ಶಿಷ್ಯೋಪಶಿಷ್ಯಸಹಿತಾ ವಸಿಷ್ಠ ಪ್ರಮುಖರ್ಷಯಃ ।
ಆಜಗ್ಮುರ್ಹಿ ಮಹಾತ್ಮಾನ ಉತ್ತರಾಂ ದಿಶಮಾಶ್ರಿತಾಃ ॥ ೫ ॥

ಪ್ರಾಪ್ಯ ತೇ ತು ಮಹಾತ್ಮಾನೋ ರಾಘವಸ್ಯ ನಿವೇಶನಂ ।
ಗೃಹೀತ್ವಾ ಫಲಮೂಲಾನಿ ಹುತಾಶಸಮವಿಗ್ರಹಾಃ ॥ ೬ ॥

ರಾಘವಂ ಪ್ರತಿನಂದ್ಯಾಥ ವಿವಿಶುಃ ಪರಮಾಸನೇ ।
ರಾಘವಶ್ಚ ಮಹಾತೇಜಾಃ ಸೀತಯಾ ಸಹಸುವ್ರತ ॥ ೭ ॥

ಭ್ರಾತೃಭಿರ್ಮಂತ್ರಿಭಿಸ್ಸಾರ್ಧಂ ಪೌರೈಃ ಶ್ರೇಣಿಮುಖೈಸ್ತಥಾ ।
ವಿನೀತ ಉಪಸಂಗಮ್ಯ ಪೂಜಯಾಮಾಸ ತಾನ್ ಮುನೀನ್ ॥ ೮ ॥

---

೪. ಉಪಗ್ಗು ಕಾಮಠ, ಧೂಮ್ರ, ರೌದ್ರಾಶ್ವ ಮುಂತಾದ ಪಶ್ಚಿಮ ದಿಕ್ಕಿನಲ್ಲಿರುವ ಋಷಿಗಳೂ ಬಂದರು.

೫. ವಶಿಷ್ಠನೇ ಮುಂತಾದ ಉತ್ತರದಿಕ್ಕಿನಲ್ಲಿದ್ದ ಋಷಿಗಳು ಶಿಷ್ಯ ಉಪಶಿಷ್ಯರೊಡನೆ ಅಯೋಧ್ಯೆಗೆ ಬಂದರು.

೬. ಆ ಮಹಾತ್ಮರೆಲ್ಲರೂ ಬಹು ಪರಿಶುದ್ಧರಾದವರು, ಅಗ್ನಿಯಂತೆ ತೇಜಸ್ಸುಳ್ಳವರು, ಅವರು ಕೈಯ್ಯಲ್ಲಿ ಫಲಮೂಲಗಳನ್ನು ತೆಗೆದುಕೊಂಡು ರಾಮನ ಮನೆಗೆ ಹೋದರು. ಮತ್ತು ಆ ರಾಮನಿಗೆ ಉಪಾಯನಗಳನ್ನು ಕೊಟ್ಟು ಅವನಿಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು, ಮತ್ತು ರಾಮನ ಅನುಮತಿಯಂತೆ ಆಸನದಲ್ಲಿ ಕುಳಿತುಕೊಂಡರು.

೭-೮. ಮಹಾ ತೇಜಸ್ವಿಯಾದ ರಾಮನು ಸೀತೆಯೊಡನೆಯೂ ಸಹೋದರರೊಡನೆಯೂ, ಮಂತ್ರಿಗಳೊಡನೆಯೂ, ಪಟ್ಟಣಿಗರೊಡನೆಯೂ, ಆಪ್ತರೊಡನೆಯೂ, ಕೂಡಿಕೊಂಡು ವಿನಯದಿಂದ ಅವರನ್ನು ಬರಮಾಡಿಕೊಂಡು ಪೂಜಿಸಿದನು.

ಅಗಸ್ತ್ಯ ಪ್ರಮುಖಾ ವಿಪ್ರಾ ದಿಷ್ಟ್ಯಾ ದಿಷ್ಟ್ಯೇತಿ ಚಾಬ್ರುವನ್ ।
ರಾಘವಂ ಪ್ರಶಶಂಸುಸ್ತೇ ಮುನಯೋ ವಾಗ್ವಿದಾಂ ವರಾಃ ॥ ೯ ॥

ತ್ವಂ ಹಿ ದೇವೋ ಜಗನ್ನಾಥೋ ಜಗತಾಮುಪಕಾರಕಃ ।
ರಾವಣಸ್ಯ ಸಪುತ್ರಸ್ಯ ಸಾಮಾತ್ಯಸ್ಯ ವಧಾತ್ ಪ್ರಭೋ ॥ ೧೦ ॥

ಜಗದೇತನ್ಮಹಾಬಾಹೋ ಪುನರ್ಜಾತಮಿವಾಭವತ್ ।
ನ ರಾವಣಾದಭ್ಯಧಿಕೋ ದುಷ್ಟೋ ಲೋಕಭಯಂಕರಃ ॥ ೧೧ ॥

ದಶಾಸ್ಯೈರ್ದಶದಿಕ್ಕಾರ್ಯಮಾಜ್ಞಾಪಯತಿ ರಾಕ್ಷಸಃ ।
ಸ ದಶಾಸ್ಯೋ ಹತೋ ರಾಮ ದಿಷ್ಟ್ಯಾ ಚ ಜಗದುದ್ಧೃತಂ ॥ ೧೨ ॥

ಭಗವಾನಸಿ ಭೂಪಾಲ ಬ್ರಹ್ಮಣಾ ಪ್ರಾರ್ಥಿತಃ ಪುರಾ ।
ಪುಂಡರೀಕವಿಶಾಲಾಕ್ಷಃ ಶ್ಯಾಮ ಆಜಾನುಬಾಹುಕಃ ॥ ೧೩ ॥

೯. ಅಗಸ್ತ್ಯನೇ ಮುಂತಾದ ಋಷಿಗಳು ಸಂತೋಷ ಸಂತೋಷ ಎಂಬುದಾಗಿ ಹೇಳುತ್ತ ಆ ರಾಮನನ್ನು ಪ್ರಶಂಸೆ ಮಾಡಿದರು.

೧೦. ನೀನೇ ಸ್ವಾಮಿಯು, ಜಗತ್ತಿಗೆ ಒಡೆಯನು ರಾವಣನನ್ನೂ ಅವನ ಮಕ್ಕಳನ್ನೂ ಅವನ ಮಂತ್ರಿಗಳನ್ನೂ ಕೊಂದು ಜಗತ್ತಿಗೆ ಉಪಕಾರ ಮಾಡಿದ್ದೀಯೇ. ಎಲೈ ಮಹಾಬಾಹುವೇ ! ಈ ಪ್ರಪಂಚವು ರಾವಣನ ತೊಂದರೆಯು ತಪ್ಪಿದುದರಿಂದ ಮತ್ತೆ ಜನ್ಮವನ್ನು ತಾಳಿದಂತಾಗಿದೆ.

೧೧–೧೨. ರಾವಣನಿಗಿಂತಲೂ ಹೆಚ್ಚು ದುಷ್ಟನೂ ಲೋಕಭಯಂಕರನೂ ಮತ್ತೊಬ್ಬನಿಲ್ಲ. ಆ ರಾವಣನು ತನ್ನ ಹತ್ತು ಮುಖಗಳಿಂದಲೂ ಒಂದೊಂದರಿಂದ ಒಂದೊಂದು ದಿಕ್ಕಿನ ಕಾರ್ಯವನ್ನು ನೆರವೇರಿಸುತ್ತಿದ್ದನು, ಅಂತಹ ರಾವಣನನ್ನು ಕೊಂದು ಜಗತ್ತನ್ನು ಉದ್ಧಾರಮಾಡಿದೆ.

೧೩–೧೪. ಎಲೈ ರಾಮನೆ! ನೀನು ಭಗವಂತನು, ಪುಂಡರೀಕದಂತೆ ಕಣ್ಣುಗಳುಳ್ಳವನು, ಶ್ಯಾಮಲ ವರ್ಣನು, ಮಂಡಿಯವರೆಗೂ ಕೈಗಳುಳ್ಳವನು, ಇಂತಹ

**ಅಯೋಧ್ಯಾಯಾಂ ಪ್ರಾದುರಭೂದಿಕ್ಷ್ವಾಕುಕುಲನಂದನಃ ।**
**ತ್ವದ್ದರ್ಶನಾನ್ಮಹಾಬಾಹೋ ನಿರ್ವೃತ್ತಾಸ್ಮೋ ವಯಂ ಪ್ರಭೋ ॥ ೧೪ ॥**

**ತಪಶ್ಚರಾಮಸ್ಸಹಿತಾಃ ತ್ವತ್ಪ್ರಸಾದಾದ್ವನೇ ವನೇ ।**
**ಕಿಂತು ಸೀತಾ ಮಹಾದೇವೀ ಪ್ರಾಪ ದುಃಖಂ ಮಹತ್ ಪ್ರಭೋ ॥ ೧೫ ॥**

**ತದೇವ ಸ್ಮರ್ಯಮಾಣಂ ಸಚ್ಚಿತ್ತಮುದ್ವೇಜಯೇದ್ಧಿ ನಃ ।**
**ಏವಮುಕ್ತೇತು ಮುನಿಭಿಃ ಸಾನುಕ್ರೋಶಂ ಪುನಃ ಪುನಃ ॥ ೧೬ ॥**

**ಜಹಾಸ ಮಧುರಂ ಸಾಧ್ವೀ ಸೀತಾ ಜನಕನಂದಿನೀ ।**
**ಉವಾಚ ಸಸ್ಮಿತಂ ದೇವೀ ತಾನ್ ಮುನೀನ್ ಮಿತಭಾಷಿಣೀ ॥ ೧೭ ॥**

**ಮುನಯೋ ಯದ್ಯದುಕ್ತಂ ಹಿ ರಾವಣಸ್ಯ ವಧಂ ಪ್ರತಿ ।**
**ಪರಿಹಾಸ ಇವಾಭಾತಿ ಪ್ರಶಂಸನಮಿದಂ ದ್ವಿಜಾಃ ॥ ೧೮ ॥**

---

ನಿನ್ನನ್ನು ಬ್ರಹ್ಮನು ಕೇಳಿಕೊಳ್ಳಲು ಅಯೋಧ್ಯೆಯಲ್ಲಿ ಇಕ್ಷ್ವಾಕು ವಂಶದಲ್ಲಿ ಹುಟ್ಟಿದ್ದೀಯೆ. ಇಂತಹ ನಿನ್ನ ದರ್ಶನದಿಂದ ನಾವೆಲ್ಲರೂ ಸುಖಿಗಳಾಗಿದ್ದೇವೆ.

೧೫. ಎಲೈ ರಾಮನೆ! ನಿನ್ನ ಅನುಗ್ರಹದಿಂದ ಪ್ರತಿಯೊಂದು ವನದಲ್ಲಿಯೂ ನಾವು ತಪಸ್ಸನ್ನು ಮಾಡುತ್ತಿದ್ದೇವೆ. ಆದರೆ ಈ ಸೀತೆಯು ಬಹುವಾದ ದುಃಖವನ್ನು ಹೊಂದಿದಳು, ಅದನ್ನು ಜ್ಞಾಪಿಸಿಕೊಂಡರೆ ನಮ್ಮ ಮನಸ್ಸು ಬಹುವಾಗಿ ವ್ಯಥೆಗೊಳಗಾಗುತ್ತದೆ.

೧೬-೧೭. ಆ ಋಷಿಗಳು ದಯೆಯುಳ್ಳವರಾಗಿ ಮತ್ತೆ ಮತ್ತೆ ಹೇಳುತ್ತಿರಲು ಸಾಧ್ವಿಯೂ ಜನಕ ನಂದಿನಿಯೂ ಆದ ಸೀತೆಯು ನಕ್ಕಳು. ಆಗ ಮಿತಭಾಷಿಣಿಯಾದ ಆಕೆಯು ಮುಗುಳು ನಗೆಯನ್ನು ನಗುತ್ತ ಋಷಿಗಳನ್ನು ಕುರಿತು ಇಂತೆಂದಳು.

೧೮. ಎಲೈ ಋಷಿಗಳಿರಾ। ರಾವಣನ ವಧೆಯನ್ನು ಕುರಿತು ನೀವುಗಳು ಹೇಳಿದುದೆಲ್ಲ ಪ್ರಶಂಸೆಯಂತೆ ಕಾಣುವುದಿಲ್ಲ, ಅವೆಲ್ಲವೂ ಹಾಸ್ಯವಾಗಿ ಕಾಣುತ್ತವೆ.

ರಾವಣೋ ಹಿ ದುರಾಚಾರಃ ಸತ್ಯಮೇತನ್ನ ಸಂಶಯಃ ।
ದಶಭಿರ್ವದನೈರ್ವೀರೋ ಜಗದುದ್ವೇಜಕೋ ಹಿ ಸಃ ॥ ೧೯ ॥

ದಶಾಸ್ಯಸ್ಯ ವಧೋ ವಿಪ್ರಾ ನ ಪ್ರಶಂಸಾಮಿಹಾರ್ಹತಿ ।
ಏತಚ್ಛ್ರುತ್ವಾ ತು ಮುನಯೋ ವಿಸ್ಮಯಂ ಪರಮಂ ಗತಾಃ ॥ ೨೦ ॥

ಕಿಮೇತದಿತಿ ಹೋಚುಸ್ತೇ ಪರಸ್ಪರಮುಖೇಕ್ಷಣಾಃ ।
ಅಯೋನಿಸಂಭವಾ ಸೀತಾ ಕಾಕುತ್ಸ್ಥಕುಲಮಾಶ್ರಿತಾ ॥ ೨೧ ॥

ಅಸ್ಮಾನಪಿ ಜಹಾಸೇಯಂ ಕಿಮೇತನ್ನೈವ ವಿದ್ಮಹೇ ।
ತಚ್ಛ್ರುತ್ವಾ ವಚನಂ ತೇಷಾಂ ಮುನೀನಾಂ ಭಾವಿತಾತ್ಮನಾಂ ॥ ೨೨ ॥

---

೧೯. ಆ ರಾವಣನು ದುರಾಚಾರಿಯು ಅದು ನಿಶ್ಚಯವು, ಅದರಲ್ಲಿ ಸಂಶಯವೇ ಇಲ್ಲ. ಅವನು ತನ್ನ ಹತ್ತು ಮುಖಗಳಿಂದಲೂ ಜಗತ್ತನ್ನೇ ದುಃಖ ಪಡಿಸುತ್ತಿದ್ದನು.

೨೦. ಆದರೆ ಆ ದಶಾಸ್ಯನಾದ ರಾವಣನ ವಧೆಯು ಹೊಗಳಿಕೆಗೆ ಯೋಗ್ಯ ವಾದುದಲ್ಲ, ಹೀಗೆಂದು ಸೀತೆಯು ಹೇಳಲು ಇದನ್ನು ಕೇಳಿ ಋಷಿಗಳೆಲ್ಲರೂ ಬಹು ವಾಗಿ ಆಶ್ಚರ್ಯವನ್ನು ಹೊಂದಿದರು.

೨೧. ಮತ್ತು ಇದೇನಿರಬಹುದು? ಎಂಬುವಾಗಿ ಒಬ್ಬರ ಮುಖವನ್ನು ಒಬ್ಬರು ನೋಡುತ್ತಾ ಹೇಳುತ್ತಿದ್ದರು. ಈ ಸೀತೆಯು ಯೋನಿಸಂಬಂಧವಿಲ್ಲದೆ ಹುಟ್ಟಿ ದವಳು. ಮತ್ತು ಕಾಕುತ್‌ನ ವಂಶಕ್ಕೆ ಸೇರಿದಳು. ಈಕೆಯು ನಾವು ಹೇಳಿದುದನ್ನು ಕೇಳಿ ತಿರಸ್ಕಾರದಿಂದ ನಕ್ಕಳು. ಇದು ಏನೆಂಬುದು ಗೊತ್ತಾಗಲಿಲ್ಲ.

೨೨. ಆ ಋಷಿಗಳ ಮಾತನ್ನು ಸೀತೆಯು ಕೇಳಿ ಬಹುವಾಗಿ ಹೆದರಿ ಆ ಋಷಿ ಗಳಿಗೆ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದಳು.

ಸೀತಾ ಭೀತಾ ಪ್ರಣಮ್ಯೋಚೇ ಕೃತಾಂಜಲಿಪುಟಾಸತೀ ।
ಪೃಥಗ್ಜನೇವ ಮುನಯೋ ನಾಹಮನೃತಭಾಷಿಣೀ ॥ ೨೩ ॥

ಯದಿ ಚಾಜ್ಞಾಪಯಥ ಮಾಂ ತದಾ ವಕ್ಷ್ಯಾಮಿ ಚಾದಿತಃ ।
ಅಗಸ್ತ್ಯಪ್ರಮುಖಾ ವಿಪ್ರಾಃ ಸೀತಾಯಾ ವಿನಯಾನ್ವಿತಂ ॥ ೨೪ ॥

ಆಕರ್ಣ್ಯ ವಚನಂ ಪ್ರೀತಾಃ ಪ್ರೋಚುಸ್ತೇ ಕಥ್ಯತಾಮಿತಿ ।
ತತಸ್ಸೀತಾ ಮಹಾಭಾಗಾ ಪ್ರವಕ್ತುಮುಪಚಕ್ರಮೇ ॥ ೨೫ ॥

ಪತಿಂ ಮುನೀನ್ ದೇವರಾಂಶ್ಚ ಮಂತ್ರಿಣಃ ಶ್ರೇಣಿಮುಖ್ಯಕಾನ್ ।
ವಿನಯೇನಾಭ್ಯನುಜ್ಞಾಪ್ಯ ಪೂರ್ವವೃತ್ತಾಂತಮಾದರಾತ್ ॥ ೨೬ ॥

ಪೂರ್ವಂ ವಿವಾಹಾನ್ಮುನಯೋ ಯದಾಸಂ ಪಿತೃಮಂದಿರೇ ।
ತದೈಕೋತಿಥಿರೂಪೇಣ ಬ್ರಾಹ್ಮಣಃ ಸಮುಪಾಗತಃ ॥ ೨೭ ॥

---

೨೩. ಎಲೈ ಋಷಿಗಳಿರ! ನಾನು ಲೋಕದಲ್ಲಿನ ಪಾಮರ ಜನಗಳಂತೆ ಸುಳ್ಳನ್ನು ಹೇಳತಕ್ಕವಳಲ್ಲ, ನನಗೆ ಅಪ್ಪಣೆಯನ್ನು ಕೊಟ್ಟರೆ ನಾನು ಮೊದಲಿನಿಂದಲೂ ವಿಷಯಗಳನ್ನು ಹೇಳುತ್ತೇನೆ.

೨೪. ಆಗ ಅಗಸ್ತ್ಯನೇ ಮುಂತಾದ ಋಷಿಗಳು ಸೀತೆಯ ವಿನಯದ ಮಾತನ್ನು ಕೇಳಿ ಸಂತೋಷಗೊಂಡು ಹೇಳೆಂದರು, ಕೇಳಿದರು.

೨೫–೨೬. ಅನಂತರ ಸೀತೆಯು ಗಂಡ, ಮುನಿಗಳು, ಮೈದಂದಿರು, ಮಂತ್ರಿಗಳು, ಮುಖ್ಯಸ್ಥರು ಇವರಿಗೆ ವಿನಯದಿಂದ ವಿಜ್ಞಾಪಿಸಿಕೊಂಡು ಅವರ ಅನುಮತಿಯನ್ನು ಹೊಂದಿ ಪೂರ್ವ ವೃತ್ತಾಂತವನ್ನು ಹೇಳುವುದಕ್ಕೆ ಮೊದಲು ಮಾಡಿದಳು.

೨೭. ಮದುವೆಯಾಗುವುದಕ್ಕಿಂತಲೂ ಮುಂಚೆ ತಂದೆಯ ಮನೆಯಲ್ಲಿದ್ದಾಗ ಅತಿಥಿಯ ರೂಪದಿಂದ ಒಬ್ಬ ಬ್ರಾಹ್ಮಣನು ನಮ್ಮ ಮನೆಗೆ ಬಂದನು.

**ಆಗತ್ಯ ಪಿತರಂ ಮಹ್ಯಂ ತಮುವಾಚ ದ್ವಿಜೋತ್ತಮಃ ।**
**ಚತುರೋ ವಾರ್ಷಿಕಾನ್ ಮಾಸಾನ್ ಸ್ಥಾಸ್ಯಾಮಿ ತವ ಮಂದಿರೇ ॥ ೨೮ ॥**

**ಯದಿ ಸೇವಾಪರೋ ನಿತ್ಯಂ ಭವಸ್ಯಮರಸನ್ನಿಭಃ ।**
**ಜನಕೋ ಮತ್ಪಿತಾ ದೇವದ್ವಿಜಭಕ್ತಿಪರಾಯಣಃ ॥ ೨೯ ॥**

**ಬ್ರಾಹ್ಮಣಂ ವಾಸಯಾಮಾಸ ನಾನಾಭಕ್ಷ್ಯಂ ಸಮಾದಿಶತ್ ।**
**ಅಹಂ ಚ ತಸ್ಯ ಸೇವಾಯೈ ನಿಯುಕ್ತಾ ಧರ್ಮಭೀರುಣಾ ॥ ೩೦ ॥**

**ಯದಾ ಯಥಾಜ್ಞಾಪಯತಿ ದ್ವಿಜಸ್ಸಪರಮಾರ್ಥವಿತ್ ।**
**ತಥಾಹ್ಯಕರವಂ ತತ್ರ ರಾತ್ರಿಂ ದಿವಮತಂದ್ರಿತಾ ॥ ೩೧ ॥**

**ನಾನಾತೀರ್ಥಾಭಿಗಮನಂ ಕೃತಂ ತೇನ ಮಹಾತ್ಮನಾ ।**
**ತತ್ರತ್ಯಾಶ್ಚ ಕಥಾಶ್ಚಿತ್ರಾಃ ಶ್ರಾವಯಾಮಾಸ ಮಾಂ ದ್ವಿಜಃ ॥ ೩೨ ॥**

---

೨೮. ನಮ್ಮ ಮನೆಗೆ ಬಂದ ಆತನು ನನ್ನ ತಂದೆಯನ್ನು ಕುರಿತು ಎಲೈ ಜನಕನೆ! ನಿನ್ನ ಮನೆಯಲ್ಲಿ ಮಳೆಗಾಲದ ನಾಲ್ಕು ತಿಂಗಳನ್ನು ಕಳೆಯಬೇಕೆಂದಿದ್ದೇನೆ. ನೀನು ನನ್ನ ಸೇವೆಯನ್ನು ಮಾಡುವುದಾದರೆ ಇಲ್ಲಿ ನಿಲ್ಲುತ್ತೇನೆ.

೨೯-೩೦. ದೇವತೆಗಳ ಬ್ರಾಹ್ಮಣರ ಸೇವೆಯಲ್ಲಿ ಆಸಕ್ತನಾದ ನನ್ನ ತಂದೆಯು ಬಗೆಬಗೆಯ ಭಕ್ಷ್ಯಗಳನ್ನು ಮಾಡಿ ಭೋಜನ ಮಾಡಿಸುತ್ತ ಆ ಬ್ರಾಹ್ಮಣನನ್ನು ಇಟ್ಟುಕೊಂಡನು. ಅಧರ್ಮದಲ್ಲಿ ಹೆದರಿಕೆಯುಳ್ಳ ಆತನು ನನ್ನನ್ನು ಆ ಅತಿಥಿಯ ಸೇವೆಗೋಸ್ಕರ ನಿಯಮಿಸಿದನು. ಎಂದನು.

೩೧. ಪರಮಾತ್ಮನಲ್ಲಿ ಆಸಕ್ತನಾದ ಆ ದ್ವಿಜನು ಯಾವಾಗ ಹೇಗೆ ಅಪ್ಪಣೆ ಮಾಡುತ್ತಾನೆಯೋ ಹಾಗೆಯೇ ರಾತ್ರಿ ಹಗಲೂ ಬೇಸರ ಪಡದೆ ಸೇವಿಸುತ್ತಿದ್ದೆನು.

೩೨. ಆ ಬ್ರಾಹ್ಮಣನು ನಾನಾ ಬಗೆಯಾದ ತೀರ್ಥಯಾತ್ರೆಗಳನ್ನು ಮಾಡಿದ್ದನು. ಆದುದರಿಂದ ಅಲ್ಲಿನ ಕಥೆಗಳನ್ನು ನನಗೆ ಹೇಳುತ್ತಿದ್ದನು.

ಸೇವಯಾ ಮಮ ಧೈರ್ಯೇಣ ಚಾನುಕೂಲ್ಯೇನ ತರ್ಪಿತಃ ।
ಕದಾಚಿದ್ಬ್ರಾಹ್ಮಣಶ್ರೇಷ್ಠಃ ಪ್ರಿಯಭಾಷೀ ಯದಾತ್ಥ ಮಾಂ ॥ ೩೩ ॥

ತದ್ಯೋಽಹಮಭಿಧಾಸ್ಯಾಮಿ ಶೃಣುತ ದ್ವಿಜಪುಂಗವಾಃ ।
ಏಕದಾ ಪ್ರಾತರುತ್ಥಾಯ ಕೃತನೈತ್ರಃ ಕೃತಾಹ್ನಿಕಃ ॥ ೩೪ ॥

ಸೀತೇ ಇತಿ ಸಮಾಭಾಷ್ಯ ಪ್ರವಕ್ತುಮುಪಚಕ್ರಮೇ ।
ಶೃಣು ಸೀತೇ ಮಯಾ ದೃಷ್ಟಮಾಶ್ಚರ್ಯಂ ಕಮಲಾನನೇ ॥ ೩೫ ॥

ದಧಿಮಂಡೋದಕಾಬ್ಧೇಶ್ಚ ಪರಃ ಸ್ವಾದೂದಕೋಽಬ್ಧಿಕಃ ।
ಪುಷ್ಕರದ್ವೀಪಮಾವೃತ್ಯ ವರ್ತತೇ ವಲಯಾಕೃತಿಃ ॥ ೩೬ ॥

ಪುಷ್ಕರಂ ಪುಷ್ಕರೇ ದೃಷ್ಟಂ ಮಹಾವಹ್ನಿಶಿಖೋಜ್ಜ್ವಲಂ ।
ಪತ್ರಾಯುತಾಯುತಯುತಂ ಬ್ರಹ್ಮಣಃ ಪರಮಾಸನಂ ॥ ೩೭ ॥

---

೩೩. ನನ್ನ ಧೈರ್ಯಕ್ಕೂ ನಾನು ಅವನ ಮನಸ್ಸಿಗೆ ತಕ್ಕಂತೆ ಸೇವೆ ಮಾಡಿದುದಕ್ಕೂ ಸಂತೋಷಗೊಂಡನು. ಒಂದು ಸಾರಿ ಆ ಬ್ರಾಹ್ಮಣಶ್ರೇಷ್ಠನು ಪ್ರಿಯವಾದ ಮಾತಿನಿಂದ ನನ್ನನ್ನು ಕುರಿತು ಹೇಳಿದುದನ್ನು ನಿಮಗೆ ಹೇಳುತ್ತೇನೆ. ಎಲೈ ಬ್ರಾಹ್ಮಣರಿರಾ ಅದನ್ನು ಕೇಳಿರಿ.

೩೪-೩೫. ಆ ಅತಿಥಿಯು ಒಂದು ದಿನ ಬೆಳಿಗ್ಗೆ ಎದ್ದು ಸೂರ್ಯೋಪಾಸನೆಯನ್ನು ಮಾಡಿ ಆಹ್ನಿಕಗಳನ್ನು ನೆರವೇರಿಸಿಕೊಂಡು ಸೀತೆ ಎಂಬುದಾಗಿ ನನ್ನನ್ನು ಕೂಗಿ ಹೇಳುವುದಕ್ಕೆ ಮೊದಲು ಮಾಡಿದನು. ಎಲೈ ಕಮಲಮುಖಿಯಾದ ಸೀತೆಯೇ! ನಾನು ನೋಡಿದ ಒಂದು ಆಶ್ಚರ್ಯವನ್ನು ಹೇಳುತ್ತೇನೆ, ಕೇಳು.

೩೬. ದದಿ ಮಂಡವೆಂಬ ಸಮುದ್ರಗಳಿಗಿಂತಲೂ ಆಕಡೆಗೆ ಸ್ವಾದೂದಕವೆಂಬ ಒಂದು ಸಮುದ್ರವಿದೆ, ಅದು ಪುಷ್ಕರವೆಂಬ ದ್ವೀಪವನ್ನು ಸುತ್ತುಗಟ್ಟಿಕೊಂಡು ದುಂಡಗೆ ನಿಂತಿರುವುದು.

೩೭. ಆ ಪುಷ್ಕರದ್ವೀಪದಲ್ಲಿ ಒಂದು ಕೊಳವನ್ನು ನೋಡಿದೆನು, ಅದರಲ್ಲಿ ಒಂದು ಕಮಲವಿದೆ, ಅದು ಸಾವಿರ ದಳಗಳಿಂದ ಕೂಡಿದೆ, ಬ್ರಹ್ಮನಿಗೆ ಆಸನಭೂತವಾದುದು.

ತದ್ದ್ವೀಪವರ್ಷಯೋರ್ಮಧ್ಯೇ ಮಾನಸೋತ್ತರ ಸಂಜ್ಞಕಃ ।
ಮರ್ಯಾದಾಪರ್ವತೋ ದೈರ್ಘ್ಯೇ ಚಾಯಾಮೇಯುತಯೋಜನಃ ॥ ೩೮ ॥

ತಚ್ಛೈಲಸ್ಯ ಚತುರ್ದಿಕ್ಷು ಇಂದ್ರಾದೀನಾಂ ಪುರಾಣಿ ಹಿ ।
ಕ್ರೀಡಾರ್ಥಂ ನಿರ್ಮಿತಾನ್ಯೇಷಾಂ ಮಹಾಂತಿ ವಿಶ್ವಕರ್ಮಣಾ ॥ ೩೯ ॥

ಸುಮಾಲೀ ರಾಕ್ಷಸಶ್ರೇಷ್ಠಃ ಕೈಕಸೀ ನಾಮ ತತ್ಸುತಾ ।
ಮುನೇರ್ವಿಶ್ರವಸಃ ಪತ್ನೀ ಸಾಸೂತ ರಾವಣದ್ವಯಂ ॥ ೪೦ ॥

ಏಕಃ ಸಹಸ್ರವದನೋ ದ್ವಿತೀಯೋ ದಶವಕ್ತ್ರಕಃ ।
ಜನ್ಮಕಾಲೇ ಸುರೈರುಕ್ತ ಮಾಕಾಶೇ ರಾವಣದ್ವಯಂ ॥ ೪೧ ॥

---

೩೮. ಆ ದ್ವೀಪಕ್ಕೂ ಆಚೆಕಡೆಯಲ್ಲಿರುವ ದೇಶಕ್ಕೂ ಮಧ್ಯದಲ್ಲಿ ಮಾನಸೋತ್ತರ ಪರ್ವತವೆಂಬ ಎಲ್ಲೆಯ ಪರ್ವತವೊಂದಿರುವುದು, ಅದು ಹತ್ತುಸಾವಿರ ಯೋಜನ ಉದ್ದವಿರುವುದು.

೩೯. ಆ ಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ಇಂದ್ರಾದಿಗಳ ಪಟ್ಟಣಗಳಿವೆ. ಅವನ್ನು ಅವರುಗಳಿಗೆ ಕ್ರೀಡೆಗೋಸ್ಕರವಾಗಿ ವಿಶ್ವಕರ್ಮನು ನಿರ್ಮಿಸಿಕೊಟ್ಟಿರುವನು.

೪೦. ಅಲ್ಲಿ ಸುಮಾಲಿ ಎಂಬ ರಾಕ್ಷಸನಿರುವನು, ಅವನಿಗೆ ಕೈಕಸಿ ಎಂಬ ಮಗಳಿರುವಳು. ಅವಳನ್ನು ವಿಶ್ರವಸ್ಸೆಂಬ ಋಷಿಗೆ ಮದುವೆ ಮಾಡಿಕೊಟ್ಟಿರುವನು. ಅವಳು ಇಬ್ಬರು ರಾವಣರನ್ನು ಹೆತ್ತಳು.

೪೧–೪೨. ಅವರಿಬ್ಬರಲ್ಲಿ ಒಬ್ಬ ರಾವಣನು ಸಾವಿರ ಮುಖವುಳ್ಳವನು. ಮತ್ತೊಬ್ಬನು ಹತ್ತು ಮುಖವುಳ್ಳವನು. ಅವರು ಹುಟ್ಟುವಾಗಲೇ ಆಕಾಶದಲ್ಲಿ ದೇವತೆಗಳು ಇಬ್ಬರು ರಾವಣರು ಹುಟ್ಟಿದರು ಎಂದು ಕೂಗಿದರು. ಇವರು ಲೋಕವೆಲ್ಲವನ್ನೂ ಬಾಧಿಸುತ್ತಿದ್ದುದರಿಂದ ಇವರಿಗೆ ಇವರ ಕೆಲಸಕ್ಕೆ ಸರಿಯಾದ ಎಂದರೆ ಅನ್ವರ್ಥವಾದ

ಲೋಕಾನಾಂ ರಾವಣಾಜ್ಞಾತಂ ನಾಮುಯೌತಕಮೇತಯೋಃ ।
ಕನಿಷ್ಠೋ ದಶಕಂಠೋಽಯಂ ಶಿತಿಕಂಠಪ್ರಸಾದತಃ ॥ ೪೨ ॥

ಲಂಕಾಮಧಿವಸತ್ಯೇಷ ಧನದೇನವಿನಿರ್ಮಿತಾಂ ।
ಬ್ರಾಹ್ಮಣೋ ವರದಾನೇನ ತ್ರಿಲೋಕೀಮವಮನ್ಯತೇ ॥ ೪೩ ॥

ಶ್ರೇಷ್ಠಸ್ಸಹಸ್ರವದನೋ ರಾವಣೋ ಲೋಕರಾವಣಃ ।
ಸ್ವಾಭಾವಿಕಬಲೇನಾಸೌ ಪುಷ್ಕರದ್ವೀಪಮಾಶ್ರಿತಃ ॥ ೪೪ ॥

ಸೂರ್ಯಾಚಂದ್ರಮಸಾಗೃಹ್ಯ ಕ್ರೀಡೇತ್ಕಂದುಕಲೀಲಯಾ ।
ಕುಲಾಚಲಾನ್ ಸಮುದ್ಗೃಹ್ಯ ಕಂದುಕಂ ಕ್ರೀಡತೇ ಹಿ ಸಃ ॥ ೪೫ ॥

ಮಾನಸೋತ್ತರಶೈಲಸ್ಯ ಚತುರ್ದಿಕ್ಷು ಪುರಾಣಿ ಹಿ ।
ಆಚ್ಛಿದ್ಯ ಸಂಗೃಹೀತಾನಿ ದಿಗೀಶಾನಾಂ ಮಹಾತ್ಮನಾಂ ॥ ೪೬ ॥

---

ರಾವಣನೆಂಬ ಹೆಸರು ಬಂದಿತು. ರಾವಯತಿ ಹೆದರಿಸುತ್ತಾನೆ ಎಂಬುದೇ ಆದರ ಅರ್ಥವು ಈ ದಶಕಂಠನೇ ಕಿರಿಯವನು. ಇವನು ಶಿವನನ್ನು ಕುರಿತು ತಪಸ್ಸನ್ನು ಮಾಡಿ ಅವನ ಅನುಗ್ರಹವನ್ನು ಪಡೆದನು.

೪೩. ಕುಬೇರನು ನಿರ್ಮಿಸಿಕೊಂಡಿದ್ದ ಲಂಕೆಯಲ್ಲಿ ಆ ಕುಬೇರನನ್ನು ಓಡಿಸಿ ತಾನು ಅಲ್ಲಿದ್ದುಕೊಂಡಿದ್ದನು. ತಪಸ್ಸುಮಾಡಿ ಬ್ರಹ್ಮನನ್ನು ತೃಪ್ತಿಪಡಿಸಿ ಅವನಿಂದ ವರವನ್ನು ಪಡೆದು ಮೂರು ಲೋಕವನ್ನೂ ತಿರಸ್ಕರಿಸುತ್ತಿದ್ದನು.

೪೪. ದೊಡ್ಡವನಾದ ಸಾವಿರ ಮುಖವುಳ್ಳ ರಾವಣನೂ ಕೂಡ ಲೋಕಗಳೆಲ್ಲವನ್ನೂ ಬಾಧಿಸುವನು. ಅವನು ತನ್ನ ಸ್ವಭಾವವಾದ ಬಲದಿಂದಲೇ ಪುಷ್ಕರದ್ವೀಪವನ್ನು ಆಶ್ರಯಿಸಿಕೊಂಡಿರುವನು.

೪೫. ಅವನು ಸೂರ್ಯಚಂದ್ರರನ್ನೇ ಹಿಡಿದುಕೊಂಡು ಚೆಂಡಾಟವನ್ನು ಆಡುತ್ತಿದ್ದನು. ಕುಲಪರ್ವತಗಳನ್ನು ಕಿತ್ತುಕೊಂಡು ಅವುಗಳಿಂದಲೂ ಚಂಡಾಟವನ್ನು ಆಡುವನು.

೪೬. ಮಾನಸೋತ್ತರಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ದಿಗೀಶರ ಪಟ್ಟಣಗಳಿವೆ ಎಂದು ಹೇಳಿದೆನಷ್ಟೆ! ಅವುಗಳೆಲ್ಲವನ್ನೂ ಅವರಿಂದ ಕಿತ್ತುಕೊಂಡು ಅವರನ್ನು ಓಡಿಸಿಬಿಟ್ಟಿರುವನು.

ತತ್ರೈವ ರಮತೇ ರಾಜಾ ಮಾತಾಮಹಕುಲೈಸ್ಸಹ ।
ತಸ್ಯೇಂದ್ರೀ ಯಾ ಪುರಾ ರಮ್ಯಾ ಸ ಸ್ವಯಂ ತತ್ರ ತಿಷ್ಠತಿ ॥ ೪೭ ॥

ಅನ್ಯಾನ್ಯನ್ಯೇಭ್ಯ ಏವಾದಾನ್ಮಂತ್ರಿಭ್ಯೋ ರಾಕ್ಷಸಾಧಿಪಃ ।
ವಿಶೇಷತೋಲಂಕೃತಾ ಸಾ ಪುರೀ ಪರಮದುರ್ಲಭಾ ॥ ೪೮ ॥

ಜಗತಾಂ ಸಾರಮಾಕೃಷ್ಯ ಯಥಾಸ್ಥಾನಂ ಸುಮಂಡಿತಾ ।
ಚಂಪಕಾಶೋಕಮಂದಾರಕದಳೀಪ್ರಿಯಕಾರ್ಜುನೈಃ ॥ ೪೯ ॥

ಪಾಟಲಾ ಶೋಕಜಂಬೂಭಿಃ ಕೋವಿದಾರೈಶ್ಚ ಚಂದನೈಃ ।
ಪನಸೈಃ ಸಾಲತಾಲೈಶ್ಚ ತಮಾಲೈರ್ದೇವದಾರುಭಿಃ ॥ ೫೦ ॥

ವಕುಲೈಃ ಪಾರಿಜಾತೈಶ್ಚ ಕಲ್ಪವೃಕ್ಷೈರಲಂಕೃತಾ ।
ಅನ್ಯೈಶ್ಚ ವಿವಿಧೈರ್ವೃಕ್ಷೈಃ ಸರ್ವರ್ತುಕುಸುಮೋಜ್ಜ್ವಲೈಃ ॥ ೫೧ ॥

೪೭. ಆ ಸಹಸ್ರಕಂಠ ರಾವಣನು ತನ್ನ ತಾಯಿಯವರ ಕಡೆಯವರೊಡನೆ ಆ ಮಾನಸೋತ್ತರ ಭಾಗದಲ್ಲಿಯೇ ಸುಖವಾಗಿರುವನು. ಅಲ್ಲಿದ್ದ ಇಂದ್ರನ ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿಯೂ ಮಾಡಿಕೊಂಡಿರುವನು.

೪೮. ಉಳಿದ ದಿಕ್ಪಾಲಕರ ಮನೆಗಳನ್ನು ಆ ಸಹಸ್ರವದನ ರಾವಣನು ತನ್ನ ಮಂತ್ರಿಗಳಿಗೆ ಕೊಟ್ಟಿರುವನು. ಅಲ್ಲಿ ಮಂತ್ರಿಗಳು ವಾಸಮಾಡಿಕೊಂಡಿರುವರು. ಅಲ್ಲಿ ತಾನಿರುವ ರಾಜಧಾನಿಯನ್ನು ಬಹುವಾಗಿ ಅಲಂಕರಿಸಿಕೊಂಡಿರುವನು. ಅದು ಮತ್ತಾರಿಗೂ ಸಾಧ್ಯವಾಗಲಾರದು.

೪೯. ಜಗತ್ತಿನಲ್ಲಿ ಸಾರಭೂತವಾದ ಪದಾರ್ಥಗಳನ್ನು ಕಿತ್ತುತಂದು ಅವನ್ನು ಯಾವ ಜಾಗದಲ್ಲಿಟ್ಟರೆ ಚೆನ್ನಾಗಿ ಕಾಣುವುದೋ ಅಲ್ಲಲ್ಲಿ ಸುಂದರವಾಗುವಂತೆ ಅವನ್ನು ಇಟ್ಟಿದ್ದಾನೆ.

೫೦-೫೨ .ಸಂಪಿಗೆ, ಅಶೋಕ, ಮಂದಾರ, ಬಾಳೆ, ಪ್ರಿಯಂಗು, ಮತ್ತಿ, ಪಾದರಿ, ನೇರಳೆ, ಕಂಚುವಾಳ, ಚಂದನ, ಹಲಸು, ತ್ಯಾಗ, ತಾಳೆ, ಹೊಂಗೆ, ದೇವದಾರು, ಪಗಡೆ, ಪಾರಿಜಾತ, ಕಲ್ಪವೃಕ್ಷ ಇವುಗಳಿಂದ ಅಲಂಕೃತವಾಗಿದೆ. ಇವಲ್ಲದೆ

ದಿವ್ಯಗಂಧರಸೈರ್ದಿವ್ಯೈಃ ಸರ್ವರ್ತುಫಲಸಂಯುತೈಃ ।
ಭ್ರಮರೈಃ ಕೋಕಿಲೈರ್ನಾನಾವರ್ಣಪಕ್ಷಿಭಿರುಜ್ಜ್ವಲಾ ॥ ೫೨ ॥

ಶಾತಕೌಂಭಮಯೈಃ ಕೈಶ್ಚಿತ್ ಕೈಶ್ಚಿದಗ್ನಿಶಿಖೋಪಮೈಃ ।
ನೀಲಾಂಜನನಿಭೈಶ್ಚಾನ್ಯೈಃ ಶೋಭಿತಾವರಪಾದಪೈಃ ॥ ೫೩ ॥

ದೀರ್ಘಿಕಾಃ ಸಂತಿಬಹ್ವ್ಯೋತ್ರ ಜಲಪೂರ್ಣಾಮಹೋದಯ ।
ಮಹಾರ್ಹಮಣಿಸೋಪಾನಾಃ ಸ್ಫಾಟಿಕಾಂತರಕುಟ್ಟಿಮಾಃ ॥ ೫೪ ॥

ಫುಲ್ಲಪದ್ಮೋತ್ಪಲವನಾಶ್ಚಕ್ರವಾಕೋಪಶೋಭಿತಾಃ ।
ದಾತ್ಯೂಹಗಣಸಂಘುಷ್ಟಾ ಹಂಸಸಾರಸನಾದಿತಾಃ ॥ ೫೫ ॥

---

ಎಲ್ಲಾ ಕಾಲದಲ್ಲಿಯೂ ಹೂವು ಹಣ್ಣುಗಳನ್ನು ಬಿಡತಕ್ಕ ಬಗೆಬಗೆಯಾದ ಮರಗಳಿಂದಲೂ ಅಲಂಕೃತವಾಗಿದೆ. ಉತ್ತಮವಾದ ವಾಸನೆ, ರಸಗಳಿಂದಲೂ ಕೂಡಿರುವ ಮರಗಳಿಂದಲೂ ಅಲಂಕೃತವಾಗಿದೆ, ಮುಂಬಿಗಳಿಂದಲೂ, ಕೋಗಿಲೆಗಳಿಂದಲೂ, ಬಗೆಬಗೆಯಾದ ಬಣ್ಣವುಳ್ಳ ಪಕ್ಷಿಗಳಿಂದಲೂ ಆ ಜಾಗವು ಸುಂದರವಾಗಿದೆ.

೫೩. ಚಿನ್ನದ ಬಣ್ಣಕ್ಕೆಲೆ ಇರುವ ಮರಗಳಿಂದಲೂ, ಬೆಂಕಿಯ ಬಣ್ಣಕ್ಕೆಲೆ ಇರುವ ಮರಗಳಿಂದಲೂ, ಕಪ್ಪು ಬಣ್ಣಕ್ಕೆಲೆ ಇರುವ ಮರಗಳಿಂದಲೂ ಅದು ಸುಂದರವಾಗಿದೆ.

೫೪–೫೫. ಅಲ್ಲಿ ಅನೇಕವಾಗಿ ಕೊಳಗಳನ್ನು ಕಟ್ಟಿಸಿರುವನು. ಅವೆಲ್ಲವೂ ಒಳ್ಳೆಯ ನಿರ್ಮಲವಾದ ನೀರಿನಿಂದ ಕೂಡಿಕೊಂಡಿವೆ. ಮನೋಹರವಾಗಿವೆ. ಅವುಗಳಿಗೆ ಉತ್ತಮವಾದ ವಜ್ರ, ಮರಕತ ಮುಂತಾದ ಕಲ್ಲುಗಳಿಂದ ಸೋಪಾನವನ್ನು ಮಾಡಿರುತ್ತಾರೆ, ಆ ಕೊಳಗಳ ಕೆಳಭಾಗವನ್ನು ಸ್ಫಟಿಕ ಶಿಲೆಗಳಿಂದ ನಿರ್ಮಿಸಿರುವರು, ಆ ಕೊಳಗಳು ಯಾವಾಗಲೂ ಅರಳಿರುವ ಕಮಲಗಳಿಂದ ಶೋಭಿತವಾಗಿವೆ. ಚಕ್ರವಾಕಗಳು. ಅಲ್ಲಿರುವುವು. ನೀರು ಕಾಗೆಗಳು ಅನೇಕವಾಗಿರುವುವು. ಹಂಸಗಳೂ ಸಾರಸಪಕ್ಷಿಗಳೂ ಅಲ್ಲಿ ವಿಹರಿಸುತ್ತಿರುತ್ತವೆ.

ತತ್ರ ತತ್ರಾವನೇರ್ದೇಶಾ ವೈಡೂರ್ಯ ಮಣಿಸನ್ನಿ ಭಾಃ ।
ಶಾರ್ದೂಲೈಃ ಪರಮೋಪೇತಾಃ ಸುಖಾರ್ಥಮುಪಕಲ್ಪಿತಾಃ ॥ ೫೬ ॥

ಸರ್ವರ್ತುಸುಖದಾ ರಮ್ಯಾಃ ಪುಂಸ್ಕೋಕಿಲಕಲಾರವಾಃ ।
ಯೇ ವೃಕ್ಷಾ ನಂದನೇತಿಷ್ಠನ್ ಯೇ ಚ ಚೈತ್ರರಥಸ್ಥಿತಾಃ ॥ ೫೭ ॥

ಮಂದರೇನ್ಯೇಷು ಶೈಲೇಷು ತೇ ವೃಕ್ಷಾಸ್ತತ್ರ ಸಂಸ್ಥಿತಾಃ ।
ನಾನಾಮಣಿಮಯೀ ಭೂಮಿಃ ಮುಕ್ತಾಜಾಲಮಯೀ ತಥಾ ॥ ೫೮ ॥

ವಿಚಿತ್ರಬದ್ಧಸೋಪಾನ ಪ್ರಾಸಾದೈರುಪಶೋಭಿತಾ ।
ಪುರದ್ವಾರಸಮಾಕೀರ್ಣಾ ಪುರೀ ಪರಮಶೋಭನಾ ॥ ೫೯ ॥

---

೫೬. ಅಲ್ಲಲ್ಲಿಯೇ ಇರತಕ್ಕ ಸ್ಥಳಗಳಲ್ಲಿ ವೈಡೂರ್ಯದ ಮಣಿಗಳಲ್ಲಿ ಕುಳಿತುಕೊಳ್ಳುವುದಕ್ಕೆ ಅನುಕೂಲವಾಗುವಂತೆ ಮಾಡಿದ್ದಾರೆ, ಸಿಂಹ, ಹುಲಿಗಳನ್ನು ಆ ವೈಡೂರ್ಯದ ಮಣಿಯಲ್ಲಿ ಮಾಡಿ ಇಟ್ಟಿರುವರು. ಈ ರೀತಿಯಾಗಿ ಅಲ್ಲಿನ ಸ್ಥಳಗಳನ್ನು ಸುಖಪಡುವುದಕ್ಕೆ ಅನುಕೂಲವಾಗುವಂತೆ ಮಾಡಿಕೊಂಡಿರುವರು.

೫೭. ಎಲ್ಲಾ ಋತುಗಳಲ್ಲಿಯೂ ಅಲ್ಲಿ ಸುಖವಾಗಿರುವಂತೆ ಮಾಡಿದ್ದಾರೆ. ಗಂಡುಕೋಗಿಲೆಗಳು ಮನೋಹರವಾಗಿರುವಂತೆ ಕೂಗುತ್ತವೆ. ನಂದನ ವನದಲ್ಲಿ ಮರಗಳೂ, ಚೈತ್ರರಥವೆಂಬ ಕುಬೇರನ ವನದಲಿದ್ದ ಮರಗಳೂ, ಮಂದರವೇ ಮುಂತಾದ ಪರ್ವತಗಳಲ್ಲಿದ್ದ ಮರಗಳೂ, ಇವುಗಳಲ್ಲಿ ರಮ್ಯವೂ, ಉತ್ತಮವಾದುವೂ ಯಾವುವಿದ್ದವೋ ಅವೆಲ್ಲವೂ ಅಲ್ಲಿರುತ್ತವೆ.

೫೮-೫೯. ನೆಲಕ್ಕೆಲ್ಲಕ್ಕೂ ಬಗೆಬಗೆಯಾದ ಮಣಿಗಳನ್ನು ಹಾಕಿರುವರು. ಅಲ್ಲಲ್ಲಿಯೇ ಮುತ್ತಿನ ಗೊಂಚಲುಗಳನ್ನು ಕಟ್ಟಿರುವರು. ಚಿತ್ರಚಿತ್ರವಾಗಿರುವ ಮಣಿಗಳಿಂದ ಕಟ್ಟಿರುವ ಮೆಟ್ಟಿಲುಗಳುಳ್ಳ ಮಹಡಿಗಳೂ ಬೇಕಾದಂತೆ ಪ್ರಕಾಶಿಸುತ್ತವೆ. ಬಹು ರಮ್ಯವಾದ ಹೆಬ್ಬಾಗಿಲುಗಳಿಂದ ಕೂಡಿಕೊಂಡು ಆ ಪಟ್ಟಣವು ಪ್ರಕಾಶಿಸುತ್ತಿದೆ.

ನ ದೇವೈರನುಭೂಯೇತ ಸ್ವರ್ಗಿಭಿನಾನುಭೂಯತೇ ।
ತತ್ಪುರೀಸ್ಥಿತಿಮಾಕಾಂಕ್ಷ್ಯ ತಪಃ ಕುರ್ವಂತಿ ಸತ್ತಮಾಃ ॥ ೬೦ ॥

ತಸ್ಯಾಂ ಸಹಸ್ರವದನೋ ರಾವಣೋ ರಾಕ್ಷಸಾಧಿಪಃ ।
ಆಸ್ತೇ ಜಗದ್ವಶೀಕೃತ್ಯ ಹೇಲಯಾ ಬಾಹುಲೀಲಯಾ ॥ ೬೧ ॥

ಇಂದ್ರಾದೀನ್ ತ್ರಿದಶಾನ್ ಸರ್ವಾನ್ ಗಳೇಬದ್ಧ್ವಾ ಸ ಕಿನ್ನರಾನ್ ।
ಗಂಧರ್ವಾನ್ ದಾನವಾನ್ ಭೀಮಾನ್ ಸರ್ವಾನ್ ವಿದ್ಯಾಧರಾನ್ ತಥಾ ॥ ೬೨ ॥

ಬಾಲಕ್ರೀಡನಯಾ ಕ್ರೀಡನ್ ಮೇರುಂ ಮನ್ಯೇತ ಸರ್ಷಪಂ ।
ಗೋಷ್ಪದಂ ಮನ್ಯತೇ ಚಾಬ್ಧಿಂ ಸರ್ವಲೋಕಾನ್ ತೃಣೋಪಮಾನ್ ॥ ೬೩ ॥

ದ್ವೀಪಾನ್ ಲೋಷ್ಟಸಮಾನ್ ವೀರೋ ನ ಕಿಂಚಿದ್ಗಣಯನ್ ದೃಶಾ ।
ಸ ಯದಾ ಸರ್ವಲೋಕಾನಾಂ ತ್ರಾಸನಂ ಸಮುಪಾರಭತ್ ॥ ೬೪ ॥

---

೬೦. ದೇವತೆಗಳಿಂದಾಗಲಿ, ಸ್ವರ್ಗದಲ್ಲಿರುವ ಯಾರಿಂದಲೇ ಆಗಲಿ ಆ ಪಟ್ಟಣದಲ್ಲಿನ ಸುಖವನ್ನನುಭವಿಸಲಾಗುವುದಿಲ್ಲ. ಆ ಪಟ್ಟಣದ ವಾಸವನ್ನು ಅಪೇಕ್ಷಿಸಿ ಅನೇಕರು ತಪಸ್ಸನ್ನು ಮಾಡುತ್ತಿದ್ದಾರೆ.

೬೧. ಆ ಪಟ್ಟಣದಲ್ಲಿ ಸಾವಿರ ತಲೆಗಳುಳ್ಳ ರಾಕ್ಷಸಾಧಿಪನಾದ ರಾವಣನು ತನ್ನ ಬಾಹುಬಲದಿಂದಲೇ ಜಗತ್ತನ್ನು ಸ್ವಾಧೀನವನ್ನಾಗಿ ಮಾಡಿಕೊಂಡು ರಾಜ್ಯ ವಾಳುತ್ತಿರುವನು.

೬೨–೬೩. ಇಂದ್ರನೇ ಮುಂತಾದ ದೇವತೆಗಳೆಲ್ಲರನ್ನೂ, ಗಂಧರ್ವರನ್ನೂ, ಕಿನ್ನರರನ್ನೂ, ದಾನವರನ್ನೂ, ವಿದ್ಯಾಧರರನ್ನೂ, ಕುತ್ತಿಗೆ ಹಿಡಿದು ಕಟ್ಟಿ ತಂದು ಅವರೊಡನೆ ಹುಡುಗಾಟವನ್ನು ಆಡುತ್ತಿರುವನು. ಮೇರು ಪರ್ವತವನ್ನು ಸಾಸುವೆಯಂತೆ ನಿರ್ಲಕ್ಷಿಸುತ್ತಿದ್ದಾನೆ. ಸಮುದ್ರವು ಅವನಿಗೆ ಹಸುವಿನ ಹೆಜ್ಜೆಯ ಹಳ್ಳವಾಗಿದೆ. ಎಲ್ಲಾ ಲೋಕವನ್ನೂ ಹುಲ್ಲಿಗಿಂತಲೂ ಕೀಳಾಗಿ ಕಾಣುತ್ತಾನೆ. ದ್ವೀಪಗಳನ್ನು ಮಣ್ಣು ಹೆಂಟೆಯಂತೆ ಭಾವಿಸಿದ್ದಾನೆ, ಅವನು ಇವೆಲ್ಲವನ್ನೂ ಹೀಗೆ ತಿರಸ್ಕರಿಸುವುದಲ್ಲದೆ ತನ್ನ ಕಣ್ಣಿನ ನೋಟದಿಂದಲೇ ಎಲ್ಲವನ್ನೂ ಕೀಳಾಗಿ ಕಾಣುತ್ತಾನೆ.

೬೪-೬೫. ಅವನು ಲೋಕಗಳನ್ನು ತೊಂದರೆ ಪಡಿಸುವುದಕ್ಕೆ ಮೊದಲು ಮಾಡಲು ಆಗ ಬ್ರಹ್ಮನೂ, ಪುಲಸ್ತ್ಯನೂ, ವಿಶ್ರವಸುವೂ, ಬಂದು ಅಪ್ಪ, ಅಣ್ಣಾ

ತದಾ ಪಿತಾಮಹೋಭ್ಯೇತ್ಯ ಪುಲಸ್ತ್ಯೋ ವಿಶ್ರವಾಸ್ತಥಾ ।
ನ್ಯವಾರಯರ್ನ್ ಯತ್ನತಸ್ತಂ ತಾತ ವತ್ಸೇತಿಭಾಷಕಾಃ ॥ ೬೫ ॥

ಏವಂ ಸ ರಾವಣೋ ದೇವಿ ಸಹಸ್ರವದನೋ ಮಹಾನ್ ।
ಪುಷ್ಕರದ್ವೀಪಮಾಸಾದ್ಯ ವರ್ತತೇ ಜನಕಾತ್ಮಜೇ ।
ತಸ್ಯಾನುಜೋ ದಶಾಸ್ಯೋಯಂ ಲಂಕಾಯಾಂ ಜಾನಕಿ ಸ್ಥಿತಃ ॥ ೬೬ ॥

ಚಿತ್ರಾಣೀತ್ಯಾದೀನಿ ಮೇ ಶಂಸಯಿತ್ವಾ
ವಿಪ್ರೋ ಮಾಸಾಂಶ್ಚತುರೋ ಯಾಪಯಿತ್ವಾ ।
ರಾಜಾನಂ ಮಾಂಚಾಶಿಷಾ ಯೋಜಯಿತ್ವಾ
ಜಗಾಮ್ಯೈಕಃ ಪ್ರೋಷಿತಸ್ತೀರ್ಥಯಾತ್ರಾಂ ॥ ೬೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಸೀತಾಭಾಷಣಂ ನಾಮ
ಸಪ್ತದಶಃ ಸರ್ಗಃ

ವತ್ಸ ಎಂದು ಒಳ್ಳೆಯ ಮಾತಾಡುತ್ತ ಪ್ರಯತ್ನಪಟ್ಟು ಆ ತೊಂದರೆ ಪಡಿಸುವುದನ್ನು ನಿಲ್ಲಿಸಿದರು.

೬೬. ಎಲೈ ಜನಕಾತ್ಮಜಯೆ! ಈ ರೀತಿಯಾಗಿ ಆ ಸಹಸ್ರವದನ ರಾವಣನು ಗಟ್ಟಿಗನಾಗಿ ಪುಷ್ಕರ ದ್ವೀಪವನ್ನು ಆವರಿಸಿಕೊಂಡು ಇದ್ದಾನೆ. ಅವನ ತಮ್ಮನಾದ ಈ ದಶಾಸ್ಯ ರಾವಣನು ಲಂಕೆಯನ್ನು ಹೊಂದಿ ಇದ್ದಾನೆ.

೬೭. ಅವನು ನನಗೆ ಈ ರೀತಿಯಾದುವೇ ಮೊದಲಾದ ಅನೇಕ ಕಥೆಗಳನ್ನು ಹೇಳುತ್ತ ನಾಲ್ಕು ತಿಂಗಳು ಕಳೆದ ಅನಂತರ ನನಗೂ ನನ್ನ ತಂದೆಗೂ ಆಶೀರ್ವದಿಸಿ ತಾನು ಬಹು ದಿವಸದಿಂದ ಬಿಟ್ಟಿದ್ದ ತೀರ್ಥಯಾತ್ರೆಗೆ ಹೊರಟನು.

ಇಂತು ಶ್ರೀ ವಾಲ್ಮೀಕಿ ಋಷಿಯಿಂದ ಹೇಳಲ್ಪಟ್ಟ ಆದಿಕಾವ್ಯವಾದ
ಶ್ರೀಮದ್ರಾಮಾಯಣದ ಅದ್ಭುತೋತ್ತರ ಕಾಂಡದಲ್ಲಿ ಸೀತೆಯ
ಸಂಭಾಷಣೆ ಎಂಬ ಹದಿನೇಳನೆಯ ಸರ್ಗವು.

ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತ ರಾಮಾಯಣೇ

## ಅಥ ಅಷ್ಟಾದಶಃ ಸರ್ಗಃ



ಏವಂ ಸ ರಾವಣೋ ವಿಪ್ರಾಃ ಸಹಸ್ರವದನೋ ಮಹಾನ್ ।
ಪ್ರೋಕ್ತಸ್ತೇನ ದ್ವಿಜೇನಾಹಂ ಶ್ರುತ್ವಾಶ್ಚರ್ಯಂ ಚ ವಿಸ್ಮಿತಾ ॥ ೧ ॥

ಅದ್ಯಾಪಿ ತನ್ಮನು ಹೃದಿ ಜಾಗರೂಕಂ ಹಿ ವರ್ತತೇ ।
ಪತ್ಯಾ ಮೇ ಬಾಹುವೀರ್ಯೇಣ ದಶಾಸ್ಯೋ ರಾವಣೋ ಹತಃ ॥ ೨ ॥

ಸಾನುಗಃ ಸಸುತಾಮಾತ್ಯಃ ಸಭ್ರಾತೃಕಸ್ಸಬಾಂಧವಃ ।
ಮತ್ಕೃತೇ ಚ ಪುರೀ ದಗ್ಧಾ ಸೇತುರ್ಬದ್ಧಶ್ಚವಾರಿಧೌ ॥ ೩ ॥

---

### ಹದಿನೆಂಟನೆಯ ಸರ್ಗವು

೧. ಎಲೈ ಬ್ರಾಹ್ಮಣರಿರಾ ! ಈ ರೀತಿಯಾಗಿ ಸಾವಿರ ಮುಖವುಳ್ಳ ಆ ಶಕ್ತನಾದ ರಾವಣನ ವಿಷಯವನ್ನು ಹೇಳಿದೆನು. ಆ ಆಶ್ಚರ್ಯವನ್ನು ಕೇಳಿ ನಾನು ಬಹುವಾಗಿ ವಿಸ್ಮಿತಳಾದೆನು.

೨-೩. ಅದು ಈಗಲೂ ನನ್ನ ಮನಸ್ಸಿನಲ್ಲಿ ಬರುತ್ತಲೇ ಇದೆ. ನನ್ನ ಗಂಡನಾದ ರಾಮನು ತನ್ನ ಬಾಹು ವೀರ್ಯದಿಂದ ದಶವದನನಾದ ರಾವಣನನ್ನೂ ಅವನ ಆಳುಗಳನ್ನೂ, ಮಕ್ಕಳುಗಳನ್ನೂ, ಸಹೋದರರನ್ನೂ, ಬಾಂಧವರನ್ನೂ ಕೊಂದನು. ನನಗೋಸ್ಕರವಾಗಿ ಆ ಲಂಕೆಯನ್ನೇ ಸುಟ್ಟನು. ಸಮುದ್ರದಲ್ಲಿ ಸೇತುವೆಯನ್ನೂ ಕಟ್ಟಿದನು.

ಸುಗ್ರೀವೇಣ ಸಹಾಯೇನ ತಥಾ ಹನುಮದಾದಿನಾ ।
ಇದಂ ಲೋಕೋತ್ತರಂ ಕರ್ಮ ಕೃತಂ ಲೋಕಹಿತಂ ಮಹತ್ ॥ ೪ ॥

ತಥಾಪಿ ಹೃದಿ ಮೇ ನೈತದಾಶ್ಚರ್ಯಂ ಪ್ರತಿಭಾತಿ ಹಿ ।
ಯದಿ ತಸ್ಯ ವಧಂ ಕುರ್ಯಾದ್ರಾವಣಸ್ಯ ದುರಾತ್ಮನಃ ॥ ೫ ॥

ಯದಿ ಸಂಭಾವ್ಯತೇ ಕೀರ್ತಿಃ ಜಗತ್ ಸ್ವಾಸ್ಥ್ಯಮವಾಪ್ನುಯಾತ್ ।
ಅತೋ ಮೇ ಹಸಿತಂ ವಿಪ್ರಾಃ ಕ್ಷಮಧ್ವಂ ಜ್ವಲನೋಪಮಾಃ ॥ ೬ ॥

ಆಕರ್ಣ್ಯ ಮುನಯಸ್ಸರ್ವೇ ಸಾಧುಸಾಧ್ವಿತಿ ವಾದಿನಃ ।
ಜಾನಕೀಂ ಪ್ರಶಶಂಸುಸ್ತೇ ಸರ್ವಲೋಕಹಿತೈಷಿಣೀಂ ॥ ೭ ॥

ರಾಘವೋ ವಚನಂ ಶ್ರುತ್ವಾ ಸೀತಾಯಾ ವೀರ್ಯವರ್ಧನಂ ।
ಸಿಂಹನಾದಂ ವಿನದ್ಯೋಚ್ಚೈಃ ಸರ್ವಾನಾಜ್ಞಾಪಯತ್ಪ್ರಭುಃ ॥ ೮ ॥

---

೪. ಸುಗ್ರೀವನು ಮತ್ತು ಹನುಮಂತನೇ ಮುಂತಾದವರ ಸಹಾಯದಿಂದ ಲೋಕ ಹಿತಕರವಾದ ಈ ಲೋಕೋತ್ತರ ಕರ್ಮವನ್ನು ಮಾಡಿದನು.

೫-೬. ಆದರೂ ಕೂಡ ಈ ದಶವದನನ ನಾಶವು ನನಗೆ ಆಶ್ಚರ್ಯವಾಗಿ ಕಾಣುವುದಿಲ್ಲ. ಈ ಶ್ರೀರಾಮನು ಆ ಸಹಸ್ರವದನನ ವಧೆಯನ್ನು ಮಾಡಿದರೆ ಕೀರ್ತಿಯು ಬರುತ್ತದೆ. ಜಗತ್ತೇ ಕ್ಷೇಮವನ್ನು ಹೊಂದುತ್ತದೆ. ಎಲೈ ಅಗ್ನಿಗೆ ಸಮವಾದ ಬ್ರಾಹ್ಮಣರಿರಾ! ಆದ್ದರಿಂದಲೇ ನಾನು ನಕ್ಕೆನು. ಇದನ್ನು ನೀವು ಕ್ಷಮಿಸಿರಿ.

೭. ಮುನಿಗಳು ಎಲ್ಲರೂ ಅದನ್ನು ಕೇಳಿ ಸಾಧು ಸಾಧು ಎಂದು ಹೇಳಿದರು. ಮತ್ತು ಎಲ್ಲಾ ಲೋಕಕ್ಕೂ ಹಿತವನ್ನು ಆಶಿಸುವ ಜಾನಕಿಯನ್ನು ಹೊಗಳಿದರು.

೮. ಬಲವನ್ನು ಮೇಲಕ್ಕೆ ಹೊರ ಹೊಮ್ಮುವಂತೆ ಮಾಡುವ ಸೀತೆಯ ಈ ಮಾತನ್ನು ರಾಮನು ಕೇಳಿ ಗಟ್ಟಿಯಾಗಿ ಸಿಂಹಧ್ವನಿಯನ್ನು ಮಾಡಿ ಎಲ್ಲರನ್ನೂ ಕರೆದು ಇಂತೆಂದು ಆಜ್ಞಾಪಿಸಿದನು.

ಮುನಯೋದ್ಯೈವ ಗಂತವ್ಯಂ ರಾವಣಸ್ಯ ಜಯಾಯ ವೈ ।
ಲಕ್ಷ್ಮಣಂ ಭರತಂ ಚೈವ ಶತ್ರುಘ್ನಂ ಚಾದಿಶತ್ಪ್ರಭುಃ ॥ ೯ ॥

ಮಿತ್ರ ಸುಗ್ರೀವ ಹೇ ರಾಜನ್ ಸರ್ವೇ ಜಾಂಬವದಾದಯಃ ।
ಗಚ್ಛಾಮಃ ಸಹಿತಾಸ್ತತ್ರ ಸೈನಿಕೈಸ್ಸಹ ಮಂತ್ರಿಭಿಃ ॥ ೧೦ ॥

ಇತ್ಯಾಜ್ಞಾಪ್ಯ ಮಹಾಬಾಹುಃ ಸಸ್ಮಾರ ಪುಷ್ಪಕಂ ರಥಂ ।
ಸ್ಮರಣಾದಾಗತಸ್ತತ್ರ ಪುಷ್ಪಕೋ ರಥಸತ್ತಮಃ ॥ ೧೧ ॥

ತತ್ರಾರುರುಕ್ಷನ್ಮಹಾವೀರಾ ರಾಮಚಂದ್ರಪುರೋಗಮಾಃ ।
ಭರತೋ ಲಕ್ಷ್ಮಣಶ್ಚೈವ ಶತ್ರುಘ್ನಶ್ಚಾಮಿತದ್ಯುತಿಃ ॥ ೧೨ ॥

ಸುಗ್ರೀವಪ್ರಮುಖಾಸ್ಸರ್ವೇ ವಾನರಾ ಜಿತಕಾಶಿನಃ ।
ವಿಭೀಷಣೋ ಮಹಾಬಾಹುಃ ಸಹ ರಕ್ಷೋಗಣೈಃ ಪ್ರಭುಃ ॥ ೧೩ ॥

---

೯. ಎಲೈ ಮುನಿಗಳಿರ! ಈಗಲೇ ಆ ರಾವಣನನ್ನು ಜಯಿಸಲು ಹೋಗಬೇಕು. ಎಂದು ಹೇಳಿ ಲಕ್ಷ್ಮಣ ಭರತ ಶತ್ರುಘ್ನರಿಗೆ ಒಡನೆಯೇ ರಾಮನು ಅಪ್ಪಣೆ ಮಾಡಿದನು.

೧೦. ಮಿತ್ರನಾದ ಸುಗ್ರೀವನೆ! ಎಲೈ ಜಾಂಬವದಾದಿಗಳಿರಾ! ನಾವು ಸೈನಿಕರೊಡನೆಯೂ ಮಂತ್ರಿಗಳೊಡನೆಯೂ ಅಲ್ಲಿಗೆ ಹೋಗೋಣ.

೧೧. ಆ ಶ್ರೀರಾಮನು ಈ ರೀತಿಯಾಗಿ ಎಲ್ಲರಿಗೂ ಅಪ್ಪಣೆಯನ್ನು ಮಾಡಿ ಪುಷ್ಪಕರಥವನ್ನು ಸ್ಮರಿಸಿಕೊಂಡನು. ಸ್ಮರಿಸಿಕೊಂಡ ಒಡನೆಯೇ ಆ ಪುಷ್ಪಕ ರಥವು ಅಲ್ಲಿಗೆ ಬಂದಿತು.

೧೨-೧೩. ರಾಮಚಂದ್ರನೇ ಮುಂತಾದ ವೀರರು ಆ ಪುಷ್ಪಕವನ್ನು ಹತ್ತಿದರು. ಭರತ, ಲಕ್ಷ್ಮಣ, ಶತ್ರುಘ್ನರೂ ಸುಗ್ರೀವ ಮುಂತಾದ ಕಪಿಗಳೂ ಇತರರೂ ಆ ವಿಮಾನದಲ್ಲಿ ಕುಳಿತರು. ವಿಭೀಷಣನು ತನ್ನ ರಾಕ್ಷಸರೊಂದಿಗೆ ಆ ಪುಷ್ಪಕವನ್ನು ಹತ್ತಿದನು.

ಮಾತ್ರಾ ಪಿತ್ರಾಪ್ಯಕಥನಾದಜಾರ್ನ ಬೋಧಿತೋಽನಯಾ ।
ಸೀತಯಾ ರಾಮಕಾರ್ಯಾರ್ಥಂ ನಿರ್ಯಯೌ ರಾಘವಾಜ್ಞಯಾ ॥ ೧೪ ॥

ಸುಮಂತ್ರಾದ್ಯಾ ಮಂತ್ರಿಣಶ್ಚ ಋಷಯಸ್ತೇ ಚ ನಿರ್ಯಯುಃ ।
ನಾನಾಶಸ್ತ್ರ ಪ್ರಹರಣಾ ಧೃತಾಯುಧಕಲಾಪಿನಃ ॥ ೧೫ ॥

ಮುಮುಚುಸ್ತೇ ಸಿಂಹನಾದಂ ಮಹಾಘೋರಂ ಮಹಾಬಲಾಃ ।
ಧನುಶ್ಶಬ್ದೇನ ರಾಮಸ್ಯ ಸಿಂಹನಾದೇನ ಚೈವ ಹಿ ॥ ೧೬ ॥

ಚಚಾಲ ವಸುಧಾ ಶೈಲಾಶ್ಚೇಲುಃ ಪೇತುರ್ಗ್ರಹಾಶ್ಚ ಖಾತ್ ।
ನದ್ಯೋಽಶುಷ್ಯನ್ ಸಮುದ್ರೇಲಾಃ ಸಾಗರಾಶ್ಚ ಚಕಂಪಿರೇ ॥ ೧೭ ॥

ಸುಗ್ರೀವೋ ಹನುಮಾನ್ನೀಲೋ ಜಾಂಬವಾನ್ನಲ ಏವ ಚ ।
ಗ್ರಸಂತ ಇವ ತೇ ಸರ್ವೇ ನಿರ್ಯಯೂ ರಾಮಶಾಸನಾತ್ ॥ ೧೮ ॥

---

೧೪. ತಾಯಿಯಾಗಲೀ, ತಂದೆಯಾಗಲಿ ಈ ವಿಭೀಷಣನಿಗೆ ಸಹಸ್ರಕಂಠ ರಾವಣನ ವಿಷಯವನ್ನು ಹೇಳದುದರಿಂದ ಸೀತೆಯೂ ಹೇಳುತ್ತಿದ್ದರೂ ಈತನಿಗೆ ಗೊತ್ತಾಗಲಿಲ್ಲ. ಆದರೂ ರಾಮನ ಕಾರ್ಯವಾದುದರಿಂದ ಈ ವಿಭೀಷಣನು ಹೊರಟನು.

೧೫-೧೬. ಸುಮಂತ್ರನೇ ಮುಂತಾದ ಮಂತ್ರಿಗಳೂ, ವಸಿಷ್ಠನೇ ಮುಂತಾದ ಋಷಿಗಳೂ ಕೂಡ ಹೊರಟರು. ಎಲ್ಲರೂ ಬಗೆಬಗೆಯಾದ ಆಯುಧಗಳನ್ನು ತೆಗೆದು ಕೊಂಡಿದ್ದರು. ಕೈಗಳಲ್ಲಿಯೂ ಹಿಡಿದಿದ್ದರು. ಎಲ್ಲರೂ ಘೋರವಾದ ಸಿಂಹನಾದ ಗಳನ್ನು ಮಾಡುತ್ತಿದ್ದರು. ಬಲಿಷ್ಠರಾಗಿದ್ದರು.

೧೭-೧೮. ರಾಮನ ಧನುಸ್ಸಿನ ಠಂಕಾರದಿಂದಲೂ, ಅತನ ಸಿಂಹನಾದ ದಿಂದಲೂ ಭೂಮಿಯು ನಡಗಿತು. ಬೆಟ್ಟಗಳು ಅಲ್ಲಾಡಿದವು. ನಕ್ಷತ್ರಗಳು ಅಂತರಿಕ್ಷ ದಿಂದ ಬಿದ್ದುವು. ನದಿಗಳು ಬತ್ತಿದುವು. ಸಮುದ್ರಗಳು ತುಳುಕಾಡುತ್ತಾ ಅಲ್ಲಾಡಿದುವು.

೧೮. ಸುಗ್ರೀವ, ಹನುಮ, ನೀಲ, ಜಾಂಬುವಂತ, ನಲ ಇವರೆಲ್ಲರೂ ಎಲ್ಲ ವನ್ನೂ ನುಂಗುವಂತೆ ರಾಮನ ಅಪ್ಪಣೆಯ ಪ್ರಕಾರ ಹೊರಟರು.

ಸ ತಯಾ ಸೀತಯಾ ಸಾರ್ಧಂ ರಾಮಚಂದ್ರೋ ಮಹಾಬಲಃ ।
ಕಾಮಗಂ ಪುಷ್ಪಕಂ ದಿವ್ಯಮಾರುರೋಹ ಧನುರ್ಧರಃ ॥ ೧೯ ॥

ಪುಷ್ಪಕಂ ತೇ ಸಮಾರುಹ್ಯ ಸರ್ವ ಏವ ಮಹಾಬಲಾಃ ।
ಸೀತಯಾ ಭ್ರಾತೃಭಿಸ್ಸಾರ್ಧಂ ರಾಮಚಂದ್ರಂ ಮಹಾಬಲಾಃ ॥ ೨೦ ॥

ಪ್ರೋತ್ಸಾಹಯಂತೋ ವಚನೈರ್ನಿರ್ಭಯುರ್ಜಿತಕಾಶಿನಃ ।
ರಾಮಾಜ್ಞಯಾ ಪುಷ್ಪಕಂ ತದಾಕಾಶಪಥಮಾಶ್ರಿತಂ ॥ ೨೧ ॥

ಮನೋಮಾರುತವೇಗೇನ ಕ್ಷಣೇನ ಗರುಡೋ ಯಥಾ ।
ಜಗಾಮ ಪುಷ್ಕರದ್ವೀಪಂ ಯತ್ರಾಸ್ತೇ ಮಾನಸೋತ್ತರಃ ॥ ೨೨ ॥

ಮಾನಸೋತ್ತರಮಾಸಾದ್ಯ ವಿಸ್ಮಿತಾಸ್ತೇ ಮಹಾಬಲಾಃ ।
ಕಿಂ ಚಿತ್ರಂ ಕಿಂ ಚಿತ್ರಮಿತಿ ಪ್ರೋಚುರಾಶ್ಚರ್ಯಲಕ್ಷಣಾಃ ॥ ೨೩ ॥

---

೧೯. ಮಹಾ ಬಲಿಷ್ಠನಾದ ರಾಮಚಂದ್ರನು ಸೀತೆಯೊಡನೆ ಆ ಸ್ವೇಚ್ಛೆಯಾಗಿ ಹೋಗಬಲ್ಲ ಪುಷ್ಪಕ ವಿಮಾನದಲ್ಲಿ ಧನುರ್ಧರನಾಗಿ ಕುಳಿತನು.

೨೦–೨೧. ಆ ಮಹಾ ಬಲಿಷ್ಠರೆಲ್ಲರೂ ಪುಷ್ಪಕದಲ್ಲಿ ಕುಳಿತರು. ಜಯಶೀಲರಾದ ಅವರೆಲ್ಲರೂ ರಾಮನನ್ನೂ ಸೀತೆಯನ್ನೂ ಉತ್ತೇಜಕರವಾದ ಮಾತುಗಳಿಂದ ಪ್ರೋತ್ಸಾಹಿಸುತ್ತಿದ್ದರು. ರಾಮನು ಅಪ್ಪಣೆಮಾಡಲು ಆ ಪುಷ್ಪಕವಿಮಾನವು ಆಕಾಶಕ್ಕೆ ಹಾರಿತು.

೨೨. ಆ ಪುಷ್ಪಕವು ಮನಸ್ಸು, ವಾಯು, ಇವುಗಳ ವೇಗವುಳ್ಳದ್ದಾಗಿ ಗರುಡನಂತೆ ಹಾರಿ ಮಾನಸೋತ್ತರ ಪರ್ವತದಲ್ಲಿರುವ ಪುಷ್ಕರ ದ್ವೀಪವನ್ನು ಕ್ಷಣಕಾಲದಲ್ಲಿ ಸೇರಿತು.

೨೩. ಮಾನಸೋತ್ತರ ಪರ್ವತಕ್ಕೆ ಹೋದ ಮೇಲೆ ಆಮಹಾ ಬಲಿಷ್ಠರೆಲ್ಲರೂ ಆಶ್ಚರ್ಯಭರಿತರಾದರು. ಆಶ್ಚರ್ಯದಿಂದ ಕೂಡಿ ಕೊಂಡವರಾಗಿ ಇದು ಏನುಚಿತ್ರವು? ಇದು ಏನು ಚಿತ್ರವು? ಎಂದು ಎನ್ನುತ್ತಿದ್ದರು.

ರಾಘುವೋ ಭ್ರಾತೃಭಿಸ್ಸಾರ್ಧಂ ಸಹ ವಾನರಪುಂಗವೈಃ ।
ಸಿಂಹನಾದಂ ನನಾದೋಚ್ಚೈಃ ಧನುಶ್ಚಾಪಿ ವ್ಯಕರ್ಷಯತ್ ॥ ೨೪ ॥

ಸ ಶಬ್ದಸ್ತುಮುಲೋ ಭೂತ್ವಾ ಪೃಥಿವೀಂ ಚಾಂತರಿಕ್ಷಕಂ ।
ಪಾತಾಳವಿವರಾಂಶ್ಚೈವ ಪೂರಯಾಮಾಸ ಸರ್ವತಃ ॥ ೨೫ ॥

ರಾವಣಸ್ಸಹಸೋತ್ತಸ್ಥೌ ಕಿಮೇತದಿತಿ ಸಂವದನ್ ।
ತತ್ರಾಥ ರಾಕ್ಷಸಾಃ ಕ್ರುದ್ಧಾಃ ಸರ್ವ ಏವ ವಿನಿರ್ಯಯುಃ ॥ ೨೬ ॥

ಅಹೋ ಕುತಃ ಸ್ವಿಚ್ಛಬ್ದೋಽಯಂ ಸಾಧು ಸರ್ವೈರ್ನಿರೂಪ್ಯತಾಂ ।
ಇತ್ಯಾಭಾಷ್ಯ ರಾಕ್ಷಸೇಂದ್ರೋ ರಾಕ್ಷಸೇಂದ್ರೈರ್ಮಹಾಬಲೈಃ ॥ ೨೭ ॥

ನಗರಾನ್ನಿರ್ಯಯೌ ಶೀಘ್ರಂ ಸಂದಷ್ಟೋಷ್ಠಪುಟೋ ಬಲೀ ।
ದ್ವಾದಶಾದಿತ್ಯಸಂಕಾಶಃ ಸಹಸ್ರವದನೋ ಮಹಾನ್ ॥ ೨೮ ॥

---

೨೪. ಆ ರಾಮನು ತಮ್ಮಂದಿರೊಡನೆಯೂ, ವಾನರರೊಡನೆಯೂ ಕೂಡಿಕೊಂಡು ಸಿಂಹನಾದವನ್ನು ಮಾಡಿದನು. ಮತ್ತೆ ಧನುಸ್ಸಿನ ಠಂಕಾರವನ್ನು ಮಾಡಿದನು.

೨೫. ಆ ಧೀರರ ಧ್ವನಿಗಳೆಲ್ಲವೂ ಸೇರಿ ತುಮುಲ ಶಬ್ದವಾಗಿ ಭೂಮ್ಯಾಕಾಶಗಳನ್ನೂ ಪಾತಾಳದ ಸಂದಿಗಳನ್ನೂ ಸ್ವಲ್ಪವೂ ಬಿಡದೆ ತುಂಬಿತು.

೨೬. ಆಗ ಆ ಸಹಸ್ರವದನ ರಾವಣನು ಇದೇನು ? ಎಂದೆನ್ನುತ್ತ ಬೇಗ ಎದ್ದನು. ಅಲ್ಲಿದ್ದ ರಾಕ್ಷಸರೂ ಕೋಪಗೊಂಡು ಎಲ್ಲರೂ ಅವನೊಡನೆ ಹೊರಟರು.

೨೭–೨೮. ಓಹೋ! ಈ ಶಬ್ದವು ಎಲ್ಲಿಂದ ಬರುತ್ತಿದೆ? ಎಲ್ಲರೂ ಸರಿಯಾಗಿ ನೋಡಿರಿ. ಎಂಬುದಾಗಿ ಹೇಳುತ್ತಾ ಆ ರಾಕ್ಷಸೇಂದ್ರನು ಬಲಿಷ್ಠರಾದ ರಾಕ್ಷಸರೊಡನೆ ಪಟ್ಟಣದಿಂದ ಹೊರಗೆ ಹೊರಟನು. ಕೋಪದಿಂದ ತುಟಿಯನ್ನು ಕಚ್ಚುತ್ತಿದ್ದನು. ಹನ್ನೆರಡು ಜನ ಸೂರ್ಯರಂತೆಯೂ ಪ್ರಕಾಶಿಸುತ್ತಿದ್ದನು.

ದ್ವಿಸಹಸ್ರಭುಜೋದ್ರಿಕ್ತೋ ದ್ವಿಸಹಸ್ರವಿಲೋಚನಃ ।
ಮಹಾಮೇಘ ಸಮಧ್ವಾನೋ ಬಡಬಾಗ್ನಿ ಸಮಃ ಕ್ರುಧಾ ॥ ೨೯ ॥

ಶತಯೋಜನವಿಸ್ತೀರ್ಣೇ ರಥೇ ಸೂರ್ಯಸಮತ್ವಿಷಿ ।
ನಾನಾಯುಧಾನಿ ಸಂಗೃಹ್ಯ ಪರಿಘಪ್ರಾಸತೋಮರಾನ್ ॥ ೩೦ ॥

ಭುಶುಂಡೀಃ ಪರಶೂನ್ ಘಂಟಾಲೌಹಂ ಮುದ್ಗರಚಕ್ರಕಂ ।
ಪಾಶಾಂಶ್ಚ ವಿವಿಧಾನ್ ಗೃಹ್ಯ ಬಾಣಾನ್ ಕರ್ಮಾರಮಾರ್ಜಿತಾನ್ ॥ ೩೧ ॥

ವಿಪಾಠಾನ್ ಕ್ಷುರಧಾರಾಂಶ್ಚ ಅರ್ಧಚಂದ್ರಾಕೃತೀನಪಿ ।
ನಾನಾಯುಧಸಹಸ್ರಾಣಿ ನಾನಾವಿಧಧನೂಂಷಿ ಚ ॥ ೩೨ ॥

ಪ್ರಗೃಹ್ಯ ಸಹಸಾ ಪ್ರಾಯಾತ್ ಯತ್ರ ರಾಮೋ ಧನುರ್ಧರಃ ।
ಲೋಚನೈಃ ಕ್ರೋಧಸಂದಿಪ್ತೈ ರುಲ್ಕಾಭಿರಿವ ದೀಪಿತಃ ॥ ೩೩ ॥

ಕೋಯಮಿತ್ಯಬ್ರವೀತ್ ಕ್ರೋಧಾದನಲಂ ಪ್ರೋದ್ವಮನ್ನಿವ ।
ಸಿಂಹನಾದಂ ಮಮ ಪುರೇರಿಪುತ್ವಾದ್ವಿಸಸರ್ಜ ಹ ॥ ೩೪ ॥

---

೨೯. ಸಾವಿರ ತಲೆಗಳಿದ್ದುವು. ಎರಡು ಸಾವಿರ ತೋಳುಗಳಿದ್ದುವು, ಇದರಿಂದ ಬಹುವಾಗಿ ಕೊಬ್ಬಿದ್ದನು. ಎರಡು ಸಾವಿರ ಕಣ್ಣುಗಳೂ ಇದ್ದುವು. ಮಹಾಮೇಘದಂತೆ ಗರ್ಜಿಸುತ್ತಿದ್ದನು. ಕೋಪವನ್ನಾಡಿಕೊಂಡು ಬಡಬಾಗ್ನಿಯಂತೆ ಜ್ವಲಿಸುತ್ತಿದ್ದನು.

೩೦-೩೩. ನೂರು ಯೋಜನಗಳ ಅಗಲವಿರುವ ರಥದಲ್ಲಿ ಕುಳಿತನು. ಆ ರಥವು ಸೂರ್ಯನಂತೆ ಬೆಳಗುತ್ತಿದ್ದಿತು. ಅನೇಕ ಆಯುಧಗಳನ್ನು ತೆಗೆದುಕೊಂಡಿದ್ದನು. ದೊಣ್ಣೆ, ಈಟಿ, ಮರದಸಿಳ್ಳೆ, ಭುಶಂಡಿ, ಕೊಡಲಿ. ಘಂಟೆ, ಕಬ್ಬಿಣದ ಗಡಾರಿ, ಚಕ್ರ, ಹಗ್ಗ, ಆಗತಾನೆ ತೊಳಿಸಿರುವ ಬಾಣಗಳು, ಗಂಡುಗೊಡಲಿ, ಅರ್ಧಚಂದ್ರಾಕಾರವಾದ ಬಾಣಗಳು, ನಾನಾ ಬಗೆಯಾದ ಸಾವಿರಾರು ಆಯುಧಗಳು, ಸಾವಿರಾರು ಧನುಸ್ಸುಗಳು ಇವೆಲ್ಲವನ್ನೂ ತೆಗೆದುಕೊಂಡು ರಥದಲ್ಲಿ ಧನುರ್ಧರನಾಗಿ ಕುಳಿತು ಹೊರಟನು. ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡಿದ್ದನು. ಇದನ್ನು ನೋಡಿದರೆ ಕೆಂಪಗೆ ಕೊಳ್ಳಿಗಳಂತೆ ಕಾಣುತ್ತಿದ್ದಿತು.

೩೪. ಕೋಪದಿಂದ ಬೆಂಕಿಯನ್ನು ಸುರಿಸುತ್ತ ಇವನಾರು? ಇವನು ಶತ್ರುವಾಗಿರುವುದರಿಂದಲೇ ನನ್ನ ಪಟ್ಟಣದಲ್ಲಿ ಸಿಂಹನಾದವನ್ನು ಮಾಡಿದುದು. ಎಂದನು.

ಮಮಾಪಿ ರಿಪುತಸ್ತೀತಿ ದುರ್ಯಶಃ ಸಮುಪಸ್ಥಿತಂ ।
ಇಂದ್ರಾದ್ಯಾಃ ಕಕುಭಾಂ ನಾಥಾಃ ಭೃತ್ಯಾಃ ಪ್ರಾಣಪರೀಪ್ಸಯಾ ॥ ೩೫ ॥

ಪಾತಾಳವಿವರೇ ಸ್ವರ್ಗಂ ಸ್ವರ್ಗೇ ಪಾತಾಳಮೇಕಕಂ ।
ಕರೋಮಿ ಸಹಸೈವಾಹಂ ಮಾನವಾನಾಂ ತಥೈಕತಾಂ ॥ ೩೬ ॥

ಮೇರುಪ್ರಭೃತಿ ಶೈಲಾಂಶ್ಚ ಚೂರ್ಣಯಾಮ್ಯಣುಸಂಖ್ಯಯಾ ।
ದೇವಲೋಕಂ ನೃಣಾಂ ಕುರ್ಯಾಂ ನೃಲೋಕಂ ತ್ರಿದಿವೌಕಸಾಂ ॥ ೩೭ ॥

ಉದ್ಧೃತ್ಯ ಪೃಥಿವೀಂ ಛಿಂದ್ಯಾಮನಂತಂ ನಖರಾಗ್ರಕೈಃ ।
ಬ್ರಹ್ಮಾ ಮಾಂ ವಾರಯಾಮಾಸ ಸಾಂತ್ವಯನ್ ಪ್ರಿಯಭಾಷಿತೈಃ ॥ ೩೮ ॥

ಅನ್ಯಥಾ ರಾಕ್ಷಸಮೃತೇ ನಾರಕ್ಷಂ ಜಗತೀತಲೆ ।
ಸೂರ್ಯಾಚಂದ್ರಮಸೌ ಭೂತ್ವಾ ತಿಥಿಪ್ರಣಯನಂ ತ್ವಹಂ ॥ ೩೯ ॥

---

೩೫. ಅಯ್ಯೋ ನನಗೂ ಶತ್ರುವಿರುವನಲ್ಲ ! ಎಂಬ ಅಪಯಶಸ್ಸು ಬಂದಿತಲ್ಲ। ಇಂದ್ರಾದಿದಿಕ್ಪಾಲಕರು ಪ್ರಾಣದ ಮೇಲಿನ ಆಸೆಯಿಂದ ನನಗೆ ಆಳುಗಳಾಗಿದ್ದಾರೆ.

೩೬. ಮೇಲೆ ಇರುವ ಸ್ವರ್ಗವನ್ನು ಪಾತಾಳದಲ್ಲಿ ಸ್ಥಾಪಿಸುತ್ತೇನೆ. ಪಾತಾಳ ಲೋಕವು ಸ್ವರ್ಗದಲ್ಲಿರುವಂತೆ ಮಾಡುತ್ತೇನೆ. ಮನುಷ್ಯರೂ, ದೇವತೆಗಳೂ, ಪಾತಾಳದವರೂ ಎಲ್ಲಾ ಕಡೆಯಲ್ಲಿಯೂ ಇರುವಂತೆ ಮಾಡುತ್ತೇನೆ. ನನ್ನ ಶೌರ್ಯವು ಮಿತಿಮೀರಿದುದು.

೩೭. ಮೇರುವೇ ಮುಂತಾದ ಪರ್ವತಗಳನ್ನೂ ಚೂರುಚೂರಾಗಿ ನುಣ್ಣಗೆ ಮಾಡುತ್ತೇನೆ. ದೇವಲೋಕದಲ್ಲಿ ಮನುಷ್ಯರು ಇರುವಂತೆಯೂ ಮನುಷ್ಯಲೋಕ ದಲ್ಲಿ ದೇವತೆಗಳಿರುವಂತೆಯೂ ಮಾಡುತ್ತೇನೆ.

೩೮–೩೯. ಭೂಮಿಯನ್ನು ಮೇಲಕ್ಕೆತ್ತಿ ಕೆಳಗಿರುವ ಅನಂತನನ್ನು ಉಗುರಿನಿಂದ ಸೀಳುತ್ತೇನೆ. ಬ್ರಹ್ಮನು ಒಳ್ಳೆಯ ಮಾತನಾಡುತ್ತ ನನ್ನನ್ನು ತಡೆದನು. ಇಲ್ಲದಿದ್ದರೆ ಈ ಜಗತ್ತಿನಲ್ಲಿ ರಾಕ್ಷಸರನ್ನು ಬಿಟ್ಟು ಮಿಕ್ಕವರನ್ನೆಲ್ಲಾ ನಾಶಪಡಿಸುತ್ತಿದ್ದೆನು. ನಾನೇನೇ ಸೂರ್ಯ ಚಂದ್ರರಾಗಿ ತಿಥಿಗಳನ್ನು ಕಲ್ಪಿಸುತ್ತೇನೆ.

ಬಲಾಹಕತ್ವಮಿಂದ್ರತ್ವಂ ಪೃಥ್ವೀಸೇಕಾದಿಕಾಃ ಕ್ರಿಯಾಃ ।
ಕುರ್ಯಾಂ ಯಮತ್ವಂ ವಹ್ನಿತ್ವಂ ವರುಣತ್ವಂ ಧನೇಶತಾಂ ॥ ೪೦ ॥

ಇತ್ಯೇವಂ ಬಹುಧಾ ಗರ್ಜನ್ನಾಜಗಾಮಾಂತಿಕಂ ಹರೇಃ ।
ಸೇನಾಧ್ಯಕ್ಷಾ ರಾಕ್ಷಸೇಂದ್ರಾ ರಾಜ್ಞಾ ಸಾರ್ಧಂ ಸಮಾಗತಾಃ ॥ ೪೧ ॥

ನಾನಾಪ್ರಹರಣೋಪೇತಾ ನಾನಾರಥಪದಾತಿನಃ ।
ಏಕೈಕಸ್ಯಾಪಿ ಪರ್ಯಾಪ್ತಾ ಜಗತೀ ನೇತಿ ಮನ್ಮಹೇ ॥ ೪೨ ॥

ಕೇಷಾಂಚಿದಪಿ ನಾಮಾನಿ ಭರದ್ವಾಜ ನಿಬೋಧ ಮೇ ।
ಕೋಟಿಶೋ ಮನಸಃ ಪೂರ್ಣಃ ಶಲಃ ಪಾಲೋ ಹಲೀಮುಖಃ ॥ ೪೩ ॥

ಪಿಚ್ಛಲಃ ಕೌಣಪಶ್ಚಕ್ರಃ ಕಾಲವೇಗಃ ಪ್ರಕಾಲಕಃ ।
ಹಿರಣ್ಯಬಾಹುಃ ಶರಣಃ ಕಕ್ಷಕಃ ಕಾಲದಂತಕಃ ॥ ೪೪ ॥

ಪುಚ್ಛಾಂಡಕೋ ಮಂಡಲಕಃ ಪಿಂಡಸೇಕ್ತಾ ರಭೇಣಕಃ ।
ಉಚ್ಛಿಖಃ ಕರಭೋ ಭದ್ರೋ ವಿಶ್ವಜೇತಾ ವಿರೋಹಣಃ ॥ ೪೫ ॥

೪೦-೪೧. ನಾನೇ ಮೋಡವಾಗುತ್ತೇನೆ. ಇಂದ್ರನಾಗುತ್ತೇನೆ. ಭೂಮಿಗೆ ಮಳೆ ಸುರಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತೇನೆ. ಯಮನಾಗುತ್ತೇನೆ. ವಹ್ನಿಯಾಗುತ್ತೇನೆ. ವರುಣನಾಗುತ್ತೇನೆ. ಕುಬೇರನೂ ಆಗುತ್ತೇನೆ. ಇದೇ ಮುಂತಾಗಿ ಹೇಳಿಕೊಂಡು ಗರ್ಜಿಸುತ್ತಾ ರಾಮನಿರುವಲ್ಲಿಗೆ ಬಂದನು. ಅವನ ಸೇನಾಪತಿಗಳಾದ ರಾಕ್ಷಸೇಂದ್ರರು ಅವನೊಡನೆಯೇ ಬಂದರು.

೪೨. ಬಗೆಬಗೆಯಾದ ಆಯುಧಗಳನ್ನು ತೆಗೆದುಕೊಂಡಿದ್ದರು. ಅನೇಕ ಬಗೆಯಾದ ರಥಗಳನ್ನೂ ಪತಾಕೆಗಳನ್ನೂ ಹೊಂದಿದ್ದರು. ಈ ಪ್ರಪಂಚವು ಒಬ್ಬೊಬ್ಬನಿಗೆ ಸಾಕಾಗುವಂತಿಲ್ಲವೆಂದು ನನಗೆ ಕಾಣುತ್ತದೆ.

೪೩-೫೧. ಎಲೈ ಭರದ್ವಾಜನೇ ! ಅವರಲ್ಲಿ ಕೆಲವರ ಹೆಸರನ್ನು ಹೇಳುತ್ತೇನೆ ಕೇಳು. ಕೋಟಿಶ, ಮನಸ, ಪೂರ್ಣ, ಶಲ, ಪಾಲ ಹಲೀಮುಖ, ಪಿಚ್ಛಲ, ಕೌಣಪ ಚಕ್ರ, ಕಾಲವೇಗ, ಪ್ರಕಾಲಕ, ಹಿರಣ್ಯಬಾಹು, ಶರಣ, ಕಕ್ಷಕ, ಕಾಲದಂತಕ, ಪುಚ್ಛಾಂಡಕ, ಮಂಡಲಕ, ಪಿಂಡಸೇಕ್ತಾ, ರಭೇಣಕ, ಉಚ್ಛಿಖ, ಕರಭ, ಭದ್ರ.

ಶಿಲೀ ಶಲಕರೋ ಮೂಕಃ ಸುಕುಮಾರಃ ಪ್ರರೇಷಣಃ ।
ಮುದ್ಗರಃ ಶಶರೋ ಮಾ ಚ ಸುರೋಮಾ ಚ ಮಹಾಹನುಃ ॥ ೪೬ ॥

ಪಾರಾವತಃ ಪಾರಿಯಾತ್ರಃ ಪಾಂಡುರೋ ಹರಿಣಃ ಕೃಶಃ ।
ವಿಹಂಗಃ ಶರಭೋ ದಕ್ಷಃ ಪ್ರಮೋದಃ ಸಹಿತಾಪನಃ ॥ ೪೭ ॥

ಕೃಕರಃ ಕುಂಡರೋ ವೇಣೀ ವೇಣೀಸ್ಕಂಧಃ ಕುಮಾರಕಃ ।
ಬಾಹುಕಃ ಶಂಖವೇಗಶ್ಚ ಧೂರ್ತಕಃ ಪಾತಪಾತಕಃ ॥ ೪೮

ಶಂಕುಕರ್ಣಃ ಪಿಠರಕಃ ಕುಟೀರಮುಖಸೇಚಕೌ ।
ಪೂರ್ಣಾಂಗದಃ ಪೂರ್ಣಮುಖಃ ಪ್ರಭಾಷಃ ಶಕುಲೀ ಹರಿಃ ॥ ೪೯ ॥

ಅಮಾಹಿಠಃ ಕಾಮಠಕಃ ಸುಷೇಣೋ ಮಾನಸೋಽವ್ಯಯಃ ।
ಭೈರವೋ ಮುಂಡದೇವಾಂಗಃ ಪಿಶಂಗಶ್ಚೋಡಪಾಲಕಃ ॥ ೫೦ ॥

ಋಷಭೋ ವೇಗವಾನ್ಮಾಮ-ಪಿಂಡಾರಕ ಮಹಾಹನೂ ।
ರಕ್ತಾಂಗಃ ಸರ್ವಸಾರಂಗಃ ಸಮೃದ್ಧಃ ಪಾಟವಾಸಕೌ ॥ ೫೧ ॥

ವರಾಹಕೋ ರಾವಣಕಃ ಸುಚಿತ್ರಶ್ಚಿತ್ರವೇಗಿಕಃ ।
ಪರಾಶರಸ್ತರುಣಿಕೋ ಮಣಿಸ್ಕಂಧಸ್ತಥಾರುಣಿಃ ॥ ೫೨ ॥

ವಿಶ್ವಜೇತಾ, ವಿರೋಹಣ, ಶಿಲೀ, ಶಲಕರ, ಮೂಕ ಸಕುಮಾರ, ಪ್ರರೇಷಣ, ಮುದ್ಗರ, ಶಶರೋಮಾ, ಸುರೋಮಾ, ಮಹಾಹನು, ಪಾರಾವತ, ಪಾರಿಯಾತ್ರ, ಪಾಂಡುರ, ಹರಿಣ, ಕೃಶ, ವಿಹಂಗ, ಶರಭ, ದಕ್ಷ, ಪ್ರಮೋದ, ಸಹತಾಪನ, ಕೃಕರ, ಕುಂಡರ, ವೇಣೀ, ವೇಣೀಸ್ಕಂಧ, ಕುಮಾರಕ, ಬಾಹುಕ, ಶಂಖವೇಗ, ಧೂರ್ತಕ, ಪಾತ, ಪಾತಕ, ಶಂಕುಕರ್ಣ, ಪಿಠರಕ, ಕುಟೀರ, ಮುಖಸೇಚಕ, ಪೂರ್ಣಾಂಗದ, ಪೂರ್ಣಮುಖ, ಪ್ರಭಾಷ, ಶಕುಲಿ, ಹರಿ, ಅಮಾಹಿಠ, ಕಾಮಠ, ಸುಷೇಣ, ಮಾನಸ, ಅವ್ಯಯ, ಭೈರವ, ಮುಂಡದೇವಾಂಗ, ಪಿಶಂಗ, ಉಡಪಾಲಕ.

೫೨-೫೩. ಋಷಭ, ವೇಗವಾನ್, ಪಿಂಡಾರಕ, ಮಹಾಹನು, ರಕ್ತಾಂಗ, ಸರ್ವಸಾರಂಗ, ಸಮೃದ್ಧ, ಪಾಟವಾಸಕ, ಪರಾಹರ, ರಾವಣಕ, ಸುಚಿತ್ರ, ಚಿತ್ರ ವೇಗಿಕ, ಪರಾಶರ, ತರುಣಿಕ, ಮಣಿಸ್ಕಂದ, ಆರುಣಿ, ಇವರೆಲ್ಲರೂ ಸೇನಾಧ್ಯಕ್ಷರು.

ಸೇನಾಧ್ಯಕ್ಷಾ ಮಹಾಬ್ರಹ್ಮನ್ ಕೀರ್ತಿತಾಃ ಕೀರ್ತಿವರ್ಧನಾಃ ।
ಪ್ರಾಧಾನ್ಯೇನ ಬಹುತ್ವಾತ್ತು ನ ಸರ್ವೇ ಪರಿಕೀರ್ತಿತಾಃ ॥ ೫೩ ॥

ನ ಶಕ್ಯಾಃ ಪರಿಸಂಖ್ಯಾತುಂ ಯೇ ಯುದ್ಧಾಯ ಸಮಾಗತಾಃ ।
ನೀಲರಕ್ತಾಸಿತಾ ಘೋರಾ ಮಹಾಕಾಯಾ ಮಹಾಬಲಾಃ ॥ ೫೪ ॥

ಸಪ್ತಶೀರ್ಷಾ ದ್ವಿಶೀರ್ಷಾಶ್ಚ ಪಂಚಶೀರ್ಷಾಸ್ತಥಾಪರೇ ।
ಕಾಲಾನಲಮಹಾಘೋರಾ ಹುತಾಶ ಸಮವಿಗ್ರಹಾಃ ॥ ೫೫ ॥

ಮಹಾಕಾಯಾ ಮಹಾವೇಗಾಃ ಶೈಲಶೃಂಗಸಮುಚ್ಛ್ರಯಾಃ ।
ಯೋಜನಾಯಾಮವಿಸ್ತೀರ್ಣಾ ದ್ವಿಯೋಜನಸಮುಚ್ಛ್ರಯಾಃ ॥ ೫೬ ॥

ಕಾಮರೂಪಾಃ ಕಾಮಬಲಾಃ ದೀಪ್ತಾ ನಲಸಮತ್ವಿಷಃ ।
ಅನ್ಯೇ ಚ ಬಹವಶ್ಶೂರಾಃ ಶೂಲಪಟ್ಟಿಶಧಾರಿಣಃ ॥ ೫೭ ॥

---

ಕೀರ್ತಿಯನ್ನು ತರತಕ್ಕವರು. ಇವರನ್ನು ಮಾತ್ರ ಹೇಳಿದ್ದೇನೆ. ಇವರು ಪ್ರಧಾನರು. ಇನ್ನೂ ಬಲಶಾಲಿಗಳು ಬಹುಮಂದಿ ಇದ್ದಾರೆ. ಅವರೆಲ್ಲರನ್ನೂ ಹೇಳುವುದಕ್ಕಾಗುವುದಿಲ್ಲ.

೫೪-೫೫. ಯುದ್ಧಕ್ಕೆ ಬಂದವರನ್ನು ಲೆಕ್ಕಮಾಡಲು ಆಗುವುದಿಲ್ಲ. ಕೆಲವರು ಕಪ್ಪಗಿದ್ದರು, ಕೆಲವರು ಕಪ್ಪು ಕೆಂಪು ಮಿಶ್ರವಾಗಿದ್ದರು. ಘೋರರಾಗಿದ್ದರು. ದೊಡ್ಡ ದೇಹವುಳ್ಳವರು. ಮಹಾ ಬಲಿಷ್ಠರು. ಕೆಲವರಿಗೆ ಏಳು ತಲೆಗಳಿದ್ದವು. ಕೆಲವರಿಗೆ ಎರಡು ತಲೆಗಳಿದ್ದವು. ಕೆಲವರಿಗೆ ಐದು ತಲೆಗಳಿದ್ದವು. ಅವರು ಕಾಲಾಗ್ನಿಯಂತೆ ಘೋರವಾಗಿದ್ದರು. ಬೆಂಕಿಯಂತೆ ದೇಹವನ್ನು ಹೊಂದಿದ್ದರು.

೫೬. ಅವರು ದೊಡ್ಡ ದೇಹವುಳ್ಳವರು. ಬಹು ವೇಗವುಳ್ಳವರು. ಬೆಟ್ಟದ ಶಿಖರದಂತೆ ಎತ್ತರವಾಗಿದ್ದರು. ಅವರ ಅಗಲವು ಒಂದು ಯೋಜನವಿದ್ದಿತು. ಎರಡು ಯೋಜನದಷ್ಟು ಉದ್ದವಾಗಿದ್ದರು.

೫೭-೫೮. ಅವರೆಲ್ಲರೂ ಇಷ್ಟವಾದ ಆಕಾರವನ್ನು ಹೊಂದಬಲ್ಲವರು. ಇಷ್ಟಬಂದಷ್ಟು ಶಕ್ತಿಯನ್ನು ಸಂಪಾದಿಸಬಲ್ಲರು. ಉರಿಯುತ್ತಿರುವ ಬೆಂಕಿಯಂತೆ

ದಿವ್ಯಪ್ರಹರಣೋಪೇತಾ ನಾನಾವೇಷವಿಭೂಷಿತಾಃ ।
ಶೃಣು ನಾಮಾನಿ ಚಾನ್ಯೇಷಾಂ ಯೇಽನ್ಯೇ ರಾವಣಸೈನಿಕಾಃ ॥ ೫೮ ॥

ಶಂಕುಕರ್ಣೋ ನಿಕುಂಭಶ್ಚ ಪದ್ಮಃ ಕುಮುದ ಏವ ಚ ।
ಅನಂತೋ ದ್ವಾದಶಭುಜಃ ತಥಾ ಕೃಷ್ಣೋಪಕೃಷ್ಣಕೌ ॥ ೫೯ ॥

ಘ್ರಾಣಶ್ರವಾಃ ಕಪಿಸ್ಕಂಧಃ ಕಾಂಚನಾಕ್ಷೋ ಜಲಂಧಮಃ ।
ಅಕ್ಷಸಂತರ್ದನೋ ಬ್ರಹ್ಮ ಕುನದೀಕಃ ತಮೋಭ್ರುಕೃತ್ ॥ ೬೦ ॥

ಏಕಾಕ್ಷೋ ದ್ವಾದಶಾಕ್ಷಶ್ಚ ತಥೈವೈಕಜರಾಭಿಧಃ ।
ಸಹಸ್ರಬಾಹುರ್ವಿಕಟೋ ವ್ಯಾಘ್ರಾಖ್ಯಃ ಕ್ಷಿತಿಕಂಪನಃ ॥ ೬೧ ॥

ಪುಣ್ಯನಾಮಾನುನಾಮಾ ಚ ಸುವಕ್ತ್ರಃ ಪ್ರಿಯದರ್ಶನಃ ।
ಪರಿಶ್ರಿತಃ ಕೋಕನದಃ ಪ್ರಿಯಮಾಲ್ಯಾನುಲೇಪನಃ ॥ ೬೨ ॥

---

ಕಾಂತಿಯುಳ್ಳವರು. ಬಹು ಶೂರರಾದವರು ಮತ್ತೆ ಅನೇಕ ಜನರಿರುವರು. ಅವರೂ ಶೂಲಪಟ್ಟಸಗಳನ್ನು ಹಿಡಿದಿರುವರು. ಇನ್ನೂ ಅನೇಕ ಬಗೆಯಾದ ಆಯುಧಗಳನ್ನು ತೆಗೆದುಕೊಂಡಿರುವರು. ಬಗೆಬಗೆಯಾದ ವೇಷಭೂಷಣಗಳುಳ್ಳವರು. ಆ ರಾವಣನ ಸೈನಿಕರ ಮತ್ತೆ ಕೆಲವರ ಹೆಸರನ್ನು ಹೇಳುತ್ತೇನೆ ಕೇಳು.

೫೯-೬೦. ಶಂಕುಕರ್ಣ, ನಿಕುಂಭ, ಪದ್ಮ, ಕುಮುದ, ಅನಂತ, ದ್ವಾದಶಭುಜ, ಕೃಷ್ಣ, ಉಪಕೃಷ್ಣ, ಘ್ರಾಣಶ್ರವ, ಕಪಿಸ್ಕಂಧ, ಕಾಂಚನಾಕ್ಷ, ಜಲಂಧಮ, ಅಕ್ಷಸಂತರ್ದನ, ಕುನದೀಕ, ತಮೋಭ್ರುಕೃತ್ ಎಂದು ಕೆಲವರ ಹೆಸರುಗಳು.

೬೧-೬೨. ಏಕಾಕ್ಷ, ದ್ವಾದಶಾಕ್ಷ, ಏಕಜರ, ಸಹಸ್ರಬಾಹು, ವಿಕಟವ್ಯಾಘ್ರ, ಕ್ಷಿತಿಕಂಪನ, ಪುಣ್ಯನಾಮ, ಅನುನಾಮ, ಸುವಕ್ತ್ರ, ಪ್ರಿಯದರ್ಶನ, ಪರಿಶ್ರಿತ, ಕೋಕನದ, ಪ್ರಿಯಮಾಲ್ಯ, ಅನುಲೇಪನ ಇವೂ ಅವರ ಹೆಸರುಗಳು.

**ಅಜೋದರೋ ಗಜಶಿರಾಃ ಸ್ಕಂಧಾಕ್ಷಃ ಶತಲೋಚನಃ ।**
**ಜ್ವಾಲಾಜಿಹ್ವಃ ಕರಾಳಶ್ಚ ಸಿತಕೇಶೋ ಜಟೀ ಹರಿಃ** || ೬೩ ||

**ಚತುರ್ದಂಷ್ಟ್ರೋऽಷ್ಟಜಿಹ್ವಶ್ಚ ಮೇಘನಾದಃ ಪೃಥುಶ್ರವಾಃ ।**
**ವಿಕೃತಾಕ್ಷೋ ಧನುರ್ವಕ್ತ್ರೋ ಜಾಠರೋ ಮಾರುತಾಶನಃ** || ೬೪ ||

**ಉದರಾಕ್ಷೋ ರಥಾಕ್ಷಶ್ಚ ವಜ್ರನಾಭೋ ವಸುಪ್ರಭಃ ।**
**ಸಮುದ್ರವೇಗೋ ವಿಪ್ರೇಂದ್ರ ಶೈಲಕಂಪೀ ತಥೈವ ಚ** || ೬೫ ||

**ವೃಷಮೇಷ ಪ್ರವಾಹಶ್ಚ ತಥಾ ನಂದೋಪನಂದಕೌ ।**
**ಧೂಮ್ರಶ್ವೇತಃ ಕಳಿಂಗಶ್ಚ ಸಿದ್ಧಾರ್ಥೋ ವರದಸ್ತಥಾ** || ೬೬ ||

**ಪ್ರಿಯಕಶ್ಚೈಕನಂದಶ್ಚ ಬಹುವೀರ್ಯಃ ಪ್ರತಾಪವಾನ್ ।**
**ಆನಂದಶ್ಚ ಪ್ರಮೋದಶ್ಚ ಸ್ವಸ್ತಿಕೋ ಧ್ರುವಕಸ್ತಥಾ** || ೬೭ ||

**ಕ್ಷೇಮಬಾಹುಃ ಸುಬಾಹುಶ್ಚ ಸಿದ್ಧಪಾತ್ರಶ್ಚ ಸುವ್ರತಃ ।**
**ಗೋವ್ರಜಃ ಕನಕಾಪೀಡೋ ಮಹಾಪಾರಿಷದೇಶ್ವರಃ** || ೬೮ ||

---

೬೩-೬೫. ಅಜೋದರ, ಗಜಶಿರ, ಸ್ಕಂಧಾಕ್ಷ, ಶತಲೋಚನ, ಜ್ವಾಲಾಜಿಹ್ವ, ಕರಾಳ, ಸಿತಕೇಶ, ಜಟೀ, ಹರಿ, ಚತುರ್ದಂಷ್ಟ್ರ, ಅಷ್ಟಜಿಹ್ವ, ಮೇಘನಾದ, ಪೃಥುಶ್ರವ, ವಿಕೃತಾಕ್ಷ, ಧನುರ್ವಕ್ತ್ರ, ಜಾಠರ, ಮಾರುತಾಶನ, ಉದರಾಕ್ಷ, ರಥಾಕ್ಷ, ವಜ್ರನಾಭ, ವಸುಪ್ರಭ, ಸಮುದ್ರವೇಗ, ಶೈಲಕಂಪಿ ಎಂಬದಾಗಿ ಕೆಲವರ ಹೆಸರುಗಳು.

೬೬-೬೭. ವೃಷಮೇಷ, ಪ್ರವಾಹ, ನಂದ, ಉಪನಂದ, ಧೂಮ್ರಶ್ವೇತ, ಕಳಿಂಗ, ಸಿದ್ಧಾರ್ಥ ವರದ, ಪ್ರಿಯಕ, ಏಕನಂದ, ಬಹುವೀರ್ಯ, ಪ್ರತಾಪ, ಆನಂದ, ಪ್ರಮೋದ, ಸ್ವಸ್ತಿಕ, ಧ್ರುವಕ, ಎಂಬುದು ಕೆಲವರ ಹೆಸರು.

೬೮-೬೯. ಕ್ಷೇಮಬಾಹು, ಸುಬಾಹು, ಸಿದ್ಧಪಾತ್ರ, ಸುವ್ರತ, ಗೋವ್ರಜ, ಕನಕಾಪೀಡ, ಮಹಾಪಾರಿಷದೇಶ್ವರ, ಗಾಯನ, ದಮನ, ಬಾಣ, ಖಡ್ಗ, ವೀರ್ಯವಂತ ವೈತಾಳಿ, ಗತಿತಾಳಿ, ಕಥಕ, ವಾತಿಕ ಇವುಗಳು ಕೆಲವರ ಹೆಸರುಗಳು.

ಗಾಯುದೋ ದಮುನಶ್ಚೈವ ಬಾಣಃ ಖಡ್ಗಶ್ಚ ವೀರ್ಯವಾನ್ ।
ವೈತಾಳೀ ಗತಿತಾಳೀ ಚ ಕಥಾ ಕಥಕವಾತಿಕೌ ॥ ೬೯ ॥

ಹಂಸಜಃ ಪಂಕದಿಗ್ಧಾಂಗಃ ಸಮುದ್ರೋನ್ಮದನಶ್ಚ ಹ ।
ರಣೋತ್ಕಟಃ ಪ್ರಹಾಸಶ್ಚ ಶ್ವೇತಸಿದ್ಧಶ್ಚ ನಂದಕಃ ॥ ೭೦ ॥

ಏತೇ ಪುರಾ ರಾವಣಸೈನ್ಯ ಪಾಲಾ
ನಾನಾಯುಧಪ್ರಾಹರಣಾ ರಣೇಷು ।
ಹಂಸೇಷು ಮೇಷೇಷು ವೃಷೇಷು ವೀರಾ
ರಾಮಂ ಪ್ರತಸ್ಥುಃ ಕೃತಸಿಂಹನಾದಾಃ ॥ ೭೧ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ರಾವಣಸೈನ್ಯನಿರ್ಯಾಣಂ
ನಾಮ ಅಷ್ಟಾದಶಃ ಸರ್ಗಃ

೭೦. ಹಂಸಜ, ಪಂಕದಿಗ್ಧಾಂಗ, ಸಮುದ್ರೋನ್ಮಾದನ, ರಣೋತ್ಕಟ, ಪ್ರಹಾಸ, ಶ್ವೇತಸಿದ್ಧ, ನಂದಕ ಇವು ಕೆಲವರ ಹೆಸರುಗಳು.

೭೧. ಇವರೇನೇ ಪೂರ್ವದಲ್ಲಿ ಆ ಸಹಸ್ರಕಂಠರಾವಣನ ಸೈನ್ಯಾಧಿಪತಿಗಳು. ಯುದ್ಧದಲ್ಲಿ ಅನೇಕಬಗೆಯಾದ ಆಯುಧಗಳಲ್ಲಿ ಯುದ್ಧ ಮಾಡಬಲ್ಲವರು. ಹಂಸಗಳ ಮೇಲೂ, ಆಡುಗಳ ಮೇಲೂ ಎತ್ತುಗಳ ಮೇಲೂ ಕುಳಿತುಕೊಂಡು ಸಿಂಹನಾದ ಮಾಡುತ್ತಾ ರಾಮನ ಮೇಲೆ ಯುದ್ಧಕ್ಕೆ ಹೋದರು.

ಇಂತು ವಾಲ್ಮೀಕಿಋಷಿ ಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ರಾವಣನ ಸೈನ್ಯವು ಹೊರಟಿತೆಂಬ
ಹದಿನೆಂಟನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅ ದ್ಭು ತ ರಾ ಮಾ ಯ ಣೇ

## ಅಥೈಕೋನವಿಂಶಃ ಸರ್ಗಃ



**ರಾವಣಸ್ಯೌರಸಾಃ ಪುತ್ರಾಃ ಸಹ ರಾಕ್ಷಸಪುಂಗವೈಃ ।**
**ನಾನಾ ಪ್ರಹರಣೋಪೇತಾ ದುದ್ರುವೂ ರಾಘವಂ ರಣೇ ॥ ೧ ॥**

**ನಾಮಾನ್ಯೇಷಾಂ ಪ್ರವಕ್ಷ್ಯಾಮಿ ಭಾರದ್ವಾಜ ಶೃಣುಷ್ವ ಮೇ ।**
**ಕಾಲಕಂಠಃ ಪ್ರಭಾಷಶ್ಚ ತಥಾ ಕುಂಭಾಂಡಕೋಽಪರಃ ॥ ೨ ॥**

**ಕಾಲಕಕ್ಷಃ ಶಿತಶ್ಚೈವ ಭೂತಲೋನ್ಮಥನಸ್ತಥಾ ।**
**ಯಜ್ಞಬಾಹುಃ ಪ್ರಬಾಹುಶ್ಚ ದೇವಯಾಜೀ ಚ ಸೋಮಪಃ ॥ ೩ ॥**

---

### ಹತ್ತೊಂಭತ್ತನೆಯ ಸರ್ಗವು.

೧. ಆ ಸಹಸ್ರಕಂಠ ರಾವಣನ ಮಕ್ಕಳೂ ಕೂಡ ಆ ರಾಕ್ಷಸರೊಡನೆ ಅನೇಕ ಬಗೆಯಾದ ಆಯುಧಗಳನ್ನು ಹಿಡಿದು ಯುದ್ಧಕ್ಕೋಸ್ಕರ ರಾಮನ ಮೇಲೆ ಹೋದರು.

೨. ಎಲೈ ಭರದ್ವಾಜನೇ! ಇವರ ಹೆಸರನ್ನು ಹೇಳುತ್ತೇನೆ. ಅದನ್ನು ಕೇಳು. ಕಾಲಕಂಠ, ಪ್ರಭಾಷ, ಕುಂಭಾಂಡಕ ಎಂದು ಕೆಲವರ ಹೆಸರುಗಳು.

೩–೫. ಕಾಲಕಕ್ಷ, ಶಿತ, ಭೂತಲೋನ್ಮಥನ, ಯಜ್ಞಬಾಹು, ಪ್ರಬಾಹು, ದೇವಯಾಜಿ, ಸೋಮಪ, ಮಜ್ಜಾಲ, ಮಹಾತೇಜ, ಕ್ರಥ, ಕ್ರಾಥ, ವಸುವ್ರತ,

ಮಜ್ಜಾಲಶ್ಚ ಮಹಾತೇಜಾಃ ಕ್ರಥಃ ಕ್ರಾಥೋ ವಸುವ್ರತಃ ।
ತುಹರಶ್ಚ ತುಹಾರಶ್ಚ ಚಿತ್ರದೇವಶ್ಚ ವೀರ್ಯವಾನ್ ॥ ೪ ॥

ಮಧುರಃ ಸುಪ್ರಸಾದಶ್ಚ ಕಿರೀಟಿಶ್ಚ ಮಹಾಬಲಃ ।
ವಸನೋ ಮಧುವರ್ಣಶ್ಚ ಕಲಶೋದರ ಏವ ಚ ॥ ೫ ॥

ಧರ್ಮದೋ ಮನ್ಮಥಕರಃ ಸೂಚೀವಕ್ತ್ರಶ್ಚ ವೀರ್ಯವಾನ್ ।
ಶ್ವೇತವಕ್ತ್ರಃ ಸುವಕ್ತ್ರಶ್ಚ ಚಾರುವಕ್ತ್ರಶ್ಚ ಪಾಂಡುರಃ ॥ ೬ ॥

ದಂಡಬಾಹುಃ ಸುಬಾಹುಶ್ಚ ರಜಃ ಕೋಕಿಲಕಸ್ತಥಾ ।
ಅಚಲಃ ಕಾಲಕಾಕ್ಷಶ್ಚ ಬಾಲೇಶೋ ಬಾಲಭಕ್ಷಕಃ ॥ ೭ ॥

ಸಂಚಾನಕಃ ಕೋಕನದೋ ಗೃಧ್ರಪತ್ರಶ್ಚ ಜಂಬುಕಃ ।
ಲೋಹಾಜವಕ್ತ್ರೋ ಜವನಃ ಕುಂಭವಕ್ತ್ರಶ್ಚ ಕುಂಭಕಃ ॥ ೮ ॥

ಮುಂಡಗ್ರೀವಶ್ಚ ಕೃಷ್ಣೌಜಾ ಹಂಸವಕ್ತ್ರಶ್ಚ ಕುಂಜರಃ ।
ಏತೇ ರಾವಣಪುತ್ರಾಶ್ಚ ಮಹಾವೀರ್ಯಪರಾಕ್ರಮಾಃ ॥ ೯ ॥

---

ತುಹರ, ತೂಹಾರ, ಚಿತ್ರದೇವ, ಮಧುರ, ಸುಪ್ರಸಾದ, ಕಿರೀಟಿ, ವಸನ, ಮಧುವರ್ಣ, ಕಲಶೋದರ ಎಂದು ಕೆಲವರ ಹೆಸರುಗಳು.

೬–೮. ಧರ್ಮದ, ಮನ್ಮಥಕರ, ಸೂಚೀವಕ್ತ್ರ, ಶ್ವೇತವಕ್ತ್ರ, ಸುವಕ್ತ್ರ, ಚಾರುವಕ್ತ್ರ, ಪಾಂಡುರ, ದಂಡಬಾಹು, ಸುಬಾಹು, ರಜ, ಕೋಕಿಲಕ, ಅಚಲ, ಕಾಲಕಾಕ್ಷ, ಬಾಲೇಶ, ಬಾಲಭಕ್ಷಕ, ಸಂಚಾನಕ, ಕೋಕನದ, ಗೃಧ್ರಪತ್ರ, ಜಬುಂಕ, ಲೋಹವಕ್ತ್ರ, ಅಜವಕ್ತ್ರ, ಜವನ, ಕುಂಭವಕ್ತ್ರ, ಕುಂಭಕ ಇವು ಕೆಲವರ ಹೆಸರಗಳು.

೯. ಮುಂಡಗ್ರೀವ. ಕೃಷ್ಣೌಜ, ಹಂಸವಕ್ತ್ರ. ಕುಂಜರರೆಂದು ಕೆಲವರ ಹೆಸರು ಇವರೆಲ್ಲರೂ ಕೂಡ ಆ ಸಹಸ್ರಕಂಠ ರಾವಣನ ಮಕ್ಕಳು. ಬಹುವಾದ ವೀರ್ಯ ಪರಾಕ್ರಮವುಳ್ಳವರು.

**ಬಾಹುಶಬ್ದೈಸ್ಸಿಂಹನಾದೈಃ ಪೂರಯಂತೋ ದಿಶೋ ದಶ ।**
**ಏಷಾಂ ಸೈನ್ಯಸಹಸ್ರಾಣಾಂ ಸಹಸ್ರಾಣ್ಯರ್ಬುದಾನಿ ಚ ॥ ೧೦ ॥**

**ನಾನಾಕೃತಿವಯೋರೂಪಾ ವಿವಿಧಾಯುಧಪಾಣಯಃ ।**
**ಕೂರ್ಮ ಕುಕ್ಕುಟವಕ್ತ್ರಾಶ್ಚ ಸರ್ಪಜೃಂಭಕವಕ್ತ್ರಕಾಃ ॥ ೧೧ ॥**

**ಗೋಮಾಯುಮುಖವಕ್ತ್ರಾಶ್ಚ ಶಶೋಲೂಕಮುಖಾಸ್ತಥಾ ।**
**ಖರೋಷ್ಟ್ರವದನಾಶ್ಚೈವ ವರಾಹವದನಾಸ್ತಥಾ ॥ ೧೨ ॥**

**ಮನುಷ್ಯಮೇಷವಕ್ತ್ರಾಶ್ಚ ಶೃಗಾಲವದನಾಸ್ತಥಾ ।**
**ಮಾರ್ಜಾರಶಶವಕ್ತ್ರಾಶ್ಚ ದೀರ್ಘವಕ್ತ್ರಾಶ್ಚ ಕೇಚನ ॥ ೧೩ ॥**

**ನಕುಲೋಲೂಕವಕ್ತ್ರಾಶ್ಚ ಕಾಕವಕ್ತ್ರಾಸ್ತಥಾಪರೇ ।**
**ಆಖುಬಭ್ರುಕವಕ್ತ್ರಾಶ್ಚ ಮಯೂರವದನಾಸ್ತಥಾ ॥ ೧೪ ॥**

---

೧೦–೧೧. ಈ ಮಕ್ಕಳುಗಳು ತೋಳುಗಳನ್ನು ಅಪ್ಪಳಿಸುತ್ತಾ ಸಿಂಹನಾದಗಳನ್ನು ಮಾಡುತ್ತಿದ್ದರು. ಈ ಧ್ವನಿಯಿಂದ ಹತ್ತು ದಿಕ್ಕುಗಳನ್ನೂ ತುಂಬುತ್ತಿದ್ದರು. ಇವರ ಸೈನ್ಯಗಳು ಸಾವಿರ ಭಾಗವಾಗಿದ್ದವು. ಒಂದೊಂದು ಭಾಗದಲ್ಲಿಯೂ ಸಾವಿರ ಅರ್ಬುದಗಳಷ್ಟು ಲೆಕ್ಕದ ಸೈನಿಕರಿದ್ದರು. ಬಗೆಬಗೆಯಾದ ಆಕಾರವುಳ್ಳವರು. ಅವರ ವಯಸ್ಸೂ ಮತ್ತು ರೂಪಗಳೂ ಕೂಡ ನಾನಾ ಬಗೆಯಾಗಿದ್ದುವು. ಬಗೆಬಗೆಯಾದ ಆಯುಧಗಳನ್ನು ಹಿಡಿದಿದ್ದರು. ಕೆಲವರು ಆಮೆಯ ಮುಖದಂತೆ ಮುಖವನ್ನು ಹೊಂದಿದ್ದರು. ಕೆಲವರಿಗೆ ಕೋಳಿಯ ಮುಖದಂತೆ ಮುಖವಿದ್ದಿತು. ಕೆಲವರಿಗೆ ಹಾವಿನಂತೆ ಮುಖವಿದ್ದಿತು ಕೆಲವರಿಗೆ ತೋಳದಮುಖದಂತೆ ಮುಖವಿದ್ದಿತು ಕೆಲವರಿಗೆ ನರಿಯ ಮುಖದಂತೆ ಮುಖವಿದ್ದಿತು.

೧೨-೧೬. ಕೆಲವರ ಮುಖವು ಕಂಕನರಿಯ ಮುಖದಂತೆ ಇದ್ದಿತು. ಕೆಲವರ ಮುಖಗಳು ಗೂಬೆಗಳ ಮುಖದಂತೆಯೂ ಇದ್ದುವು. ಕೆಲವರು ಕತ್ತೆಯ ಮುಖದಂತೆಯೂ ಕೆಲವರು ಒಂಟೆಯ ಮುಖದಂತೆಯೂ ಕೆಲವರು ಹಂದಿಯ ಮುಖದಂತೆಯೂ ಕೆಲವರು ಮನುಷ್ಯರ ಮುಖದಂತೆಯೂ ಕೆಲವರು ಕುರಿಯ ಮುಖದಂತೆಯೂ ಕೆಲವರು ಮುದಿನರಿಯ ಮುಖದಂತೆಯೂ ಕೆಲವರು ಬೆಕ್ಕಿನ ಮುಖದಂತೆಯೂ ಮತ್ತೆ ಕೆಲವರು ಮೊಲದ ಮುಖದಂತೆಯೂ ಮುಖಗಳನ್ನು

**ಮತ್ಸ್ಯಮೇಷಾನನಾಶ್ಚೈವ ಅಜಾವಿಮಹಿಷಾನನಾಃ ।**
**ಋಕ್ಷಶಾರ್ದೂಲವಕ್ತ್ರಾಶ್ಚ ದ್ವೀಪಸಿಂಹಾನನಾಸ್ತಥಾ ॥ ೧೫ ॥**

**ಭೀಮಾ ಗಜಾನನಾಶ್ಚೈವ ತಥಾ ನಕ್ರಮುಖಾಸ್ತಥಾ ।**
**ಗೋಖರೋಷ್ಟ್ರಮುಖಾಶ್ಚಾನ್ಯೇ ವೃಷದಂಶಮುಖಾಸ್ತಥಾ ॥ ೧೬ ॥**

**ಮಹಾಜಠರಪಾದಾಂಗಾಃ ಸ್ತಬಕಾಕ್ಷಾಶ್ಚ ದುರ್ಮುಖಾಃ ।**
**ಪಾರಾವತಮುಖಾಶ್ಚಾನ್ಯೇ ತಥಾವೃಷಮುಖಾಃ ಪರೇ ॥ ೧೭ ॥**

ಹೊಂದಿದ್ದರು. ಕೆಲವರು ಉದ್ದವಾಗಿ ಹಾಪಿನ ಮುಖದಂತೆ ಮುಖವನ್ನು ಹೊಂದಿದ್ದರು. ಕೆಲವರ ಮುಖವು ಮುಂಗಸಿಯ ಮುಖದಂತಿದ್ದಿತು. ಕೆಲವರ ಮುಖವು ಗೂಬೆಯ ಮುಖದಂತಿದ್ದಿತು. ಕೆಲವರು ಕಾಗೆಯ ಮುಖದಂತೆ ಮುಖವನ್ನು ಹೊಂದಿದ್ದರು. ಕೆಲವರು ಇಲಿಯ ಮುಖದಂತೆ ಮುಖವನ್ನು ಹೊಂದಿದ್ದರು. ಕೆಲವರು ಕೋತಿಯ ಮುಖದಂತೆ ಮುಖವನ್ನು ಹೊಂದಿದ್ದರು. ಕೆಲವರು ನವಿಲಿನ ಮುಖದಂತೆ ಮುಖವನ್ನು ಹೊಂದಿದ್ದರು. ಮೀನಿನ ಮುಖದಂತೆಯೂ ಆಡಿನ ಮುಖದಂತೆಯೂ ಕುರಿಯ ಮುಖದಂತೆಯೂ ಎಮ್ಮೆಯ ಮುಖದಂತೆಯೂ ಕರಡಿಯ ಮುಖದಂತೆಯೂ ಹುಲಿಯ ಮುಖದಂತೆಯೂ ಸಿಂಹದ ಮುಖದಂತೆಯೂ ಚಿರತೆಯ ಮುಖದಂತೆಯೂ ಮುಖಗಳನ್ನು ಕೆಲಕೆಲವರು ಹೊಂದಿದ್ದರು. ಭಯಂಕರವಾಗಿ ಆನೆಯ ಮುಖದಂತೆಯೂ ಮೊಸಳೆಯ ಮುಖದಂತೆಯೂ ಹಸು ಕತ್ತೆ ಒಂಟೆ ಎತ್ತು ಕಾಡುನೊಣ ಇವುಗಳ ಮುಖದಂತೆಯೂ ಕೆಲವರು ಮುಖಗಳನ್ನು ಹೊಂದಿದ್ದರು.

೧೭-೧೮. ಕೆಲವರಿಗೆ ಹೊಟ್ಟೆಯು ದೊಡ್ಡದಾಗಿದ್ದಿತು. ಕೆಲವರಿಗೆ ಹೆಜ್ಜೆಗಳು ದೊಡ್ಡವಾಗಿದ್ದುವು. ಕೆಲವರ ಕಣ್ಣುಗಳು ಗೊಂಚಲು ಗೊಂಚಲುಗಳಂತೆ ಇದ್ದುವು. ಕೆಲವರ ಮುಖವು ಭಯಂಕರವಾಗಿದ್ದಿತು. ಕೆಲವರ ಮುಖವು ಬೂದು ಬಣ್ಣಕ್ಕಿದ್ದಿತು. ಕೆಲವರ ಮುಖವು ಎತ್ತಿನ ಮುಖದಂತೆ ಇದತು. ಕೆಲವರ ಕಣ್ಣುಗಳು

ಕೋಕಿಲಾಭಾನನಾಶ್ಚಾನ್ಯೇ ಶ್ಯೇನತಿತ್ತಿರಿಕಾನನಾಃ ।
ಕೃಕಲಾಸಮುಖಾಶ್ಚೈವ ವಿರಜೋಂಬರಧಾರಿಣಃ ॥ ೧೮ ॥

ವ್ಯಾಳವಕ್ತ್ರಾಃ ಶುಕಮುಖಾಃ ಚಂಡವಕ್ತ್ರಾಃ ಶುಭಾನನಾಃ ।
ಆಶೀವಿಷಾಶ್ಚೀರಧರಾ ಗೋನಾಸಾವರಣಾಸ್ತಥಾ ॥ ೧೯ ॥

ಸ್ಥೂಲೋದರಾಃ ಕೃಶಾಂಗಾಶ್ಚ ಸ್ಥೂಲಾಂಗಾಶ್ಚ ಕೃಶೋದರಾಃ ।
ಹ್ರಸ್ವಗ್ರೀವಾ ಮಹಾಕರ್ಣಾ ನಾನಾವ್ಯಾಳವಿಭೂಷಣಾಃ ॥ ೨೦ ॥

ಗಜೇಂದ್ರಚರ್ಮವಸನಾಸ್ತಥಾ ಕೃಷ್ಣಾಜಿನಾಂಬರಾಃ ।
ಸ್ಕಂಧೇ ಮುಖಾ ದ್ವಿಜಶ್ರೇಷ್ಠ ತಥಾಹ್ಯುದರತೋಮುಖಾಃ ॥ ೨೧ ॥

---

ಕೋಗಿಲೆಯ ಕಣ್ಣಿನಂತಿದ್ದಿತು. ಕೆಲವರು-ಗಿಡಗ ಚಾದಗೆ ಪಕ್ಷಿಗಳ ಮುಖವನ್ನು ಹೊಂದಿದ್ದರು. ಕೆಲವರು ಹಲ್ಲಿಯ ಮುಖದಂತೆ ಮುಖವನ್ನು ಹೊಂದಿದ್ದರು. ಶುಭ್ರವಾದ ಬಟ್ಟೆಗಳನ್ನು ಎಲ್ಲರೂ ಧರಿಸಿದ್ದರು. ಕೆಲವರು ಹಾವಿನ ಕಣ್ಣಿನಂತೆ ಕಣ್ಣುಗಳನ್ನು ಹೊಂದಿದ್ದರು. ಕೆಲವರು ಗಿಳಿಯಮುಖದಂತೆ ಮುಖವುಳ್ಳವರಾಗಿದ್ದರು. ಕೆಲವರ ಮುಖವು ಚಂಡವಾಗಿದ್ದಿತು. ಕೆಲವರು ಸೌಮ್ಯವಾದ ಮುಖವನ್ನು ಹೊಂದಿದ್ದರು.

೧೯–೨೧. ಕೆಲವರಿಗೆಲ್ಲರಿಗೂ ಬಾಯಿಯಲ್ಲೇ ವಿಷವಿರುವುದು. ಕೆಲವರು ನಾರುಬಟ್ಟೆಗಳನ್ನುಟ್ಟಿರುವರು. ಕೆಲವರು ಗೋನಾಸವೆಂಬ ಪ್ರಾಣಿಯ ಚರ್ಮವನ್ನು ಧರಿಸಿರುವರು. ಕೆಲವರಿಗೆ ಹೊಟ್ಟೆಯು ದಪ್ಪವಾಗಿರುವುದು. ಕೆಲವರು ತೆಳ್ಳಗಿರುವರು. ಕೆಲವರು ದಪ್ಪವಾಗಿರುವರು. ಕೆಲವರಿಗೆ ಹೊಟ್ಟೆಯು ಸಣ್ಣಗಿರುವುದು. ಕೆಲವರಿಗೆ ಕತ್ತು ಗಿಡ್ಡಾಗಿರುವುದು. ಕೆಲವರು ದೊಡ್ಡ ಕಿವಿಯುಳ್ಳವರು. ಕೆಲವರು ಹಾವನ್ನು ಮೈಗೆಲ್ಲಾ ಕಟ್ಟಿಕೊಂಡಿರುವರು. ಕೆಲವರು ಆನೆಯ ಚರ್ಮವನ್ನು ಹೊದ್ದಿರುವರು. ಕೆಲವರು ಕೃಷ್ಣಾಜಿನವನ್ನು ಹೊದ್ದಿರುವರು. ಕೆಲವರಿಗೆ ಕತ್ತಿನಮೇಲೆ ಮುಖವಿರುವುದು. ಕೆಲವರಿಗೆ ಹೊಟ್ಟೆಯಮೇಲೆ ಮುಖವಿರುವುದು.

ಪೃಷ್ಠೇಮುಖಾ ಹನುಮುಖಾಸ್ತಥಾ ಜಂಘಾಮುಖಾಸ್ತಥಾ ।
ಪಾರ್ಶ್ವಾನನಾಶ್ಚ ಬಹವೋ ನಾನಾದೇಶಮುಖಾಸ್ತಥಾ || ೨೨ ||

ತಥಾ ಕೀಟಪತಂಗಾನಾಂ ಸದೃಶಾಸ್ಯಾ ಮಹಾಬಲಾಃ ।
ನಾನಾವ್ಯಾಲಮುಖಾಶ್ಚಾನ್ಯೇ ಬಹುಬಾಹುಶಿರೋಧರಾಃ || ೨೩ ||

ನಾನಾವಕ್ಷೋ ಭುಜಾಃ ಕೇಚಿತ್ ಭುಜಂಗವದನಾಃ ಪರೇ ।
ಖಡ್ಗಮುಖಾ ವೃಕಮುಖಾ ಅಪರೇ ಗರುಡಾನನಾಃ || ೨೪ ||

ಚೀರಸಂವೃತಗಾತ್ರಾಶ್ಚ ನಾನಾಫಲಕವಾಸಸಃ ।
ನಾನಾವೇಷಧರಾಶ್ಚಾನ್ಯೇ ನಾನಾಮಾಲ್ಯಾನುಲೇಪನಾಃ || ೨೫ ||

೨೨-೨೩. ಕೆಲವರಿಗೆ ಕುಂಡೆಯ ಮೇಲೆ ಮುಖವಿದ್ದಿತು. ಕೆಲವರಿಗೆ ತೊಡೆಯಲ್ಲಿಯೇ ಮುಖವಿದ್ದಿತು. ಕೆಲವರಿಗೆ ಪಕ್ಕೆಗಳಲ್ಲಿ ಮುಖವಿದ್ದಿತು. ಕೆಲವರಿಗೆ ಸಿಕ್ಕಿದ ಕಡೆಗಳಲ್ಲಿ ಮುಖಗಳಿದ್ದಿತು. ಕೆಲವರಿಗೆ ಕೀಟ ಪತಂಗಗಳ ಮುಖದಂತೆ ಮುಖವಿದ್ದವು. ಮಹಾ ಬಲಿಷ್ಠರು. ಕೆಲವರಿಗೆ ನಾನಾ ಬಗೆಯಾದ ಹಾವುಗಳ ಮುಖದಂತೆ ಮುಖವಿದ್ದವು. ಕೆಲವರಿಗೆ ಬಹಳವಾದ ಕೈಗಳೂ, ಕೆಲವರಿಗೆ ಬಹುವಾದ ಕತ್ತುಗಳೂ ಇದ್ದವು.

೨೪. ಕೆಲವರಿಗೆ ಅನೇಕ ಎದೆಗಳಿದ್ದವು. ಕೆಲವರಿಗೆ ಬಹು ಭುಜಗಳಿದ್ದವು. ಕೆಲವರಿಗೆ ಹೆಬ್ಬಾವುಗಳಂತೆ ಬಾಯಿದ್ದವು ಕೆಲವರಿಗೆ ಕತ್ತಿಯಂತೆ ಬಾಯಿಯೂ ಮತ್ತೆ ಕೆಲವರಿಗೆ ತೋಳನ ಬಾಯಿಯಂತೆ ಬಾಯಿಯೂ ಮತ್ತೆ ಕೆಲವರಿಗೆ ಗರುಡನ ಬಾಯಿಯಂತೆ ಬಾಯಿಯೂ ಇದ್ದವು.

೨೫-೨೬. ಕೆಲವರು ಮರದ ತೊಗಟೆಯ ನಾರಿನ ಬಟ್ಟೆಯನ್ನು ಧರಿಸಿದ್ದರು. ಮತ್ತೆ ಕೆಲವರು ನಾನಾಬಗೆಯಾದ ಬಟ್ಟೆಗಳನ್ನು ಧರಿಸಿದ್ದರು. ವೇಷಗಳನ್ನು ನಾನಾ ಬಗೆಯಾಗಿ ಧರಿಸಿದ್ದರು. ಬಗೆಬಗೆಯ ಹೂಮಾಲೆಯನ್ನು ಧರಿಸಿದ್ದರು. ಕೆಲವರು ಬಗೆಬಗೆಯ ವಸ್ತ್ರಗಳನ್ನು ಧರಿಸಿದ್ದರು. ಕೆಲವರು ಚರ್ಮವನ್ನೇ

ನಾನಾವಸ್ತ್ರಧರಾಶ್ಚಾನ್ಯೇ ಚರ್ಮವಾಸಸ ಏವ ಚ ।
ಉಷ್ಣೀಷಿಣೋ ಮುಕುಟಿನಃ ಕಂಬುಗ್ರೀವಾಸ್ಸುವರ್ಚಸಃ ॥ ೨೬ ॥

ಕಿರೀಟಿನಃ ಪಂಚಶಿಖಾಃ ತಥಾ ಕಠಿಣಮೂರ್ಧಜಾಃ ।
ತ್ರಿಶಿಖಾ ದ್ವಿಶಿಖಾಶ್ಚೈವ ತಥಾಸಪ್ತಶಿಖಾ ಅಪಿ ॥ ೨೭ ॥

ಶಿಖಂಡಿನೋ ಮುಕುಟಿನೋ ಮುಂಡಾಶ್ಚ ಜಟಿಲಾಸ್ತಥಾ ।
ಚಿತ್ರಮಾಲಾಧರಾಃ ಕೇಚಿತ್ ಕೇಚಿದ್ರೋಮಾನನಾಸ್ತಥಾ ॥ ೨೮ ॥

ವಿಗ್ರಹೈಕವಶಾ ನಿತ್ಯಮಜೇಯಾಸ್ಸುರಸತ್ತಮೈಃ ।
ಕೃಷ್ಣನಿರ್ಮಾಂಸವಕ್ತ್ರಾಶ್ಚ ದೀರ್ಘಪೃಷ್ಠಾ ನಿರೋದರಾಃ ॥ ೨೯ ॥

ಬಟ್ಟೆಯನ್ನಾಗಿ ಧರಿಸಿರುವರು. ಕೆಲವರುರುಮಾಲನ್ನು ಹಾಕಿಕೊಂಡಿದ್ದರು. ಕೆಲವರು ಕಿರೀಟವನ್ನು ಹಾಕಿಕೊಂಡಿದ್ದರು. ಕೆಲವರಿಗೆ ಶಂಖದಂತೆ ಕತ್ತುಗಳಿದ್ದುವು. ಒಳ್ಳೆಯ ತೇಜಸ್ವಿಗಳಾಗಿದ್ದರು.

೨೭. ಕೆಲವರು ಕಿರೀಟವನ್ನು ಹಾಕಿಕೊಂಡಿದ್ದರು. ಕೆಲವರು ಐದು ಭಾಗ ದಲ್ಲಿ ಜುಟ್ಟನ್ನು ಬಿಡಿಸಿದ್ದರು. ಕೆಲವರು ಒರಟಾದ ತಲೆಗೂದಲನ್ನು ಹೊಂದಿದ್ದರು. ಕೆಲವರು ಮೂರು ಭಾಗದಲ್ಲಿಯೂ ಕೆಲವರು ಎರಡು ಭಾಗದಲ್ಲಿಯೂ ಕೆಲವರು ಏಳು ಭಾಗದಲ್ಲಿಯೂ ಜುಟ್ಟನ್ನು ಬಿಡಿಸಿದ್ದರು.

೨೮–೨೯. ಕೆಲವರು ತಲೆಗೆ ಗರಿಗಳನ್ನು ಸಿಕ್ಕಿಸಿಕೊಂಡಿದ್ದರು. ಕೆಲವರು ಏನನ್ನೂ ತಲೆಗೆ ಹಾಕಿಕೊಂಡಿರಲಿಲ್ಲ. ಕೆಲವರು ತಲೆಯನ್ನು ಬೋಳಿಸಿಕೊಂಡಿದ್ದರು. ಕೆಲವರು ಜಡೆಯನ್ನು ಬಿಟ್ಟುಕೊಂಡಿದ್ದರು. ಕೆಲವರು ಚಿತ್ರವಾದ ಮಾಲೆಯನ್ನು ಧರಿಸಿದ್ದರು. ಕೆಲವರು ಗಡ್ಡ ಮೀಸೆಗಳನ್ನು ಬಿಟ್ಟಿದ್ದರು. ಅವರೆಲ್ಲರೂ ಯಾವಾಗಲೂ ಯುದ್ಧದಲ್ಲಿಯೇ ಆಸಕ್ತರು. ದೇವತೆಗಳು ಅವರನ್ನು ಜಯಿಸಲಾರರು. ಕೆಲವರ ಮುಖದಲ್ಲಿ ಕಪ್ಪಗಿರುವ ಮಾಂಸಖಂಡಗಳಿದ್ದುವು. ಕೆಲವರ ಮುಖದಲ್ಲಿ ಮಾಂಸವೇ ಇಲ್ಲದೆ ಒಣಗಿದ್ದರು. ಕೆಲವರ ಪೃಷ್ಠಗಳು ಉದ್ದವಾಗಿದ್ದುವು. ಕೆಲವರಿಗೆ ಹೊಟ್ಟೆಯು ಬೆನ್ನುಹತ್ತಿಕೊಂಡು ಕಾಣದಂತೆಯೇ ಇದ್ದಿತು.

ದೀರ್ಘಪೃಷ್ಠಾಃ ಸ್ಥೂಲಪೃಷ್ಠಾಃ ಪ್ರಲಂಬೋದರಮೇಹನಾಃ ।
ಮಹಾಭುಜಾ ಹ್ರಸ್ವಭುಜಾ ಹ್ರಸ್ವಗಾತ್ರಶ್ಚ ವಾಮನಾಃ ॥ ೩೦ ॥

ಕುಬ್ಜಾಶ್ಚ ಹ್ರಸ್ವಜಂಘಾಶ್ಚ ಹಸ್ತಿಕರ್ಣಶಿರೋಧರಾಃ ।
ಹಸ್ತಿನಾಸಾಃ ಕೂರ್ಮನಾಸಾ ವೃಕನಾಸಾಸ್ತಥಾಪರೇ ॥ ೩೧ ॥

ವಾರಣೇಂದ್ರನಿಭಾಶ್ಚಾನ್ಯೇ ದೀಪ್ತಿಮಂತಃ ಸ್ವಲಂಕೃತಾಃ ।
ಪಿಂಗಾಕ್ಷಾಃ ಶಂಕುಕರ್ಣಾಶ್ಚ ವಕ್ರನಾಸಾಸ್ತಥಾಪರೇ ॥ ೩೨ ॥

ಪೃಥುದಂಷ್ಟ್ರಾ ಮಹಾದಂಷ್ಟ್ರಾಃ ಸ್ಥೂಲೋಷ್ಠಾ ಹರಿಮೂರ್ಧಜಾಃ ।
ನಾನಾಪಾದೌಷ್ಠ ದಂಷ್ಟ್ರಾಶ್ಚ ನಾನಾಹಸ್ತಶಿರೋಧರಾಃ ॥ ೩೩ ॥

---

೩೦–೩೧. ಕೆಲವರ ಪೃಷ್ಠವು ದೀರ್ಘವಾಗಿಯೂ ಕೆಲವರ ಪೃಷ್ಠವು ದಪ್ಪವಾಗಿಯೂ ಇದ್ದುವು. ಕೆಲವರ ಗುಹ್ಯಸ್ಥಾನಗಳು ಉದ್ದವಾಗಿ ನೇತಾಡುತ್ತಲಿದ್ದುವು. ಕೆಲವರ ಭುಜವು ದೊಡ್ಡದಾಗಿಯೂ ಕೆಲವರದು ಚಿಕ್ಕದಾಗಿಯೂ ಇದ್ದುವು. ಕೆಲವರ ಕೈಕಾಲುಗಳು ಸಣ್ಣವಾಗಿದ್ದುವು. ಕೆಲವರು ಕುಳ್ಳರಾಗಿದ್ದರು. ಕೆಲವರು ಗುಜ್ಜಾರಿಗಳು. ಕೆಲವರ ತೊಡೆಗಳು ಚಿಕ್ಕವು. ಕೆಲವರ ಕಿವಿಗಳು ಆನೆಯ ಕಿವಿಗಳಂತೆ ಇದ್ದುವು. ಕೆಲವರ ತಲೆಗಳು ಆನೆಯ ತಲೆಗಳಂತಿದ್ದುವು. ಕೆಲವರ ಮೂಗು ಆನೆಯ ಸೊಂಡಿಲಿನಂತೆ ಇದ್ದುವು. ಕೆಲವರ ಮೂಗು ಆಮೆಯ ಆಕಾರಕ್ಕಿದ್ದಿತು. ಕೆಲವರ ಮೂಗು ತೋಳನ ಮೂತಿಯಂತಿದ್ದಿತು. ಈ ರೀತಿಯಾಗಿ ನಾನಾ ಬಗೆಯಾಗಿದ್ದಿತು.

೩೨-೩೩. ಕೆಲವರು ಮದ್ದಾನೆಯಂತೆ ಇದ್ದರು. ಕಾಂತಿವಂತವರು. ಕೆಲವರು ಅಲಂರಿಸಿಕೊಂಡಿದ್ದರು. ಕೆಲವರ ಕಣ್ಣು ಬೆಕ್ಕಿನ ಕಣ್ಣಿನಂತಿದ್ದಿತು. ಕೆಲವರ ಮೂಗುಗಳು ಗೂಟಗಳಂತಿದ್ದವು. ಕೆಲವರ ಮೂಗು ವಕ್ರವಾಗಿದ್ದಿತು. ಕೆಲವರ ಹಲ್ಲು ದಪ್ಪವಾಗಿದ್ದಿತು. ಕೆಲವರ ಹಲ್ಲು ಉದ್ದವಾಗಿದ್ದಿತು. ಕೆಲವರ ತುಟಿಯೂ ದಪ್ಪವಾಗಿದ್ದಿತು. ಕೆಲವರ ತಲೆಗೂದಲು ಕೆಂಚಗಿದ್ದಿತು. ಕೆಲವರಿಗೆ ಅನೇಕವಾದ ಕಾಲುಗಳಿದ್ದುವು. ಕೆಲವರಿಗೆ ಅನೇಕ ತುಟಿಗಳಿದ್ದವು. ಕೆಲವರಿಗೆ ಬಹುವಾದ ಕೋರೆ ಹಲ್ಲುಗಳಿದ್ದವು. ಕೆಲವರಿಗೆ ಬಹು ಕೈಗಳಿದ್ದವು. ಕೆಲವರಿಗೆ ಬಹು ಕತ್ತುಗಳಿದ್ದುವು.

ನಾನಾಚರ್ಮಭಿರಾಚ್ಛನ್ನಾ ನಾನಾವಾಸಾಶ್ಚ ಸುವ್ರತ ।
ಕೃಷ್ಟಾಃ ಪರಿಪತಂತಿ ಸ್ಮ ಮಹಾಪರಿಘಬಾಹವಃ ॥ ೩೪ ॥

ದೀರ್ಘಗ್ರೀವಾ ದೀರ್ಘನಖಾ ದೀರ್ಘಪಾದಶಿರೋಭುಜಾಃ ।
ಪಿಂಗಾಕ್ಷಾ ನೀಲಕಂಠಾಶ್ಚ ಸ್ವರ್ಣಕರ್ಣಾಶ್ಚ ಸುವ್ರತ ॥ ೩೫ ॥

ವೃಕೋದರನಿಭಾಃ ಕೇಚಿತ್ ಕೇಚಿದಂಜನಸನ್ನಿಭಾಃ ।
ಶ್ವೇತಾಕ್ಷಾ ಲೋಹಿತಗ್ರೀವಾಃ ಪಿಂಗಾಕ್ಷಾಶ್ಚ ತಥಾಪರೇ ॥ ೩೬ ॥

ಕಲ್ಮಾಷಾ ಬಹವೋ ವಿಪ್ರಾ ಚಿತ್ರವರ್ಣಾಶ್ಚ ಕೇಚನ ।
ಚಾಮರಾಪೀಡಕನಿಭಾಃ ಶ್ವೇತಲೋಹಿತಕಾಂತಯಃ ॥ ೩೭ ॥

ನಾನಾವರ್ಣಾಸ್ಸುವರ್ಣಾಶ್ಚ ಮಯೂರಸದೃಶಪ್ರಭಾಃ ।
ಪಾಶೋದ್ಯತಕರಾಃ ಕೇಚಿತ್ ವ್ಯಾದಿತಾಸ್ಯಾಃ ಖರಾನನಾಃ ॥ ೩೮ ॥

೩೪-೩೫. ಕೆಲವರು ಬಗೆ ಬಗೆಯ ಚರ್ಮಗಳನ್ನು ಹೊದ್ದಿದ್ದರು. ಕೆಲವರು ಚಿತ್ರ ಚಿತ್ರವಾದ ಬಟ್ಟೆಗಳನ್ನು ಧರಿಸಿದ್ದರು. ದೊಡ್ಡದಾದ ತೋಳುಳ್ಳ ಅವರು ಸಂತೋಷದಿಂದ ಬರುತ್ತಿದ್ದರು. ಕೆಲವರಿಗೆ ಉದ್ದವಾದ ಕತ್ತುಗಳಿದ್ದವು. ಕೆಲವರಿಗೆ ದೀರ್ಘವಾದ ಉಗುರುಗಳಿದ್ದವು. ಕೆಲವರಿಗೆ ಉದ್ದವಾದ ಕಾಲುಗಳಿದ್ದವು. ಕೆಲವರಿಗೆ ಉದ್ದವಾದ ತಲೆಯಿದ್ದಿತು. ಕೆಲವರಿಗೆ ಉದ್ದವಾದ ಭುಜಗಳಿದ್ದವು.

೩೬-೩೭. ಕೆಲವರ ಹೊಟ್ಟೆಯು ತೋಳನ ಹೊಟ್ಟೆಯಂತಿದ್ದಿತು. ಕೆಲವರ ಹೊಟ್ಟೆಯು ಬೆಟ್ಟದಂತೆ ದಪ್ಪವಾಗಿದ್ದಿತು. ಕೆಲವರಿಗೆ ಕಣ್ಣು ಬೆಳ್ಳಗೂ ತಲೆಯು ಕೆಂಚಗೂ ಇದ್ದಿತು. ಕೆಲವರು ಚಿತ್ರ ಬಣ್ಣವಾಗಿದ್ದರು. ಕೆಲವರು ಚಾಮರವನ್ನು ತಲೆಗೆ ಕಟ್ಟಿಕೊಂಡಿದ್ದರು. ಕೆಲವರು ಬಿಳುಪು ಕೆಂಪುಸೇರಿದ ಕಾಂತಿಯುಳ್ಳವರಾಗಿದ್ದರು.

೩೮-೩೯. ಕೆಲವರು ನಾನಾವರ್ಣಗಳುಳ್ಳವರಾಗಿಯೂ, ಕೆಲವರು ಒಳ್ಳೆಯ ಬಣ್ಣವುಳ್ಳವರಾಗಿಯೂ, ಕೆಲವರು ನವಿಲಿನಂತೆ ಕಾಂತಿಯುಳ್ಳವರಾಗಿಯೂ ಇದ್ದರು. ಕೆಲವರು ಕೈಯ್ಯಲ್ಲಿ ಹಗ್ಗವನ್ನು ಹಿಡಿದಿದ್ದರು. ಕೆಲವರು ಬಾಯನ್ನು ತೆಗೆದುಕೊಂಡಿದ್ದರು. ಕೆಲವರು ಕತ್ತೆಯ ಬಾಯಂತೆ ಬಾಯನ್ನು ಬಿಡುತ್ತಿದ್ದರು. ಕೆಲವರು ಬಂದೂಕಗಳನ್ನು ಕೈಯ್ಯಲ್ಲಿ ಹಿಡಿದಿದ್ದರು. ಕೆಲವರು ಚಕ್ರವನ್ನು ಕೈಯ್ಯಲ್ಲಿ ಹಿಡಿದಿದ್ದರು.

**ಶತಘ್ನೀಚಕ್ರಹಸ್ತಾಶ್ಚ ತಥಾಮುಸಲಪಾಣಯಃ ।**
**ಅಸಿಮುದ್ಗರಹಸ್ತಾಶ್ಚ ದಂಡಹಸ್ತಾಶ್ಚ ಕೇಚನ ॥ ೩೯ ॥**

**ಗದಾಭುಶುಂಡಿಹಸ್ತಾಶ್ಚ ತಥಾತೋಮರಪಾಣಯಃ ।**
**ಆಯುಧೈರ್ವಿವಿಧೈಃ ಘೋರೈರ್ಮಹಾತ್ಮಾನೋ ಮಹೌಜಸಃ ॥ ೪೦ ॥**

**ಮಹಾಬಲಾ ಮಹಾವೇಗಾ ಅಸಂಖ್ಯಾತಾವಿನಿರ್ಯಯುಃ ।**
**ಘಂಟಾಜಾಲಾಪಿನದ್ಧಾಂಗಾ ನನೃತುಸ್ತೇ ರಣಾಜಿರೇ ॥ ೪೧ ॥**

**ಕೋಟಿಶೋ ವಿಕೃತರೂಕ್ಷಭಾಷಿಣೋ ಯಾತುಧಾನಗಣಸೈನ್ಯಪಾಲಕಾಃ ।**
**ದುದ್ರುವೂ ರಘುಕುಲಾವತಂಸಕಂ ಗೃಹ್ಣ-ಧಾವ ಹನ ಪೋಥವಾದಿನಃ॥೪೨॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ರಾವಣಪುತ್ರನಿರ್ಯಾಣಂ ನಾಮ**
**ಏಕೋನವಿಂಶಃ ಸರ್ಗಃ**

---

ಕೆಲವರು ಮುಸಲಗಳನ್ನು ಕೈಯ್ಯಲ್ಲಿ ಹಿಡಿದಿದ್ದರು. ಕೆಲವರು ಕತ್ತಿಯನ್ನೂ ಮುದ್ಗರವನ್ನೂ ದೊಣ್ಣೆಯನ್ನೂ ಕೈಗಳಲ್ಲಿ ಹಿಡಿದಿದ್ದರು.

೪೦-೪೧. ಕೆಲವರು ಕೈಯ್ಯಲ್ಲಿ ಭೂಶುಂಡಿಯನ್ನೂ ಕೆಲವರು ತೋಮರಗಳನ್ನೂ ಹಿಡಿದಿದ್ದರು. ಎಲ್ಲರೂ ಮಹಾತ್ಮರು. ಮಹಾ ಬಲಶಾಲಿಗಳು ನಾನಾಬಗೆಯ ಆಯುಧಗಳನ್ನು ಧರಿಸಿದ್ದರು. ಮಹಾ ಬಲಿಷ್ಠರು. ಮಹಾ ವೇಗವುಳ್ಳವರು. ಇಂತಹವರು ಲೆಕ್ಕವಿಲ್ಲದಂತೆ ಹೊರಟರು. ಮೈಕೈಗಳಿಗೆಲ್ಲಾ ಘಂಟೆಗಳನ್ನು ಕಟ್ಟಿಕೊಂಡು ರಣಾಂಗಣದಲ್ಲಿ ಕುಣಿದರು.

೪೨. ಆ ರಾಕ್ಷಸಸೈನ್ಯದ ಸೇನಾಧಿಪತಿಗಳು ಅನೇಕ ರೀತಿಯಾಗಿ ಕೆಟ್ಟಮಾತುಗಳನ್ನು ಆಡುತ್ತಾ ಹಿಡಿ, ಓಡು, ಕೊಲ್ಲು, ಸೀಳು, ಎಂದೆನ್ನುತ್ತಾ ಶ್ರೀ ರಾಮನನ್ನು ಎದುರಿಸಿದರು.

**ಇಂತು ಶ್ರೀ ವಾಲ್ಮೀಕಿಯಿಂದ ರಚಿಸಲ್ಪಟ್ಟ ಆದಿಕಾವ್ಯವಾದ ಶ್ರೀಮದ್ರಾಮಾಯಣದ**
**ಅದ್ಭುತೋತ್ತರಕಾಂಡದಲ್ಲಿ ರಾವಣನ ಮಕ್ಕಳು ಯುದ್ಧಕ್ಕೆ ಹೊರಟರು**
**ಎಂಬ ಹತ್ತೊಂಬತ್ತನೆಯ ಸರ್ಗವು**

## ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ಅಥ ವಿಂಶತಿತಮಃ ಸರ್ಗಃ

ಧನೂಂಷಿ ಚ ವಿಧುನ್ವಾನಸ್ತತೋ ವೈಶ್ರವಣಾನುಜಃ ।
ಕೋಽಯಂ ಕಿಮರ್ಥಮಾಯಾತಃ ಇತಿ ಚಿಂತಾಪರೋಽಭವತ್ ॥ ೧ ॥

ತತೋ ಗಗನಸಂಭೂತಾ ವಾಣೀಸಮುಪಪದ್ಯತ ।
ಭೋ ರಾವಣ ಮಹಾವೀರ್ಯ ರಾಮೋಽಯಂ ಸಮುಪಾಗತಃ ॥ ೨ ॥

ರಾಘವೋಽಯಮಯೋಧ್ಯಾಯಾ ರಾಜಾ ಧರ್ಮಸ್ವರೂಪಧೃಕ್ ।
ಲಂಕಾಯಾಂ ನಿಹತೋ ಯೇನ ದಾರಾಕರ್ಷೀ ತವಾನುಜಃ ॥ ೩ ॥

## ಇಪ್ಪತ್ತನೆಯ ಸರ್ಗವು

೧. ಆ ಸಹಸ್ರಕಂಠನು ಧನುಸ್ಸನ್ನು ಠೇಂಕರಿಸುತ್ತ ಇವನಾರು? ಏತಕ್ಕೆ ಬಂದನು? ಎಂಬದಾಗಿ ಯೋಚನೆಮಾಡುತ್ತಿದ್ದನು.

೨. ಆಗ ಅಂತರಿಕ್ಷದಿಂದ ಆಕಾಶವಾಣಿಯು ಎಲೈ ರಾವಣನೆ! ಮಹಾ ಪರಾಕ್ರಮಿಯಾದ ರಾಮನು ನಿನ್ನ ಬಳಿಗೆ ಬಂದಿದ್ದಾನೆ ಎಂದು ಹೇಳಿತು.

೩. ಈ ರಾಮನು ರಘುಕುಲದಲ್ಲಿ ಹುಟ್ಟಿದವನು. ಅಯೋಧ್ಯೆಗೆ ರಾಜನು. ಧರ್ಮದ ಅವತಾರಿಯು. ಇವನ ಹೆಂಡತಿಯನ್ನು ಕದ್ದುಕೊಂಡು ಹೋಗಿದ್ದ ನಿನ್ನ ತಮ್ಮನಾದ ರಾವಣನು ಇವನಿಂದಲೇ ಕೊಲ್ಲಲ್ಪಟ್ಟನು,

ತ್ವದ್ವಧಾರ್ಥಮಿಹಾಯಾತೋ ವಿಭೀಷಣವಸುಪ್ರದಃ ।
ಭ್ರಾತೃಭಿರ್ವಾನರೈಃ ಋಕ್ಷೈ ರಾಕ್ಷಸೈರ್ಮಾನುಷೈರ್ಯುತಃ ॥ ೪ ॥

ಶ್ರುತ್ವಾ ಹ್ಯಮಾನುಷಂ ವಾಕ್ಯಂ ರಾವಣೋ ಲೋಕರಾವಣಃ ।
ಕ್ರೋಧಮಾಹಾರಯಾಮಾಸ ದ್ವಿಗುಣಂ ಮುನಿಪುಂಗವ ॥ ೫ ॥

ಹನ್ಯತಾಂ ಬಧ್ಯತಾಮೇಷ ಮಾನುಷೋ ರಿಪುಸಂಜ್ಞಿತಃ ।
ಮಮ ವಿಶ್ವಜಿತಸ್ಸಾಕ್ಷಾದ್ರಣಾಯ ಸಮುಪಸ್ಥಿತಃ ॥ ೬ ॥

ಇತ್ಯುಕ್ತ್ವಾ ಬಾಣಜಾಲಾನಿ ಚಕ್ರೇ ಪರ್ವತತೋಮರಾನ್ ।
ಚಿಕ್ಷೇಪ ಸಹಸಾ ರಕ್ಷಃ ಪುಷ್ಪಕೋಪರಿ ಸುವ್ರತ ॥ ೭ ॥

ರಾಕ್ಷಸೀ ಸಾ ಚಮೂರ್ಘೋರಾ ವಾನರಾನೃಕ್ಷಮಾನುಷಾನ್ ।
ಚಖಾದ ಕಾಂಶ್ಚಿದಪರಾನ್ ಪೋಥಯಾಮಾಸದರ್ಪಿತಾನ್ ॥ ೮ ॥

---

೪. ಇವನು ರಾವಣನನ್ನು ಕೊಂದು ವಿಭೀಷಣನಿಗೆ ಆ ರಾಜ್ಯವನ್ನು ಕೊಟ್ಟನು. ಅವನು ನಿನ್ನನ್ನು ಕೊಲ್ಲಲು ಇಲ್ಲಿಗೆ ಬಂದಿದ್ದಾನೆ. ಇವನ ಜೊತೆಯಲ್ಲಿ ಅವರ ತಮ್ಮಂದಿರೂ ವಾನರರೂ, ಕರಡಿಗಳೂ ರಾಕ್ಷಸರೂ ಮನುಷ್ಯರೂ ಬಂದಿದ್ದಾರೆ.

೫. ಆ ರಾವಣನು ಆಕಾಶವಾಣಿಯ ಮಾತನ್ನು ಕೇಳಿ ಮೊದಲಿನ ಕೋಪಕ್ಕಿಂತಲೂ ಬಹುವಾಗಿ ಕೋಪವನ್ನು ಹೊಂದಿದನು.

೬. ಇವನನ್ನು ಕೊಲ್ಲಿರಿ. ಕಟ್ಟಿಹಾಕಿರಿ. ಈ ಮನುಷ್ಯನು ನನಗೆ ಶತ್ರುವೆಂದು ಹೆಸರನ್ನು ಹೊಂದಿ ಬಂದಿರುವನಲ್ಲ! ಪ್ರಪಂಚವೆಲ್ಲವನ್ನೂ ಜಯಿಸಿರುವ ನನ್ನೆದುರಿಗೆ ಪ್ರತ್ಯಕ್ಷವಾಗಿಯೇ ಯುದ್ಧಕ್ಕೆ ಬಂದಿರುವನಲ್ಲ!

೭. ಹೀಗೆಂದು ಹೇಳುತ್ತ ಆ ಸಹಸ್ರಕಂಠನು ಪುಷ್ಪಕ ವಿಮಾನದಮೇಲೆ ಬಾಣಗಳನ್ನು ಬಿಡುತ್ತ ತೋಮರಗಳನ್ನು ಎಸೆಯುತ್ತ ಪರ್ವತಗಳನ್ನು ಕಿತ್ತು ಅದರ ಮೇಲೆ ಹಾಕುತ್ತಾ ಬಂದನು.

೮. ಆ ರಾಕ್ಷಸ ಸೇನೆಯೂ ಕೂಡ ವಾನರರನ್ನೂ, ಕರಡಿಗಳನ್ನೂ, ಮನುಷ್ಯರನ್ನೂ, ಕೆಲವರನ್ನು ತಿಂದಿತು. ಕೆಲವರನ್ನು ಕೊಂದಿತು. ಕೊಬ್ಬಿದ ಕೆಲವರನ್ನು ಸೀಳಿತು

ಸಾ ಚ ಶಾಖಾಮೃಗೀ ಸೇನಾ ರಾಘವಸ್ಯ ಚ ಮಾನುಷೀ ।
ರಾವಣಸ್ಯಾನುಗಾನ್ ವೀರಾನ್ ಜಘಾನ ಬಾಣಪರ್ವತೈಃ ॥ ೯ ॥

ತೇನ್ಯೋನ್ಯಂ ವಧಮಿಚ್ಛಂತೋ ಯುಯುಧುಃ ಸೈನಿಕೋತ್ತಮಾಃ ।
ಪೇತುರ್ಮಮ್ಲುಶ್ಚ ಮುಮುಹೂರಾಕ್ಷಸಾ ವಾನರಾ ನರಾಃ ॥ ೧೦ ॥

ತತೋ ರಾಮೋ ಮಹಾಬಾಹುರ್ಭರತೋ ಲಕ್ಷ್ಮಣಸ್ತಥಾ ।
ಶತ್ರುಘ್ನೋ ಹನುಮಾನ್ ವೀರಃ ಸುಗ್ರೀವೋ ಜಾಂಬವಾಂಸ್ತಥಾ ॥ ೧೧ ॥

ಅನ್ಯೇ ಚ ನಲನೀಲಾದ್ಯಾ ವಿಭೀಷಣಪುರೋಗಮಾಃ ।
ಯುಯುಧುಸ್ತೇ ಮಹಾಘೋರಂ ಮಹಾಘೋರೇ ರಣಾಜಿರೇ ॥ ೧೨ ॥

ನಿರ್ಜಗ್ಮುಶ್ಚ ವಿನೇದುಶ್ಚ ಚಿಕ್ರೀಡುಶ್ಚೈವ ರಾಕ್ಷಸಾಃ ।
ಜಹೃಷುಶ್ಚ ಮಹಾತ್ಮಾನಃ ಸಂಗ್ರಾಮೇಷ್ವನಿವರ್ತಿನಃ ॥ ೧೩ ॥

ಉತ್ಕೃಷ್ಟಾಸ್ಫೋಟಿತೈರ್ನಾದೈಶ್ಚ ಚಾಲೇವ ಚ ಮೇದಿನೀ ।
ರಕ್ಷಸಾಂ ಸಿಂಹನಾದೈಶ್ಚ ಪರಿಪೂರ್ಣಂ ನಭಸ್ಥಲಂ ॥ ೧೪ ॥

---

೯. ರಾಘವನ ಆ ಕಪಿ ಸೇನೆಯೂ, ಮನುಷ್ಯ ಸೇನೆಯೂ, ಆ ಸಹಸ್ರಕಂಠ ರಾವಣನ ಅನುಯಾಯಿಗಳನ್ನು ಬಾಣಗಳಿಂದ ಹೊಡೆದುವು.

೧೦. ಆ ಸೈನಿಕರು ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ಹುರುಪಿನಿಂದ ಯುದ್ಧ ವನ್ನು ಮಾಡಿದರು. ಆ ರಾಕ್ಷಸರೂ ಮತ್ತು ಕಪಿಗಳೂ, ಮನುಷ್ಯರೂ ಏಟನ್ನು ತಿಂದು ಬಿದ್ದರು. ಮೂರ್ಛೆ ಹೋದರು. ಮಲಗಿದರು. ಅನೇಕ ರೀತಿಯಾಗಿ ಬಿದ್ದರು.

೧೧–೧೨. ಅನಂತರ ರಾಮ, ಲಕ್ಷ್ಮಣ, ಭರತ, ಶತ್ರುಘ್ನ, ಹನುಮಂತ, ಸುಗ್ರೀವ, ಜಾಂಬವ, ನಲ, ನೀಲ, ವಿಭೀಷಣ ಮುಂತಾದವರೂ ಕೂಡ ಆ ಘೋರ ವಾದ ರಾವಣನ ರಣರಂಗದಲ್ಲಿ ಘೋರವಾಗಿ ಯುದ್ಧ ಮಾಡಿದರು.

೧೩-೧೪. ಯುದ್ಧದಲ್ಲಿ ಹಿಂದಿರುಗದಿರುವ ಆ ರಾಕ್ಷಸರು ಮುಂದೆ ನುಗ್ಗಿದರು. ಕುಣಿದರು. ಕ್ರೀಡಿಸಿದರು. ಸಂತೋಷಪಟ್ಟರು. ಅವರು ಕೈಗಳನ್ನು ಬಡಿಯುತ್ತಿದ್ದ ಧ್ವನಿಗೆ ಭೂಮಿಯು ಎಳೆಯಲ್ಪಟ್ಟು ಅಲ್ಲಾಡುತ್ತಿರುವುದೋ ಎಂಬಂತಿದ್ದಿತು. ಆ ರಾಕ್ಷಸರ ಸಿಂಹನಾದದಿಂದ ಆಕಾಶವೆಲ್ಲವೂ ತುಂಬಿಕೊಂಡಿದ್ದಿತು.

ತೇ ಪ್ರಾಯುಧ್ಯಂತ ಮುದಿತಾ ರಾಕ್ಷಸೇಂದ್ರಾ ಮಹಾಬಲಾಃ ।
ಪ್ರಯಯುರ್ವಾನರಾನೀಕಂ ಸಮುದ್ಯತಶಿಲಾಯುಧಂ ॥ ೧೫ ॥

ಯುಯೋಧ ರಾಕ್ಷಸಂ ಸೈನ್ಯಂ ನರರಾಕ್ಷಸವಾನರೈಃ ।
ಹಸ್ತ್ಯಶ್ವರಥಸಂಬಾಧಂ ಕಿಂಕಿಣೀಶತನಾದಿತಂ ॥ ೧೬ ॥

ನೀಲಜೀಮೂತಸಂಕಾಶೈಃ ಸಮುದ್ಯತಶಿಲಾಯುಧೈಃ ।
ದೀಪ್ತಾನಲರವಿಪ್ರಖ್ಯೈ ನೈರ್ಋತೈಃ ಸರ್ವತೋವೃತಂ ॥ ೧೭ ॥

ತದ್ವೀಕ್ಷ್ಯ ರಾಕ್ಷಸಬಲಂ ಸಂರಬ್ಧಾಶ್ಚ ಪ್ಲವಂಗಮಾಃ ।
ಕ್ರುದ್ಧಂ ತದ್ರಾಕ್ಷಸಂ ಸೈನ್ಯಂ ಜಘ್ನುರ್ದ್ರುಮಶಿಲಾ ಯುಧೈಃ ॥ ೧೮ ॥

ತೇ ಪಾದಪಶಿಲಾಶೈಲೈ ಸ್ತಾಂಶ್ಚಕ್ರುರ್ವೃಷ್ಟಿಮುತ್ತಮಾಂ ।
ವೃಕ್ಷಾಘೈರ್ವಜ್ರಸಂಕಾಶೈರ್ಹರಯೋ ಭೀಮವಿಕ್ರಮಾಃ ॥ ೧೯ ॥

---

೧೫. ಆ ರಾಕ್ಷಸಶ್ರೇಷ್ಠರೆಲ್ಲರೂ ಸಂತೋಷದಿಂದ ಯುದ್ಧಮಾಡಲು ಕಲ್ಲೇ ಮುಂತಾದ ಆಯುಧಗಳನ್ನು ಹಿಡಿದು ನಿಂತಿರುವ ಕಪಿ ಸೈನ್ಯದ ಮೇಲೆ ಯುದ್ಧಕ್ಕೆ ಹೊರಟರು.

೧೬–೧೭. ಗೆಜ್ಜೆ, ಗಂಟೆ, ಮೊದಲಾದುವುಗಳಿಂದ ಅಲಂಕೃತವಾಗಿ ಧ್ವನಿ ಮಾಡುತ್ತಲಿರುವ ಆನೆ, ಕುದುರೆ, ರಥಗಳಿಂದ ಕೂಡಿದ ಮುಂಗಾರು ಮೋಡ ದಂತಿರುವ ರಾಕ್ಷಸ ಸೈನ್ಯವು ತನ್ನ ಕ್ರೌರ್ಯವನ್ನು ಹೊರಸೂಸುತ್ತಿರುವ ಬೆಂಕಿ ಸೂರ್ಯರಂತೆ ಪ್ರಕಾಶಿಸುತ್ತ ಆ ಕಪಿ ಮತ್ತು ರಾಕ್ಷಸರು ಮನುಷ್ಯರು ಇಂತಹ ಸೈನ್ಯ ದೊಡನೆ ಯುದ್ಧ ಮಾಡಿದರು.

೧೮. ಆ ಸಹಸ್ರಕಂಠ ರಾವಣನ ಸೈನ್ಯವನ್ನು ನೋಡಿ ಕಪಿ ಸೈನ್ಯವು ಬಹು ವಾಗಿ ರೋಷಗೊಂಡಿತು. ಹೀಗೆ ಕೋಪಗೊಂಡು ಆ ರಾಕ್ಷಸ ಸೈನ್ಯವನ್ನು ಕಲ್ಲು ಮರ ಮುಂತಾದವುಗಳಿಂದ ಹೊಡೆಯಿತು.

೧೯. ಆ ಮರಗಳನ್ನೂ, ಬೆಟ್ಟಗಳನ್ನೂ, ಕಲ್ಲುಗಳನ್ನೂ ರಾಕ್ಷಸ ಸೈನ್ಯದ ಮೇಲೆ ಎಸೆಯುತ್ತ ದೊಡ್ಡ ಮಳೆ ಬಂದಂತೆ ಮಾಡಿಬಿಟ್ಟವು.

**ಶಿಖರೈಃ ಶಿಖರಾಭಾಂಸ್ತೇ ಯಾತುಧಾನಾನಮರ್ದಯನ್ ।**
**ನಿರ್ಜಘ್ನುಸ್ಸಮರೇ ಕ್ರುದ್ಧಾ ಹರಯೋ ರಾಕ್ಷಸರ್ಷಭಾನ್ ॥ ೨೦ ॥**

**ಕೇಚಿದ್ರಥಗತಾನ್ ವೀರಾನ್ ಗಜವಾಜಿಸ್ಥಿತಾನಪಿ ।**
**ನಿರ್ಜಘ್ನುಸ್ಸಹಸಾಪ್ಲುತ್ಯ ಯಾತುಧಾನಾನ್ ಪ್ಲವಂಗಮಾಃ ॥ ೨೧ ॥**

**ಶೈಲಶೃಂಗನಿಭಾಸ್ತೇ ತು ಮುಷ್ಟಿನಿಷ್ಕ್ರಾಂತಲೋಚನಾಃ ।**
**ಪೇತುಃ ಪೇತುಶ್ಚ ನೇದುಶ್ಚ ತತೋ ರಾಕ್ಷಸಪುಂಗವಾಃ ॥ ೨೨ ॥**

**ತತಶ್ಶೂಲೈಶ್ಚ ವಜ್ರೈಶ್ಚ ವಿಮುಷ್ಟೈರ್ಹರಿಪುಂಗವೈಃ ।**
**ಮುಹೂರ್ತೇನಾವೃತಾ ಭೂಮಿರಭವಚ್ಛೋಣಿತಪ್ಲುತಾ ॥ ೨೩ ॥**

**ವಿಕೀರ್ಣೈಃ ಪರ್ವತಾಗ್ರೈಶ್ಚ ರಕ್ಷೋಭಿರುಪಮರ್ದಿತೈಃ ।**
**ಆಕ್ಷಿಪ್ತಾಃ ಕ್ಷಿಪ್ಯಮಾಣಾಶ್ಚ ಭಗ್ನಶೇಷಾಶ್ಚ ವಾನರಾಃ ॥ ೨೪ ॥**

---

೨೦. ಬೆಟ್ಟದ ಶಿಖರಗಳಂತಿರುವ ಆ ರಾಕ್ಷಸರನ್ನು ಕಪಿಗಳು ಬೆಟ್ಟದ ಶಿಖರಗಳಿಂದಲೇ ಹೊಡೆದುವು ಅಲ್ಲದೆ ಬಗೆಬಗೆಯ ಆಯುಧಗಳಿಂದಲೂ ಕೋಪಗೊಂಡು ಹೊಡೆದುವು.

೨೧. ಕೆಲವು ಕಪಿಗಳು ರಥದ ಮೇಲಿರುವವರನ್ನೂ, ಕೆಲವರು ಆನೆಯ ಮೇಲಿರುವವರನ್ನೂ, ಕೆಲವರು ಕುದುರೆಯ ಮೇಲಿರುವವರನ್ನೂ ಮೇಲಕ್ಕೆ ನೆಗೆದು ಅವರ ಮೇಲೆ ಬಿದ್ದು ಹೊಡೆದರು.

೨೨. ಆ ರಾಕ್ಷಸರು ಬೆಟ್ಟಗಳಂತಿದ್ದರೂ ಈ ಕಪಿಗಳ ಮುಷ್ಟಿಯ ಏಟನ್ನು ತಡೆಯಲಾರದೆ ಕಣ್ಣುಗಳು ಆ ಏಟಿನಿಂದ ಹೊರಗೆ ಹೊರಡಲು ಕೆಳಗೆ ಬಿದ್ದರು, ನಡುಗಿದರು. ಹೆದರಿಕೆಯಿಂದ ಕೂಗಿಕೊಂಡರು. ಬಹುವಾಗಿ ನಷ್ಟ ಹೊಂದಿದರು.

೨೩. ಅದೂ ಅಲ್ಲದೆ ಕಪಿಗಳು ಶೂಲಗಳಿಂದಲೂ ಕತ್ತಿಗಳಿಂದಲೂ ಹೊಡೆಯಲು ಆ ರಾಕ್ಷಸರೆಲ್ಲರಿಗೂ ರಕ್ತವು ಸೋರಲು ಮೊದಲಾಯಿತು. ಹೀಗೆ ಸೋರಿದ ರಕ್ತದಿಂದ ಭೂಮಿಯು ರಕ್ತಮಯವಾಗಿ ನೆನೆಯಿತು.

೨೪. ಆ ರಾಕ್ಷಸರೂ ಕೂಡ ಕೋಡುಗಲ್ಲುಗಳಿಂದಲೂ ಇನ್ನೂ ಅನೇಕ ಆಯುಧಗಳಿಂದಲೂ ಆ ವಾನರರನ್ನು ಕೊಲ್ಲುತ್ತ ಅವರನ್ನು ಅತ್ತಿತ್ತಲಾಗಿ ಎಸೆದಾಡಿದರು. ಇದರಿಂದ ಬಹು ಜನ ವಾನರರು ಸತ್ತರು.

ರಥೇನ ರಥಿನಂ ಚಾಪಿ ರಾಕ್ಷಸಂ ರಾಕ್ಷಸೇನ ಚ ।
ಹಯೇನ ಚ ಹಯಂ ಕೇಚಿತ್ ನಿಪಿಷುರ್ಧರಣೀತಲೇ ॥ ೨೫ ॥

ವಾನರಾನ್ ಪಾದಪೈರೇವ ಜಘ್ನುರ್ಘೋರಾ ಹಿ ರಾಕ್ಷಸಾಃ ।
ರಾಕ್ಷಸಾನ್ ರಾಕ್ಷಸೈರೇವ ಪಿಪಿಷುರ್ವಾನರಾ ಯುಧಿ ॥ ೨೬ ॥

ಆಕ್ಷಿಪ್ಯ ಚ ಶಿಲಾ ಜಘ್ನೂ ರಾಕ್ಷಸಾ ವಾನರಾಂಸ್ತಥಾ ।
ತೇಷಾಮಾಚ್ಛಿದ್ಯ ಶಸ್ತ್ರಾಣಿ ಜಘ್ನುಸ್ತಾನಪಿ ವಾನರಾಃ ॥ ೨೭ ॥

ನಿರ್ಜಘ್ನುಶ್ಶೈಲಶಿಖರೈರ್ನಿರ್ಭಿನ್ನಾಶ್ಚ ಪರಸ್ಪರಂ ।
ಸಿಂಹನಾದಂ ವಿನೇದುಶ್ಚ ರಣೇ ವಾನರರಾಕ್ಷಸಾಃ ॥ ೨೮ ॥

ಛಿನ್ನಚರ್ಮತನುತ್ರಾಣಾ ರಾಕ್ಷಸಾ ವಾನರೈಃ ಕೃತಾಃ ।
ಸುಸ್ರಾವ ರುಧಿರಂ ತೇಭ್ಯಃ ಸ್ರವತಃ ಪರ್ವತಾದಿವ ॥ ೨೯ ॥

---

೨೫. ಅವರೆಲ್ಲರೂ ಒಬ್ಬರಿಂದೊಬ್ಬರನ್ನು ಕುದುರೆಯಿಂದ ಕುದುರೆಯನ್ನು ರಥದಿಂದ ರಥವನ್ನೂ ರಾಕ್ಷಸರಿಂದ ರಾಕ್ಷಸನನ್ನೂ ಬಡಿದರು. ಅದರಿಂದ ಅನೇಕ ಜನ ರಾಕ್ಷಸರು ಸತ್ತರು.

೨೬. ಆ ರಾಕ್ಷಸರೂ ಕೂಡ ಕಪಿಗಳಿಂದ ಕಪಿಗಳನ್ನೇ ಹೊಡೆದರು. ಈ ಕಪಿಗಳೂ ಅಂತೆಯೇ ಅವರಿಂದಲೇ ಅವರನ್ನು ಹೊಡೆಯುತ್ತ ಬಂದರು.

೨೭. ರಾಕ್ಷಸರು ಕಲ್ಲಗಳನ್ನು ತೆಗೆದುಕೊಂಡು ವಾನರರನ್ನು ಹೊಡೆದರು. ಆ ವಾನರರು ಆ ರಾಕ್ಷಸರ ಕಲ್ಲುಗಳನ್ನೇ ಕಿತ್ತುಕೊಂಡು ಆ ರಾಕ್ಷಸರನ್ನೇ ಹೊಡೆದರು.

೨೮. ಕೋಡುಗಳನ್ನು ತೆಗೆದುಕೊಂಡು ಹೀಗೆಯೇ ಒಬ್ಬರಿಗೊಬ್ಬರು ಹೊಡೆದಾಡುತ್ತ ಗಾಯವನ್ನು ಹೊಂದಿದರು. ರೋಷದಿಂದ ರಣಾಂಗಣದಲ್ಲಿ ಆ ವಾನರ ರಾಕ್ಷಸರು ಸಿಂಹನಾದ ಮಾಡುತ್ತಿದ್ದರು.

೨೯. ವಾನರರು ರಾಕ್ಷಸರು ಹಾಕಿಕೊಂಡಿದ್ದ ಮೈಗವಚವನ್ನು ಕತ್ತರಿಸಿದರು. ಇದರಿಂದ ಏಟು ಹೆಚ್ಚಾಗಿ ಬೀಳಲು ಪರ್ವತಗಳಿಂದ ನೀರು ಸ್ರವಿಸುವಂತೆ ಅವರ ದೇಹದಿಂದ ರಕ್ತವು ಸ್ರವಿಸುತ್ತಲಿದ್ದಿತು.

ತಸ್ಮಿಂಸ್ತದಾ ಸಂಯತಿ ಸಂಪ್ರವೃತ್ತೇ
ಕೋಲಾಹಲೇ ರಾಕ್ಷಸರಾಜಧಾನ್ಯಾಂ ।
ಸಂಹೃಷ್ಟಮಾಣೇಷು ಚ ವಾನರೇಷು
ನಿಪಾತ್ಯಮಾನೇಷು ಚ ರಾಕ್ಷಸೇಷು ॥ ೩೦ ॥

ಪ್ರಭಜ್ಯಮಾನೇಷು ಮಹಾಬಲೇಷು
ಮಹರ್ಷಯೋ ಭೂತಗಣಾಶ್ಚ ನೇದುಃ ।
ತೇನಾಪಿ ಸರ್ವೇ ಹರಯಃ ಪ್ರಹೃಷ್ಟಾ
ವಿನೇದುರಾಕ್ಷ್ವೇಡಿತಸಿಂಹನಾದೈಃ ॥ ೩೧ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಸಂಕುಲಯುದ್ಧಂ ನಾಮ
ವಿಂಶತಿತಮಃ ಸರ್ಗಃ



---

೩೦. ರಾಕ್ಷಸರಿಗೂ ವಾನರರಿಗೂ ಈ ರೀತಿಯಾಗಿ ಅಲ್ಲಿ ನಡೆದ ಯುದ್ಧದಲ್ಲಿ ಕೋಲಾಹಲವುಂಟಾಯಿತು. ಈ ಯುದ್ಧದಲ್ಲಿ ರಾಕ್ಷಸರೆಲ್ಲರೂ ಸೋತು ಹೋದರು. ವಾನರರು ಗೆದ್ದು ಸಂತೋಷದಿಂದ ಕೋಲಾಹಲ ಮಾಡುತ್ತಿದ್ದರು.

೩೧. ಮಹಾ ಬಲಿಷ್ಠರಾದ ಆ ರಾಕ್ಷಸರು ಈ ರೀತಿಯಾಗಿ ನಾಶಹೊಂದಲು ಮಹರ್ಷಿಗಳೂ ದೇವಾದಿಗಳೂ ಸಂತೋಷದಿಂದ ಕೂಗಿದರು. ಇದರಿಂದಲೂ ಕೂಡ ಆ ಕಪಿಗಳು ಸಂತೋಷಗೊಂಡು ನೆಗೆದಾಡುತ್ತ ಸಿಂಹನಾದವನ್ನು ಮಾಡುತ್ತಿದ್ದವು.

ಇಂತು ವಾಲ್ಮೀಕಿಋಷಿಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಸಂಕುಲ ಯುದ್ಧ ವರ್ಣನವೆಂಬ
ಇಪ್ಪತ್ತನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅದ್ಭುತ ರಾಮಾಯಣೇ

## ಅಥ ಏಕವಿಂಶತಿತಮಃ ಸರ್ಗಃ



ತತೋ ರಥಂ ಮಾರುತತುಲ್ಯವೇಗ
ಮಾರುಹ್ಯ ಶಕ್ತಿಂ ನಿಶಿತಾಂ ಪ್ರಗೃಹ್ಯ ।
ಸ ರಾವಣೋ ರಾಮಬಲಂ ಪ್ರಹೃಷ್ಟಂ
ವಿವೇಶ ಮೀನೋ ಹಿ ಯಥಾರ್ಣವೌಘಂ ॥ ೧ ॥

ಸ ವಾನರಾನ್ ಹೀನಬಲಾನ್ನಿರೀಕ್ಷ್ಯ
ಪ್ರಾಣೇನ ದೀಪ್ತೇನ ರರಾಜ ರಾಜಾ ।
ಏಕಕ್ಷಣೇನೇಂದ್ರರಿಪುರ್ಮಹಾತ್ಮಾ
ನಿಹಂತುಮೈಚ್ಛನ್ನರವಾನರಾಂಶ್ಚ ॥ ೨ ॥

### ಇಪ್ಪತ್ತೊಂದನೆಯ ಸರ್ಗವು.

೧. ಸಹಸ್ರಕಂಠ ರಾವಣನು ಈ ರೀತಿಯಾಗಿ ತನ್ನ ಸೈನ್ಯವು ಭಗ್ನವಾದುದನ್ನು ಕೇಳಿ ಬಹು ವೇಗವುಳ್ಳ ರಥವನ್ನು ಏರಿ ಹರಿತವಾದ ಶಕ್ತ್ಯಾಯುಧವನ್ನು ಹಿಡಿದು ಸಂತೋಷನಿಂದ ಕುಣಿಯುತ್ತಿರುವ ರಾಮನ ಸೇನೆಯನ್ನು ಹೊಕ್ಕನು. ಇದನ್ನು ನೋಡಿದರೆ ತಿಮಿತಿಮಿಂಗಿಲಗಳು ಸಮುದ್ರವನ್ನು ಹೊಕ್ಕಂತಿದ್ದಿತು.

೨. ಆ ಸಹಸ್ರಕಂಠನು ಹೀನಬಲರಾದ ಆ ವಾನರರನ್ನು ನೋಡಿ ಅವರು ಸಂತೋಷದಿಂದ ಇರುವುದನ್ನು ನೋಡಿ ಪ್ರಕಾಶಿಸಿದನು. ಒಡನೆಯೇ ಈ ರಾವಣನು ಆ ವಾನರರನ್ನು ಕೊಲ್ಲಲು ಮನಸ್ಸುಮಾಡಿದನು.

**ಮನಸಾ ಚಿಂತಯಾಮಾಸ ಸಹಸ್ರಕಂಧರಃ ಸ್ವರಾಟ್ ।**
**ಏತೇ ಕ್ಷುದ್ರಾಃ ಸಮಾಯಾತಾಃ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩ ॥**

**ದ್ವೀಪಾಂತರಂ ಮಹತ್ಪ್ರಾಪ್ಯ ಮಮ ಯುದ್ಧಾಭಿಕಾಂಕ್ಷಿಣಃ ।**
**ಕಿಂ ಸ್ಯಾನ್ಮಮ ಹತೈಃ ಕ್ಷುದ್ರೈಃ ನರರಾಕ್ಷಸವಾನರೈಃ ॥ ೪ ॥**

**ಯಸ್ಮಾದ್ದೇಶಾತ್ಸಮಾಯಾತಾಸ್ತಂ ದೇಶಂ ಪ್ರಾಪಯಾಮ್ಯಹಂ ।**
**ಕ್ಷುಲ್ಲಕೇಷು ಶರಾಘಾತಂ ನ ಪ್ರಶಂಸಂತಿ ಪಂಡಿತಾಃ ॥ ೫ ॥**

**ಇತಿ ಸಂಚಿಂತ್ಯ ಧನುಷಾ ವಾಯವ್ಯಾಸ್ತ್ರಂ ಯುಯೋಜ ಹ ।**
**ತೇನಾಸ್ತ್ರೇಣ ನರಾ ಋಕ್ಷಾ ವಾನರಾ ರಾಕ್ಷಸಾ ಹಿ ತೇ ॥ ೬ ॥**

**ಯಸ್ಮಾದ್ಯಸ್ಮಾತ್ಸಮಾಯಾತಾಸ್ತಂ ತಂ ದೇಶಂ ಪ್ರಯಾಪಿತಾಃ ।**
**ಗಳಹಸ್ತಿಕಯಾ ವಿಪ್ರ ಚೋರಾ ರಾಜಭಟಾ ಇವ ॥ ೭ ॥**

---

೩. ಆಗ ಆ ರಾಜನಾದ ಸಹಸ್ರಕಂಠನು ಇವರು ಅಲ್ಪರು. ತಮ್ಮ ಧನವನ್ನೂ, ಪ್ರಾಣಗಳನ್ನೂ, ಬಿಟ್ಟು ಬಂದಿದ್ದಾರೆ ಎಂದು ತನ್ನ ಮನಸ್ಸಿನಲ್ಲಿಯೇ ಯೋಚಿಸಿದನು.

೪. ನನ್ನೊಡನೆ ಯುದ್ಧಮಾಡಲು ಈ ದ್ವೀಪಕ್ಕೆ ಬಂದಿರುವರು. ಈ ಅಲ್ಪವಾದ ನರರನ್ನೂ ರಾಕ್ಷಸರನ್ನೂ ಕೊಂದುದರಿಂದ ನನಗೇನೂ ಲಾಭವಿಲ್ಲ.

೫. ಇವರು ಯಾವ ದೇಶದಿಂದ ಬಂದಿರುವರೋ ಅದೇ ದೇಶಕ್ಕೆ ಬೀಳುವಂತೆ ಮಾಡುತ್ತೇನೆ. ಅಲ್ಪರಲ್ಲಿ ಬಾಣದ ಹೊಡೆತವನ್ನು ಪಂಡಿತರು ಸಮ್ಮತಿಸುವುದಿಲ್ಲ.

೬. ಹೀಗೆಂದು ಯೋಚಿಸಿ ಧನುಸ್ಸಿನಲ್ಲಿ ವಾಯುವ್ಯಾಸ್ತ್ರವನ್ನು ಹೂಡಿದನು. ಆ ಅಸ್ತ್ರದಿಂದ ಕಪಿಗಳು, ಕರಡಿಗಳು, ರಾಕ್ಷಸರು, ನರರು ಎಲ್ಲೆಲ್ಲಿಂದ ಬಂದಿದ್ದರೋ ಅಲ್ಲಲ್ಲಿಗೆ ಎಸೆದುಬಿಟ್ಟನು. ಇದನ್ನು ನೋಡಿ ರಾಜ ಭಟರು ಕಳ್ಳರನ್ನು ಕತ್ತು ಹಿಡಿದು ನೂಕಿಕೊಂಡು ಹೋಗುವಂತೆ ಕಾಣುತ್ತಿದ್ದಿತು.

೭. ಅವರೆಲ್ಲರೂ ತಮ್ಮತಮ್ಮ ಜಾಗಕ್ಕೆ ಬಂದು ಬಿದ್ದರು. ಈ ಅಸ್ತ್ರದ ವೇಗವನ್ನು ನೋಡಿ ಆಶ್ಚರ್ಯಪಡುತ್ತ ತಾವು ಎಲ್ಲಿ ಇದ್ದೆವು? ಎಲ್ಲಿಗೆ ಬಂದೆವು? ಎಂಬುದನ್ನು ತಿಳಿಯದೆ ಇದು ಸ್ವಪ್ನವೆಂದು ಭಾವಿಸುತ್ತಿದ್ದರು.

**ತೇ ಸರ್ವೇ ಸ್ವಗೃಹಂಪ್ರಾಪ್ತಾ ಅಸ್ತ್ರವೇಗೇನ ವಿಸ್ಮಿತಾಃ ।**
**ಕ್ವ ಸ್ಥಿತಾಃ ಕ್ವ ಸಮಾಯಾತಾ ಮನ್ಯತ ಸ್ವಪ್ನ ಏವ ತ್ರೈಃ** ॥ ೮ ॥

**ಪ್ರಲಯಾನೀಲವೇಗೇನ ಅಸ್ತ್ರೇಣ ವಂಚಿತಾ ಭೃಶಂ ।**
**ಭರತೋ ಲಕ್ಷ್ಮಣಶ್ಚಾಪಿ ಶತ್ರುಘ್ನೋ ಹನುಮಾಂಸ್ತಥಾ** ॥ ೯ ॥

**ಸುಗ್ರೀವಾ ನಲನೀಲಾದ್ಯಾ ಹರಯೋಽನಿಲರಂಹಸಃ ।**
**ವಿಭೀಷಣಪುರೋಗಾಶ್ಚ ರಾಕ್ಷಸಾಃ ಕ್ರೂರವಿಕ್ರಮಾಃ** ॥ ೧೦ ॥

**ವಾನರಾಶ್ಚ ನರಾ ಋಕ್ಷಾ ರಾಕ್ಷಸಾ ಅಕ್ಷತಾ ಗೃಹಂ ।**
**ಪ್ರಾಪ್ಯಾತಿ ವಿಸ್ಮಿತಾಸ್ಸರ್ವೇ ಶೋಚಂತೋ ರಾಮಮೇವ ಹಿ** ॥ ೧೧ ॥

**ಪುಷ್ಕರೇ ಪುಷ್ಪಕೇ ತಿಷ್ಠನ್ ಸಸೀತೋ ರಾಘವಃ ಪರಂ ।**
**ಆಸ್ತೇ ಸ್ಮ ನಾಸ್ತ್ರವೇಗೋಽಯಂ ರಾಮಂ ಚಾಲಯಿತುಂ ಕ್ಷಮಃ** ॥ ೧೨ ॥

**ಮಹರ್ಷಯೋಽಪಿ ತತ್ರಾರ್ಸ ಕಿಮೇತದಿತಿವಿಸ್ಮಿತಾಃ ।**
**ಸಾಪಿ ಸೀತಾ ಮಹಾಭಾಗಾ ತತ್ರಾಸ್ತೇಽಸ್ಮ ಶುಚಿಸ್ಮಿತಾ** ॥ ೧೩ ॥

**ಗಂಧರ್ವನಗರಾಕಾರಂ ದೃಷ್ಟ್ವಾ ರಾಮಬಲಂ ಮಹತ್ ।**
**ಸ್ವಸ್ತೀತಿ ವಾದಿನಃ ಸೌಮ್ಯ ಶಾಂತಿಂ ಜೇಪುರ್ಮಹರ್ಷಯಃ** ॥ ೧೪ ॥

---

೮–೧೧. ಅವರೆಲ್ಲರೂ ಪ್ರಳಯಕಾಲದ ಗಾಳಿಯ ವೇಗವುಳ್ಳ ಆ ಅಸ್ತ್ರದಿಂದ ಬಹುವಾಗಿ ಮೋಸಹೋದರು. ಭರತ, ಲಕ್ಷ್ಮಣ, ಶತ್ರುಘ್ನ, ಹನುಮಂತ, ಸುಗ್ರೀವ, ನೀಲ, ನಲ, ವಿಭೀಷಣ ಮುಂತಾದ ಶೂರರು ತಮ್ಮತಮ್ಮ ಜಾಗವನ್ನು ನೋವಿಲ್ಲದೆ ಹೊಂದಿದರು. ಹಾಗೆ ಹೊಂದಿದುದಕ್ಕೆ ಆಶ್ಚರ್ಯ ಪಡುತ್ತಾ ರಾಮನ ಗತಿಏನಾಯಿತೋ ಎಂದು ಯೋಚಿಸುತ್ತಿದ್ದರು!

೧೨. ಆ ರಾಮನು ಸೀತೆಯೊಡನೆ ಆ ಪುಷ್ಕರ ದ್ವೀಪದಲ್ಲಿ ಪುಷ್ಪಕ ವಿಮಾನ ದಲ್ಲಿಯೇ ಇದ್ದನು, ಈ ಬಾಣದ ವೇಗವು ಅವನನ್ನು ಅಲ್ಲಾಡಿಸಲು ಸಮರ್ಥ ವಾಗದೆ ಹೋಯಿತು.

೧೩. ಮಹರ್ಷಿಗಳು ಆ ಬಾಣಕ್ಕೊಳಗಾಗದೆ ಇದೇನೆಂದು ಯೋಚಿಸುತ್ತ ಆಶ್ಚರ್ಯಗೊಂಡು ಅಲ್ಲಿಯೇ ಇದ್ದರು. ಮಹಾತ್ಮಳಾದ ಸೀತೆಯೂ ಕೂಡ ಅಲ್ಲಯೇ ಇದ್ದಳು.

೧೪. ಆಕಾಶದಲ್ಲಿ ಗಂಧರ್ವ ನಗರವು ಹೇಗೆ ಕಾಣುತ್ತಿದ್ದು ಕ್ಷಣಕಾಲದಲ್ಲಿಯೇ

ಅಂತರಿಕ್ಷಚರಾಸ್ಸರ್ವೇ ಹಾಹಾಕಾರಂ ಪ್ರಚಕ್ರಿರೇ ।
ದೇವಾ ಅಗ್ನಿಮುಖಾ ವಿಪ್ರ ಕಿಂ ಕೃತಂ ರಾವಣೇನ ಹಿ ॥ ೧೫ ॥

ಗರುಡಸ್ಥೋ ಯದಾ ವಿಷ್ಣೂ ರಾವಣಂ ಹಂತುಮಾಗತಃ ।
ಲೀಲಯಾ ಲವಣಾಂಭೋಧೌ ಕ್ಷಿಪ್ತೋ ವಿಷ್ಣುಃ ಸನಾತನಃ ॥ ೧೬ ॥

ಸಾಟ್ಟಹಾಸಂ ವಿನದ್ಯೋಚ್ಚೈಃ ರಕ್ಷಸಾ ವಾಮಪಾಣಿನಾ ।
ತತಃ ಪ್ರಭೃತಿ ದೇವಾಶ್ಚಾ ಗಂಧರ್ವಾಃ ಕಿನ್ನರಾ ನರಾಃ ॥ ೧೭ ॥

ಗಂಧಮಸ್ಯ ನ ಗೃಹ್ಣಂತಿ ಶಾರ್ದೂಲಸ್ಯೇವ ಜಂಬುಕಃ ।
ಸೋಽಯಂ ವಿಷ್ಣುರ್ದಶರಥಾಜ್ಜಾತೋ ದೇವಃ ಸನಾತನಃ ॥ ೧೮ ॥

ಅಸ್ಮಾಕಂ ಭಾಗಧೇಯೇನ ರಾಮೋ ಜಯತು ರಾವಣಂ ।
ಪರಸ್ಪರಂ ಸುರಾಸ್ಸರ್ವೇ ವದಂತೋಽಂರ್ಹಿತಾ ಸ್ಥಿತಾಃ ॥ ೧೯ ॥

---

ಮರೆಯಾಗುವುದೋ ಹಾಗೆ ಈ ರಾಮನ ಸೈನ್ಯವೆಲ್ಲವೂ ಒಂದೂ ಇಲ್ಲದಂತೆ ನಷ್ಟವಾದುದನ್ನು ನೋಡಿ ಮಹರ್ಷಿಗಳು ಸ್ವಸ್ತಿ ಸ್ವಸ್ತಿ ಎಂದು ಹೇಳುತ್ತ ಶಾಂತಿ ಮಂತ್ರವನ್ನು ಜಪಿಸುತ್ತಿದ್ದರು.

೧೫. ಅಂತರಿಕ್ಷದಲ್ಲಿ ಸಂಚಾರ ಮಾಡುವವರೆಲ್ಲರೂ ಹಾಹಾ ಎಂದು ಕೂಗಿ ಕೊಳ್ಳುತ್ತಿದ್ದರು. ಅಗ್ನಿಯೇ ಮುಂತಾದ ದೇವತೆಗಳು ರಾವಣನು ಎಂತಹ ಕೆಲಸ ವನ್ನು ಮಾಡಿದನು ಎಂದು ಆಶ್ಚರ್ಯ ಪಡುತ್ತಿದ್ದರು.

೧೬. ವಿಷ್ಣುವು ಗರುಡನಮೇಲೆ ಕುಳಿತು ಈ ಸಹಸ್ರಕಂಠ ರಾವಣನನ್ನು ಕೊಲ್ಲಲು ಬಂದಾಗ ಆ ರಾವಣನು ಬಹು ಸರಾಗವಾಗಿಯೇ ಆ ವಿಷ್ಣುವನ್ನು ಲವಣ ಸಮುದ್ರದಲ್ಲಿ ಬೀಳುವಂತೆ ಎಸೆದನು.

೧೭-೧೮. ಆದರೂ ಕೂಡ ಗಟ್ಟಿಯಾಗಿ ನಗುತ್ತ ಎಡಗೈನಿಂದ ಎಸೆದು ಬಿಟ್ಟನು. ಅದು ಮೊದಲುಗೊಂಡು ದೇವತೆಗಳೂ, ಗಂಧರ್ವರೂ, ಕಿನ್ನರರೂ, ನರರೂ ಕೂಡ ಸಿಂಹದ ವಾಸನೆಯನ್ನು ಕೂಡ ನರಿಯು ಮೂಸಿನೋಡಲಾಗದಂತೆ ಆ ರಾವಣನ ಸುದ್ದಿಯನ್ನೇ ಎತ್ತುತ್ತಲಿರಲಿಲ್ಲ. ಅದೇ ವಿಷ್ಣುವು ಈಗ ದಶರಥನ ಹೊಟ್ಟೆ ಯಲ್ಲಿ ಹುಟ್ಟಿರುವನು.

೧೯. ಹಾಗೆ ಹುಟ್ಟಿರುವ ವಿಷ್ಣುವಾದ ಈ ರಾಮನು ನಮ್ಮಗಳ ಅದೃಷ್ಟದಿಂದ

ನನರ್ದ ಚ ಸಹಸ್ರಾಕ್ಷಃ ಕ್ಷುದ್ರಂ ಮತ್ವಾ ಸ ರಾಘವಂ ।
ವಿಸಿಸ್ಮಿಯೇ ಚ ರಾಮೋಽಪಿ ತದ್ದೃಷ್ಟ್ವಾ ಕರ್ಮ ದುಷ್ಕರಂ ॥ ೨೦ ॥

ಕ್ರೋಧಮಾಹಾರಯಾಮಾಸ ರಾವಣಸ್ಯ ವಧಂ ಪ್ರತಿ ।
ತತಃ ಕಿಲಕಿಲಾಶಬ್ದಂ ಚಕ್ರೂರಾಕ್ಷಸಪುಂಗವಾಃ ॥ ೨೧ ॥

ಸ ರಾಘವಃ ಪದ್ಮಪಲಾಶಲೋಚನೋ
ಜ್ವಾಲ ಜಕೋಪೇನ ದ್ವಿಷಜ್ಜಯೇಕ್ಷಣಃ ।
ರಾಮಂ ಪ್ರಧರ್ತುಂ ನ ಶಶಾಕ ಮೇದಿನೀ
ಚಕಂಪಿರೇ ವಾರಿಧಯೋ ಗ್ರಹಾ ಅಪಿ ॥ ೨೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೆ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ಸೈನ್ಯವಿಕ್ಷೇಪಣಂ ನಾಮ
ಏಕವಿಂಶತಿತಮಃ ಸರ್ಗಃ

---

ಆ ರಾವಣನನ್ನು ಜಯಿಸಲಿ. ಈ ರೀತಿಯಾಗಿ ದೇವತೆಗಳೆಲ್ಲರೂ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತ ಮರೆಯಾಗಿದ್ದರು.

೨೦. ಸಹಸ್ರಾಕ್ಷನಾದ ಇಂದ್ರನು ರಾಘವನು ಬಲಹೀನನು. ಕ್ಷುದ್ರನು ಎಂಬದಾಗಿ ಕೂಗಿದನು. ರಾಮನೂ ಕೂಡ ಆ ಸಹಸ್ರಕಂಠನ ಈ ಕೆಲಸವನ್ನು ನೋಡಿ ಆಶ್ಚರ್ಯಗೊಂಡನು.

೨೧. ಆ ಶ್ರೀರಾಮನು ರಾವಣನನ್ನು ಕೊಲ್ಲಲು ಬಹುದಾಗಿ ಕೋಪವನ್ನು ಹೊಂದಿದನು. ಆಗ ಆ ಕೋಪವನ್ನು ನೋಡಿದ ರಾಕ್ಷಸರೆಲ್ಲರೂ ಕಿಲ ಕಿಲ ಶಬ್ಧವನ್ನು ಮಾಡಿದರು.

೨೨. ಪದ್ಮದಳದಂತೆ ಕಣ್ಣುಗಳುಳ್ಳ ಆ ರಾಘವನು ಶತ್ರುವನ್ನು ಜಯಿಸಬೇಕೆಂಬ ಕೋಪದಿಂದ ಜ್ವಲಿಸಿದನು. ಆಗ ರಾಮನನ್ನು ಹೊತ್ತುಕೊಳ್ಳಲು ಭೂಮಿಗೆ ಸಾಧ್ಯವಾಗಲಿಲ್ಲ. ಸಮುದ್ರಗಳೂ ಗ್ರಹಗಳೂ ನಡಗಿದವು.

ಇಂತು ವಾಲ್ಮೀಕಿಋಷಿಯಿಂದ ಹೇಳಲ್ಪಟ್ಟ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಸೈನ್ಯವಿಕ್ಷೇಪಣವೆಂಬ
ಇಪ್ಪತ್ತೊಂದನೆಯ ಸರ್ಗವು

ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ಅಥ ದ್ವಾವಿಂಶತಿತಮಃ ಸರ್ಗಃ

ವಿನರ್ದಂತಂ ರಿಪುಂ ದೃಷ್ಟ್ವಾ ರಾಮಃ ಶತ್ರುನಿಬರ್ಹಣಃ ।
ಜಜ್ವಾಲ ಚ ಸ ಕೋಪೇನ ರಕ್ಷಸಾಂ ಸಹಜೋ ರಿಪುಃ ॥ ೧ ॥

ವಿಚಕರ್ಷ ಧನುಶ್ಶ್ರೇಷ್ಠಂ ಪ್ರಲಯಾನಲಸನ್ನಿಭಂ ।
ವೇಗೇನ ಬಾಣಾಂಶ್ಚಿಕ್ಷೇಪ ರಕ್ಷಸಾಂ ಮರ್ಮಸು ಪ್ರಭುಃ ॥ ೨ ॥

ತಿಲಶಃ ಖಂಡಯಂತಿ ಸ್ಮ ಬಾಣಾ ರಾಕ್ಷಸಪುಂಗವಾನ್ ।
ಕದಾ ಧನುಷಿ ಸಂಧತ್ತೇ ಕದಾ ವಿಸೃಜತಿ ಪ್ರಭುಃ ॥ ೩ ॥

---

## ಇಪ್ಪತ್ತೆರಡನೆಯ ಸರ್ಗ

೧. ಶತ್ರುಘಾತಕನಾದ ರಾಮನು ತನ್ನ ಶತ್ರುವಾದ ಸಹಸ್ರಕಂಠ ರಾವಣನು ಕುಣಿಯುತ್ತಿರುವುದನ್ನು ನೋಡಿ ಕೋಪದಿಂದ ಬಹುವಾಗಿ ಜ್ವಲಿಸಿದನು. ಇವನು ರಾಕ್ಷಸರಿಗೆ ಸಹಜ ಶತ್ರುವಾದುದರಿಂದ ತಡೆಯಲಾರದಷ್ಟು ಕೋಪವು ಬಂದಿತು.

೨. ಆ ರಾಮನು ಪ್ರಳಯಕಾಲದ ಅಗ್ನಿಗೆ ಸಮವಾದ ಧನುಸ್ಸನ್ನು ಎಳೆಯುತ್ತ ಆ ರಾಕ್ಷಸರ ಮರ್ಮಸ್ಥಾನಗಳಿಗೆ ಬಹು ವೇಗದಿಂದ ಬಾಣಗಳನ್ನು ಬಿಟ್ಟನು.

೩–೪. ಆ ಶ್ರೀರಾಮನ ಬಾಣಗಳು ರಾಕ್ಷಸರನ್ನು ಚೂರುಚೂರಾಗಿ ಕತ್ತರಿಸುತ್ತಲಿದ್ದುವು. ಆ ರಾಮನು ಬಾಣವನ್ನು ಧನುಸ್ಸಿನಲ್ಲಿ ಹೂಡುವುದು ಯಾವಾಗ?

ನಾಂತರಂ ದದೃಶೇ ಕೈಶ್ಚಿತ್ ಛಿನ್ದಾಸ್ಯರರಯಃ ಪರಂ ।
ಜಘಾನ ರಾಕ್ಷಸಾನ್ ರಾಮೋ ರುದ್ರಃ ಪಶುಗಣಾನಿವ ॥ ೪ ॥

ತದ್ದೃಷ್ಟ್ವಾ ದುಷ್ಕರಂ ಕರ್ಮ ಕೃತಂ ರಾಮೇಣ ರಾವಣಃ ।
ಅನೀಕಾಗ್ರಂ ಸಮಾಸಾದ್ಯ ಯುಯುಧೇ ರಾಘವೇಣ ಹಿ ॥ ೫ ॥

ರೇ ರೇ ರಾಕ್ಷಸಸೇನಾನ್ಯಃ ಪ್ರೇಕ್ಷಕಾ ಇವ ತಿಷ್ಠತ ।
ಅಹಮೇಕೋ ಹನಿಷ್ಯಾಮಿ ನರಮಾಕಸ್ಮಿಕಂ ರಿಪುಂ ॥ ೬ ॥

ಅದ್ಯ ನಿರ್ಮಾನವಾಂ ಪೃಥ್ವೀಂ ನಿರ್ದೇವಂ ತ್ರಿದಿವಂ ತಥಾ ।
ಕರಿಷ್ಯಾಮ್ಯಹಮೇವೈಕಃ ಶೋಷಯಿಷ್ಯಾಮಿ ವಾರಿಧೀನ್ ॥ ೭ ॥

ಪರ್ವತಾನ್ ಚೂರ್ಣಯಿಷ್ಯಾಮಿ ಪಾತಯಿಷ್ಯಾಮಿ ವೈ ಗ್ರಹಾನ್ ।
ಇತ್ಯುಕ್ತ್ವಾ ರಾಕ್ಷಸಶ್ರೇಷ್ಠೋ ರಾಮಂ ಯೋದ್ಧುಮಥಾಹ್ವಯತ್ ॥ ೮ ॥

---

ಬಿಡುವುದು ಯಾವಾಗ? ಎಂಬುದೇ ತಿಳಿಯುತ್ತಿರಲಿಲ್ಲ. ಅದರೆ ರುದ್ರನು ಪ್ರಾಣಿಗಳನ್ನು ಕೊಂದುಹಾಕುವಂತೆ ಆ ರಾಕ್ಷಸರನ್ನು ಕೊಂದು ಹಾಕುತ್ತಲಿದ್ದನು.

೫. ರಾಘವನು ಈ ರೀತಿಯಾಗಿ ತಡೆಯಲಸಾಧ್ಯವಾಗಿ ಉಗ್ರವಾಗಿ ಹೊಡೆಯುತ್ತಿರುವುದನ್ನು ನೋಡಿ ರಾವಣನು ಸೈನ್ಯದ ಮುಂಭಾಗಕ್ಕೆ ಬಂದು ಆ ರಾಮನ ಎದುರಿಗೆ ಯುದ್ಧಕ್ಕೆ ನಿಂತನು.

೬. ಎಲೈ ಸೇನಾಧಿಪತಿಗಳಿರಾ! ನೀವು ಸುಮ್ಮನಿರಿ. ಅಲ್ಲದೆ ಸಾಕ್ಷಿಗಳಂತೆ ನೋಡುತ್ತಿರಿ. ಅಕಸ್ಮಾತ್ತಾಗಿ ಬಂದಿರುವ ಈ ಶತ್ರುವನ್ನು ನಾನೊಬ್ಬನೇ ಕೊಂದು ಹಾಕುತ್ತೇನೆ.

೭–೮. ಈಗಲೇ ಭೂಮಿಯಲ್ಲಿ ಮನುಷ್ಯರಿಲ್ಲದಂತೆಯೂ ಸ್ವರ್ಗದಲ್ಲಿ ದೇವತೆಗಳಿಲ್ಲದಂತೆಯೂ ನಾನೊಬ್ಬನೇ ಮಾಡುತ್ತೇನೆ. ಸಮುದ್ರಗಳೆಲ್ಲವನ್ನೂ ಒಣಗಿಸುತ್ತೇನೆ. ಪರ್ವತಗಳನ್ನು ಪುಡಿಪುಡಿ ಮಾಡುತ್ತೇನೆ. ಗ್ರಹಗಳನ್ನು ಅಂತರಿಕ್ಷದಿಂದ ಕೆಡಗುತ್ತೇನೆ. ಎಂಬದಾಗಿ ಹೇಳುತ್ತಾ ಆ ಶ್ರೀರಾಮನನ್ನು ಯುದ್ಧಕ್ಕೋಸ್ಕರ ಕರೆದನು.

ಶ್ತ್ವಾಮುದ್ಯಖಡ್ಗೇನಾಚ್ಛಿದ್ಯ ತರ್ಪಯಿಷ್ಯಾಮಿ ಚಾನುಗಾನ್ ।
ನೇಯಂ ಲಂಕಾಪುರೀ ರಾಮ ನಾಹಂ ಚ ದಶಕಂಧರಃ ॥ ೯ ॥

ಶಿರಸ್ತೇ ಪ್ರೋಥಯಿಷ್ಯಾಮಿ ಗದಯಾ ರಘುನಂದನ ।
ಕಪಿತ್ಥಮಿವ ಕಾಕುತ್ಸ್ಥ ಕರೀ ಮದಕಲಃ ಕಿಲ ॥ ೧೦ ॥

ಇತ್ಯುಕ್ತ್ವಾ ರಾವಣೋ ಯುದ್ಧಂ ರಾಮೇಣ ಸಹ ಚಾರಭತ್ ।
ತದಭೂದ್ದ್ವೈರಥಂ ಯುದ್ಧಂ ಬಲಿವಾಸವಯೋರಿವ ॥ ೧೧ ॥

ರಾವಣಂ ಪ್ರಾಪ್ಯ ರಾಮೋಽಪಿ ಪರಂ ಹರ್ಷಮುಪಾಗಮತ್ ।
ತದಭೂದದ್ಭುತಂ ಯುದ್ಧಂ ದ್ವಯೋರ್ವೈ ರೋಮಹರ್ಷಣಂ ॥ ೧೨ ॥

ರಾಮಸ್ಯ ಚ ಮಹಾಬಾಹೋ ಬಲಿನೋ ರಾವಣಸ್ಯ ಚ ।
ಗಾಂಧರ್ವೇಣ ಚ ಗಾಂಧರ್ವಂ ದೈವಂ ದೈವೇ ನ ರಾಘವಃ ॥ ೧೩ ॥

---

೯. ಎಲೈ ರಾಮನೆ! ನಿನ್ನನ್ನು ಈ ಕತ್ತಿಯಿಂದ ಕತ್ತರಿಸಿ ನನ್ನ ಸಹಾಯಕ್ಕಿರುವ ಇವರೆಲ್ಲರಿಗೂ ತೃಪ್ತಿಯಾಗುವಂತೆ ಮಾಡುತ್ತೇನೆ. ಎಲೈ ರಾಮನೆ! ಇದು ಲಂಕಾಪುರಿಯೆಂದು ತಿಳಿಯಬೇಡ. ನಾನು ದಶಕಂಠನೆಂದೂ ತಿಳಿಯಬೇಡ.

೧೦. ಮದ್ದಾನೆಯು ಬೇಲದ ಕಾಯನ್ನು ಒಡೆದು ಹಾಕುವಂತೆ ನಿನ್ನ ತಲೆಯನ್ನು ಈ ಗದೆಯಿಂದ ಒಡೆದು ಹಾಕುತ್ತೇನೆ.

೧೧. ಹೀಗೆಂದು ಹೇಳುತ್ತ ಆ ರಾವಣನು ರಾಮನೊಡನೆ ಯುದ್ಧಮಾಡಲು ಮೊದಲು ಮಾಡಿದನು. ಆ ಯುದ್ಧವು ಬಲಿಗೂ ಇಂದ್ರನಿಗೂ ನಡೆಯುತ್ತಿದಂತೆ ಇವರಿಬ್ಬರಿಗೂ ನಡೆಯಿತು. ಮತ್ತೊಬ್ಬರೂ ಆಯುದ್ಧದಲ್ಲಿ ಪ್ರವೇಶಿಸದೆ ಇದ್ದರು.

೧೨. ರಾಮನೂ ಕೂಡ ರಾವಣನು ಯುದ್ಧಕ್ಕೆ ಬಂದುದನ್ನು ನೋಡಿ ಬಹುವಾಗಿ ಸಂತೋಷಪಟ್ಟನು. ಅವರಿಬ್ಬರ ಆ ಯುದ್ಧವು ಎಲ್ಲರಿಗೂ ರೋಮಾಂಚವನ್ನುಂಟುಮಾಡುವಂತೆ ನಡೆಯಿತು.

೧೩–೧೪. ಆ ವೀರರಾದ ರಾಮರಾವಣರು ಗಾಂಧರ್ವಾಸ್ತ್ರಗಳನ್ನು ಗಾಂಧರ್ವಾಸ್ತ್ರಗಳಿಂದಲೂ, ದೈವಿಕಾಸ್ತ್ರಗಳನ್ನು ದೈವಿಕಾಸ್ತ್ರಗಳಿಂದಲೂ, ಉಪಶಮನ ಮಾಡುತ್ತಿದ್ದರು

**ಅಸ್ತ್ರಂ ರಾಕ್ಷಸರಾಜಸ್ಯ ಜಘಾನ ಪರಮಾಸ್ತ್ರವಿತ್ ।**
**ಅಸ್ತ್ರಯುದ್ಧೇ ಚ ಪರಮೋ ರಾವಣೋ ರಾಕ್ಷಸಾಧಿಪಃ ॥ ೧೪ ॥**

**ಸಸರ್ಜ ಪರಮಕ್ರುದ್ಧಃ ಪನ್ನಗಾಸ್ತ್ರಂ ಸ ರಾಘವೇ ।**
**ತೇ ರಾವಣ ಧನುರ್ಮುಕ್ತಾಃ ಶರಾಃ ಕಾಂಚನಭೂಷಿತಾಃ ॥ ೧೫ ॥**

**ಅಭ್ಯವರ್ತಂತ ಕಾಕುತ್ಸ್ಥಂ ಸರ್ಪಾ ಭೂತ್ವಾ ಮಹಾವಿಷಾಃ ।**
**ತೇ ಸರ್ಪವದನಾ ಘೋರಾ ವಮಂತೋಜ್ವಲನಂ ಮುಖೈಃ ॥ ೧೬ ॥**

**ರಾಮಮೇವಾಭ್ಯವರ್ತಂತ ವ್ಯಾದಿತಾಸ್ಯಾ ಭಯಾವಹಾಃ ।**
**ತೈರ್ವಾಸುಕಿಸಮಸ್ಪರ್ಶೈರ್ದೀಪ್ತಭೋಗೈರ್ಮಹಾವಿಷೈಃ ॥ ೧೭ ॥**

**ದಿಶಶ್ಚ ವಿದಿಶಶ್ಚೈವ ಸಮಂತಾದಾವೃತಾ ರಾಭೃಶಂ ।**
**ರಾಮಃ ಸಂಪತತೋ ದೃಷ್ಟ್ವಾ ಪನ್ನಗಾಂಸ್ತಾರ್ಕ್ಷ ಸಹಸ್ರಶಃ ॥ ೧೮ ॥**

---

ಆ ಸಹಸ್ರಕಂಠನು ಬಿಡುತ್ತಿದ್ದ ಅಸ್ತ್ರಗಳನ್ನು ರಾಘವನು ಖಂಡಿಸುತ್ತಿದ್ದನು. ಈ ರಾವಣನೂ ಕೂಡ ಅಸ್ತ್ರ ಯುದ್ಧದಲ್ಲಿ ಬಹು ಶೂರನಾಗಿದ್ದನು.

೧೫. ಆ ರಾವಣನು ರಾಮನ ಮೇಲೆ ಕೋಪಗೊಂಡು ಸರ್ಪಾಸ್ತ್ರವನ್ನು ಬಿಟ್ಟನು. ರಾವಣನ ಧನಸ್ಸಿನಿಂದ ಹೊರಟ ಆ ಬಾಣಗಳು ಮಹಾ ವಿಷವುಳ್ಳ ಸರ್ಪಗಳಾಗಿ ರಾಮನಮೇಲೆ ಬಿದ್ದವು.

೧೬. ಆ ಸರ್ಪ ಮುಖದಂತೆ ಮುಖವುಳ್ಳ ಆ ಬಾಣಗಳು ಬಾಯಿಯಿಂದ ವಿಷವನ್ನುಗುಳುತ್ತ ಬಾಯಿಯನ್ನು ಬಿಟ್ಟುಕೊಂಡು ಭಯವನ್ನುಂಟುಮಾಡುತ್ತ ರಾಮನ ಮೇಲೆ ಬಿದ್ದವು.

೧೭. ವಾಸುಕಿಗೆ ಸಮವಾದ ಮಹಾ ವಿಷವುಳ್ಳ ಹೆಡೆಯನ್ನು ಬಿಟ್ಟುಕೊಂಡು ಬರುತ್ತಿರುವ ಆ ಬಾಣದ ಹಾವುಗಳಿಂದ ದಿಕ್ಕುಗಳೂ ವಿದಿಕ್ಕುಗಳೂ ಎಲ್ಲಾ ಕಡೆಯಲ್ಲಿಯೂ ಆವರಿಸಲ್ಪಟ್ಟುವು.

೧೮. ರಾಮನು ತನ್ನ ಮೇಲೆ ಸಾವಿರಗಟ್ಟಲೆ ಬರುತ್ತಿರುವ ಆ ಹಾವುಗಳನ್ನು ನೋಡಿ ರಣರಂಗದಲ್ಲಿ ಸುಪರ್ಣಾಸ್ತ್ರವನ್ನು ಬಿಟ್ಟನು.

ಸೌಪರ್ಣಮಸ್ತ್ರಂ ತದ್ಘೋರಂ ಪುನಃ ಪ್ರಾವರ್ತಯದ್ರಣೇ ।
ರಾಮೇಣ ಚ ಶರಾ ಮುಕ್ತಾ ರುಕ್ಮಪುಂಖಾಃ ಶಿಲಾಶಿತಾಃ ॥ ೧೯ ॥

ಸುಪರ್ಣಾಃ ಕಾಂಚನಾ ಭೂತ್ವಾ ವಿಚೇರುಃ ಸರ್ಪಶತ್ರವಃ ।
ತೇ ತಾನ್ ಶತ್ರುಶರಾನ್ ಜಘ್ನುಃ ಸರ್ಪರೂಪಾನ್ ಮಹಾವಿಷಾನ್ ॥ ೨೦ ॥

ಸುಪರ್ಣರೂಪಾ ರಾಮಸ್ಯ ವಿಶಿಖಾಃ ಕಾಮರೂಪಿಣಃ ।
ಅಸ್ತ್ರೇ ಪ್ರತಿಹತೇ ಕ್ರುದ್ಧೋ ರಾವಣೋ ರಾಕ್ಷಸಾಧಿಪಃ ॥ ೨೧ ॥

ಅಭ್ಯವರ್ಷತ್ತದಾ ರಾಮಂ ಘೋರಾಭಿಶ್ಶಾಶ್ಮವೃಷ್ಟಿಭಿಃ ।
ತತಶ್ಶರಸಹಸ್ರೇಣ ಪುನರಕ್ಲಿಷ್ಟಕಾರಿಣಂ ॥ ೨೨ ॥

ರಾಮಬಾಣಾನಭ್ಯಹನದ್ಘೋರಾಭಿಃ ಶರವೃಷ್ಟಿಭಿಃ ।
ವಿಷೇದುರ್ದೇವಗಂಧರ್ವಾ ಶ್ಚಾರಣಾಃ ಪಿತರಸ್ತಥಾ ॥ ೨೩ ॥

---

೧೯–೨೦. ರಾಮನು ಚಿನ್ನದ ಹಿಡಿಗಳುಳ್ಳ ಮಸೆದಿದ್ದ ಆ ಬಾಣಗಳಲ್ಲಿ ಗಾರುಡ ಮಂತ್ರವನ್ನು ಅಭಿಮಂತ್ರಿಸಿ ಬಿಡಲು ಸರ್ಪ ಶತ್ರುಗಳಾದ ಆ ಗರುಡಗಳು ಆ ರಣರಂಗದಲ್ಲೆಲ್ಲಾ ಸುತ್ತಾಡುತ್ತಲಿದ್ದುವು ಮತ್ತು ಆ ಗರುಡಗಳು ಶತ್ರುಗಳಾದ ಸರ್ಪಗಳನ್ನು ನಾಶ ಮಾಡಿದುವು.

೨೧. ಶ್ರೀರಾಮನು ಬಿಟ್ಟ ಆ ಕಾಮರೂಪಿಗಳಾದ ಬಾಣಗಳು ಆ ಸರ್ಪಗಳನ್ನು ಕೊಂದು ರಣಾಂಗಣದಲ್ಲೆಲ್ಲಾ ಹರಡಿಕೊಂಡುವು. ತನ್ನ ಅಸ್ತ್ರವು ನಾಶವಾದುದನ್ನು ನೋಡಿ ರಾವಣನು ಬಹುವಾಗಿ ಕಲ್ಲುಗಳ ಮಳೆಯನ್ನು ರಾಮನ ಮೇಲೆ ಸುರಿಸಿದನು.

೨೨–೨೩. ಆ ಕಲ್ಲಿನ ಮಳೆಯನ್ನು ಸುರಿಸುದುದಲ್ಲದೆ ಮತ್ತೆ ಸಾವಿರ ಬಾಣಗಳನ್ನು ಅವನ ಮೇಲೆ ಬಿಟ್ಟನು. ಇವುಗಳು ಆ ರಾಮನ ಘೋರವಾದ ಬಾಣಗಳನ್ನು ನಾಶ ಮಾಡಿದುವು. ಆಗ ದೇವತೆಗಳೂ, ಗಂಧರ್ವರೂ, ಚಾರರೂ, ಪಿತೃಗಳೂ ನೋಡಿ ದುಃಖಿಸಿದರು.

ರಾಮಮಾರ್ತಂ ತದಾ ದೃಷ್ಟ್ವಾ ಸಿದ್ಧಾಶ್ಚ ಪರಮರ್ಷಯಃ ।
ರಾಮಚಂದ್ರಮಸಂದೃಷ್ಟ್ವಾ ಗ್ರಸ್ತಂ ರಾವಣರಾಹುಣಾ ॥ ೨೪ ॥

ಪ್ರಾಜಾಪತ್ಯಂ ಚ ನಕ್ಷತ್ರಂ ರೋಹಿಣೀಂ ಶಶಿನಃ ಪ್ರಿಯಾಂ ।
ಸಮಾಕ್ರಮ್ಯ ಬುಧಸ್ತಸ್ಥೌ ಪ್ರಜಾನಾಮಹಿತೇ ರತಃ ॥ ೨೫ ॥

ಸಧೂಮಃ ಪರಿವೃತ್ತೋರ್ಮಿಃ ಪ್ರಜ್ವಲನ್ನಿವಸಾಗರಃ ।
ಉತ್ಪಪಾತ ತತಃ ಕ್ರುದ್ಧಃ ಸ್ಪೃಶನ್ನಿವ ದಿವಾಕರಂ ॥ ೨೬ ॥

ನಷ್ಟರೂಪಶ್ಚ ಪರುಷೋ ಮಂದರಶ್ಮಿರ್ದಿವಾಕರಃ ।
ಅದೃಶ್ಯತ ಕಬಂಧಾಂಕಃ ಸಂಸಕ್ತೋ ಧೂಮಕೇತುನಾ ॥ ೨೭ ॥

ಖುಕ್ತಾಶ್ಚ ಖರನಿರ್ಘೋಷಾ ಗಗನೇ ಪುರುಷಾಧಮಾಃ ।
ಔತ್ಪಾತಿಕಾನಿ ನರ್ದಂತಃ ಸಮಂತಾತ್ಪರಿಚಕ್ರಮುಃ ॥ ೨೮ ॥

---

೨೪. ರಾಮನೆಂಬ ಚಂದ್ರನು ರಾವಣನೆಂಬ ರಾಹುವಿನಿಂದ ಹಿಡಿಯಲ್ಪಟ್ಟು ದನ್ನು ನೋಡಿ ಸಿದ್ಧರೂ. ಪರಮಋಷಿಗಳೂ, ಬಹುವಾಗಿ ದುಃಖಗೊಂಡರು.

೨೫. ಪ್ರಜಾಪತ್ಯದೇವತಾಕವಾದ ಚಂದ್ರನಿಗೆ ಪ್ರೀತಿಪಾತ್ರವಾದ ರೋಹಿಣಿ ನಕ್ಷತ್ರವನ್ನು ಬುಧನು ಆಕ್ರಮಿಸಿಕೊಂಡು ಪ್ರಜೆಗಳಿಗೆ ಅಹಿತವಾಗಲೆಂದು ನಿಂತು ಕೊಂಡನು.

೨೬. ಭೂಮಿಯೆಲ್ಲವೂ ಕೂಡ ಹೊಗೆಯಿಂದ ಮುಚ್ಚಿಕೊಂಡಂತೆ ಇದ್ದಿತು. ಸಮುದ್ರಗಳು ಉರಿಯುವಂತೆ ಕಂಡುಬಂದುವು. ಮತ್ತು ಆ ಸಮುದ್ರಗಳು ಸೂರ್ಯ ನನ್ನು ಮುಟ್ಟುವಂತೆ ಮೇಲಕ್ಕುಕ್ಕುವಂತೆ ಕಂಡು ಬಂದುವು.

೨೭. ಸೂರ್ಯನು ಒಂದು ವೇಳೆ ಕಾಂತಿ ಹೀನನಾಗಿಯೂ, ಒಂದೊಂದು ವೇಳೆ ಉಗ್ರನಾಗಿಯೂ, ಒಂದೊಂದು ವೇಳೆ ಕಾಣದಂತೆಯೂ ಆದನು. ಆ ಸೂರ್ಯನು ಧೂಮಕೇತುವಿನಿಂದ ಆಕ್ರಮಿಸಲ್ಪಟ್ಟು ತನ್ನೊಳಗೆ ಮುಂಡವಿದ್ದಂತೆ ಕಂಡು ಬಂದನು

೨೮. ಕರಡಿ, ನಾಯಿ, ಕತ್ತೆ, ಇವುಗಳ ಕೂಗೂ ಮತ್ತೆ ಅಯೋಗ್ಯರ ಅಳುವೂ ಉತ್ಪಾತಗಳನ್ನು ತೋರಿಸುವುವುಗಳಾಗಿ ಎಲ್ಲಾ ಕಡೆಯಲ್ಲಿಯೂ ಹರಡಿಕೊಂಡವು.

ರಾಮೋಽಪಿ ಬದ್ಧ್ವಾ ಭ್ರುಕುಟಿಂ ಕ್ರೋಧಸಂರಕ್ತಲೋಚನಃ ।
ಕ್ರೋಧಂ ಚಕಾರ ಸುಭೃಶಂ ನಿರ್ದಹನ್ನಿವ ರಾಕ್ಷಸಂ ॥ ೨೯ ॥

ತಸ್ಯ ಕ್ರುದ್ಧಸ್ಯ ವದನಂ ದೃಷ್ಟ್ವಾ ರಾಮಸ್ಯ ಧೀಮತಃ ।
ಸರ್ವಭೂತಾನಿ ವಿತ್ರೇಸುಃ ಪ್ರಾಕಂಪತ ಮಹೀ ತದಾ ॥ ೩೦

ಸಿಂಹಶಾರ್ದೂಲವಾನ್ ಶೈಲಃ ಪ್ರಜಜ್ವಾಲ ಕುಲದ್ರುಮಃ ।
ಬಭೂವ ಚಾತಿಕ್ಷುಭಿತಃ ಸಮುದ್ರ ಇವ ಪರ್ವಸು ॥ ೩೧ ॥

ಲಂಕಾಯಾಂ ರಾವಣವಧೇ ಯಂ ಪ್ರಾಯುಂಕ್ತ ಶರಂ ಪ್ರಭುಃ ।
ಜಗ್ರಾಹ ತಂ ಶರಂ ದೀಪ್ತಂ ನಿಶ್ಶ್ವಸಂತಮಿವೋರಗಂ ॥ ೩೨ ॥

ಯಮಸ್ಮೈ ಪ್ರಥಮಂ ಪ್ರಾದಾದಗಸ್ತ್ಯೋ ಭಗವಾನ್ ಋಷಿಃ ।
ಬ್ರಹ್ಮದತ್ತಂ ಮಹಾಬಾಣಂ ಯಮಾಹ ಯುಧಿ ತದ್ವಧೇ ॥ ೩೩ ॥

---

೨೯. ರಾಮನು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಹುಬ್ಬುಗಳನ್ನು ಗಂಟಿಕ್ಕಿಕೊಂಡು ಆ ರಾಕ್ಷಸನನ್ನು ಸುಡುವಂತೆ ಕೋಪಗೊಂಡನು.

೩೦. ಆ ರಾಮನು ಕೋಪಗೊಂಡಿರುವುದನ್ನು ನೋಡಿ ಎಲ್ಲಾ ಪ್ರಾಣಿಗಳೂ ಹೆದರಿದವು. ಭೂಮಿಯೂ ನಡುಗಿತು.

೩೧. ಸಿಂಹಗಳೂ, ಶಾರ್ದೂಲಗಳೂ, ಇರುವ ಕುಲಾಚಲಗಳೂ ಪತ್ತಿಕೊಂಡು ಉರಿದುವು. ಸಮುದ್ರಗಳು ಪರ್ವಕಾಲದಲ್ಲಿ ಕ್ಷುಭಿಸುವಂತೆ ಕ್ಷುಭಿಸಿದುವು.

೩೨. ಲಂಕೆಯಲ್ಲಿ ರಾವಣನನ್ನು ಯಾವ ಬಾಣದಿಂದ ಕೊಂದನೋ ಅಂತಹ ಭುಸ್ಸೆಂದು ಉಸಿರು ಬಿಡುತ್ತಿರುವ ಹಾವಿನಂತೆ ದೀಪ್ತವಾದ ಬಾಣವನ್ನು ತೆಗೆದುಕೊಂಡನು.

೩೩. ಇದು ಬ್ರಹ್ಮನು ಕೊಟ್ಟ ಬಾಣವು ಎಂಬದಾಗಿ ಹೇಳುತ್ತಾ ಯುದ್ಧದಲ್ಲಿ ಅಗಸ್ತ್ಯನು ದಶಕಂಠನನ್ನು ಕೊಲ್ಲಲು ಯಾವ ಬಾಣವನ್ನು ಕೊಟ್ಟನೋ ಅದೇ ಬಾಣವನ್ನು ಈಚೆಗೆ ತೆಗೆದನು.

ಬ್ರಹ್ಮಣಾ ನಿರ್ಮಿತಂ ಪೂರ್ವಮಿಂದ್ರಾದ್ಯಮಿತತೇಜಸಾ ।
ದತ್ತಂ ಸುರಪತೇಃ ಪೂರ್ವಂ ತ್ರೈಲೋಕ್ಯಜಯಕಾಂಕ್ಷಿಣಃ ॥ ೩೪ ॥

ಯಸ್ಯ ವಾಜೇಷು ಪವನಃ ಫಲೇ ಪಾವಕಭಾಸ್ಕರೌ ।
ಶರೀರಮಾಕಾಶಮಯಂ ಗೌರವೇ ಮೇರುಮಂದರೌ ॥ ೩೫ ॥

ಪರ್ವಸ್ವಪಿ ಚ ವಿನ್ಯಸ್ತಾ ಲೋಕಪಾಲಾ ಮಹೌಜಸಃ ।
ಧನದೋ ವರುಣಶ್ಚೈವ ಪಾಶಹಸ್ತಸ್ತಥಾಂತಕಃ ॥ ೩೬ ॥

ಜಾಜ್ವಲ್ಯಮಾನಂ ವಪುಷಾ ಸಪುಂಖಂ ಹೇಮಭೂಷಿತಂ ।
ತೇಜಸಾ ಸರ್ವಭೂತಾನಾಂ ಕೃತಂ ಭಾಸ್ಕರವರ್ಚಸಾ ॥ ೩೭ ॥

ಸ ಧೂಮಮಿವ ಕಾಲಾಗ್ನಿಂ ದೀಪ್ಯಮಾನಂ ರವಿಂ ಯಥಾ ।
ರಥನಾಗಾಶ್ವವೃಂದಾನಾಂ ಭೇದನಂ ಕ್ಷಿಪ್ರಕಾರಿಣಂ ॥ ೩೮ ॥

---

೩೪. ಈ ಬಾಣವನ್ನು ಇಂದ್ರನೇ ಮುಂತಾದವರ ತೇಜಸ್ಸಿನಿಂದ ಬ್ರಹ್ಮನು ನಿರ್ಮಿಸಿದ್ದನು. ಮೂರು ಲೋಕವನ್ನೂ ಜಯಿಸಲು ಹೊರಟ ಇಂದ್ರನಿಗೆ ಬ್ರಹ್ಮನು ಇದನ್ನು ಕೊಟ್ಟಿದ್ದನು.

೩೫-೩೬. ಬ್ರಹ್ಮನು ಸೃಷ್ಟಿಮಾಡುವಾಗ ಆ ಬಾಣದ ಹಿಡಿಯಲ್ಲಿ ವಾಯುವನ್ನೂ, ಅಲಗಿನಲ್ಲಿ ಅಗ್ನಿ ಸೂರ್ಯರನ್ನೂ, ಶರೀರದಲ್ಲಿ ಆಕಾಶವನ್ನೂ, ಭಾರದಲ್ಲಿ ಮೇರು ಮಂದರಗಳನ್ನೂ, ಗಿಣ್ಣುಗಳಲ್ಲಿ ಲೋಕಪಾಲಕರಾದ ಕುಬೇರ, ವರುಣ, ನಿರಋತಿಯರನ್ನೂ ಇಟ್ಟು ಸೃಷ್ಟಿಮಾಡಿರುವನು.

೩೭. ಅದರ ದೇಹವನ್ನು ನೋಡಿದರೆ ಕಣ್ಣುಗಳನ್ನು ಕುಕ್ಕುವಂತೆ ಪ್ರಕಾಶಿಸುತ್ತಿದ್ದಿತು. ಚಿನ್ನದಿಂದ ಕೂಡಿದ ಪುಕ್ಕಗಳಿದ್ದುವು. ಎಲ್ಲಾ ಪ್ರಾಣಿಗಳ ತೇಜಸ್ಸನ್ನೂ ತೆಗೆದುಕೊಂಡು ಸೂರ್ಯನ ಕಾಂತಿಯನ್ನೂ ಸೇರಿಸಿ ರಚಿಸಿರುವನು.

೩೮. ಅದನ್ನು ನೋಡಿದರೆ ಹೊಗೆಯಿಂದ ಕೂಡಿದ ಕಾಲಾಗ್ನಿಯಂತಿದ್ದಿತು. ತನ್ನ ತೇಜಸ್ಸಿನಿಂದ ಸೂರ್ಯನನ್ನು ಪ್ರಕಾಶ ಪಡಿಸುತ್ತಿದ್ದಿತು. ರಥ ಆನೆಗಳ ಗುಂಪನ್ನು ಭೇದಿಸುವುದರಲ್ಲಿ ಉಗ್ರವಾಗಿದ್ದಿತು. ಜಾಗ್ರತೆಯುಳ್ಳದ್ದಾಗಿದ್ದಿತು.

ಪರಿಘಾಣಾಂ ಸಹಸ್ರಾಣಾಂ ಗಿರೀಣಾಂ ಚೈವ ಭೇದನಂ ।
ನಾನಾರುಧಿರಸಿಕ್ತಾಂಗಂ ಮೇದೋದಿಗ್ಧಂ ಸುದಾರುಣಂ ॥ ೩೯ ॥

ಕಾಲಾಭಂ ಸುಮಹಾನಾದಂ ನಾನಾಶಕ್ತಿವಿನಾಶನಂ ।
ಶತ್ರೂಣಾಂ ತ್ರಾಸಜನನಂ ಸಪಕ್ಷಮಿವ ಪನ್ನಗಂ ॥ ೪೦ ॥

ಕಾಕಗೃಧ್ರಬಕಾನಾಂ ಚ ಗೋಮಾಯುಪ್ರಕರಕ್ಷಸಾಂ ।
ನಿತ್ಯಂ ಭಕ್ಷ್ಯಪ್ರದಂ ಯುದ್ಧೇ ರಾಕ್ಷಸಾನಾಂ ಭಯಾವಹಂ ॥ ೪೧ ॥

ದ್ವಿಷತಾಂ ಕೀರ್ತಿಹರಣಂ ಪ್ರಕರ್ಷಕರಮಾತ್ಮನಃ ।
ಅಭಿಮಂತ್ರ್ಯ ತತೋ ರಾಮಃ ತಂ ಮಹೇಷುಂ ಮಹಾಭುಜಃ ॥ ೪೨ ॥

ವೇದಪ್ರೋಕ್ತೇನ ವಿಧಿನಾ ಕುಂಡಲೀಕೃತ್ಯ ಕಾರ್ಮುಕಂ ।
ಸ ರಾವಣಾಯ ತಂ ವೇಗಾಚ್ಚಿಕ್ಷೇಪ ಶರಮುತ್ತಮಂ ॥ ೪೩ ॥

---

೩೯. ಸಾವಿರ ಪರಿಘಗಳನ್ನೂ ಒಂದೇ ಬಾರಿ ಕತ್ತರಿಸುವಂತಿದ್ದಿತು. ಬೆಟ್ಟಗಳನ್ನು ಕತ್ತರಿಸುವ ಶಕ್ತಿಯನ್ನು ಹೊಂದಿದ್ದಿತು. ಅನೇಕ ಬಗೆಯ ರಕ್ತಗಳಿಂದ ನೆನೆದಿದ್ದಿತು. ಕೊಬ್ಬನ್ನು ಹಾಕಿ ತಿಕ್ಕಿದ್ದರು. ಬಹು ಕ್ರೂರವಾದುದು.

೪೦. ಯಮನಂತಿದ್ದಿತು. ಬಹುವಾಗಿ ನಾದವುಳ್ಳದ್ದು, ಅನೇಕ ಬಗೆಯ ಶಸ್ತ್ರಾಯುಧಗಳನ್ನು ನಾಶಮಾಡತಕ್ಕದ್ದು. ಶತ್ರುಗಳಿಗೆ ಹೆದರಿಕೆಯನ್ನುಂಟು ಮಾಡುತ್ತಿದ್ದಿತು. ರೆಕ್ಕೆಯುಳ್ಳ ಹಾವಿನಂತಿದ್ದಿತು.

೪೧. ಕಾಗೆ, ಹದ್ದು, ಬಕ, ನರಿ, ತೋಳ, ರಾಕ್ಷಸರು ಇವರಿಗೆ ನಿತ್ಯವೂ ಆಹಾರವನ್ನು ಕೊಡತಕ್ಕದ್ದು. ರಾಕ್ಷಸರಿಗೆ ಭಯಂಕರವಾದುದು.

೪೨-೪೩. ಶತ್ರುಗಳ ಕೀರ್ತಿಯನ್ನು ನಾಶಮಾಡತಕ್ಕದ್ದು. ತನ್ನ ಯಜಮಾನನಿಗೆ ಉತ್ಕರ್ಷವನ್ನು ಕೊಡತಕ್ಕದ್ದು. ಇಂತಹ ಬಾಣವನ್ನು ಮಹಾ ಭುಜವುಳ್ಳ ರಾಮನು ವೇದದಲ್ಲಿ ಹೇಳಿರುವ ವಿಧಿಯಂತೆ ಅಭಿಮಂತ್ರಿಸಿ ಬಿಲ್ಲಿಗೆ ಹೂಡಿ ಆ ಬಿಲ್ಲು ದುಂಡಗಾಗುವಂತೆ ಎಳೆದು ಆ ಬಾಣವನ್ನು ರಾವಣನ ಮೇಲೆ ಬಿಟ್ಟನು.

ಸ ಸಾಯಕೋ ಧನುರ್ಮುಕ್ತೋ ಹಂತುಂ ರಾಮೇಣ ರಾವಣಂ ।
ಧೂಮಪೂರ್ವಂ ಪ್ರಜಜ್ವಾಲ ಪ್ರಾಪ್ಯ ವಾಯುಪಥಂ ಮಹಾನ್ ॥ ೪೪ ॥

ತಂ ವಜ್ರಮಿವ ದುರ್ಧರ್ಷಂ ವಜ್ರಪಾಣಿವಿಸರ್ಜಿತಂ ।
ಕೃತಾಂತಕಮಿವಾವಾರ್ಯಂ ರಾವಣೋ ವೀಕ್ಷ್ಯ ತತ್ಪರಃ ॥ ೪೫ ॥

ಹುಂಕೃತ್ಯಕಿಲ ಜಗ್ರಾಹ ಬಾಣಂ ವಾಮೇನ ಪಾಣಿನಾ ।
ತತಸ್ತಾಂ ಜಾನುನಾಕೃಷ್ಯ ಬಭಂಜ ರಾಕ್ಷಸಾಧಿಪಃ ॥ ೪೬ ॥

ಭಗ್ನೇ ತಸ್ಮಿನ್ ಶರೇ ರಾಮೋ ವಿಮನಾ ಇವ ತಸ್ಥಿವಾನ್ ।
ಸಹಸ್ರಕಂಧರಃ ಕ್ರುದ್ಧಃ ಕ್ಷುರಪ್ರಂ ಗೃಹ್ಯ ಸಾಯಕಂ ॥ ೪೭ ॥

ವಿವ್ಯಾಧ ರಾಘವಂ ವಕ್ಷಃ ಸರ್ವಪ್ರಾಣೇನ ರಾಕ್ಷಸಃ ।
ವಕ್ಷೋ ನಿರ್ಭಿದ್ಯ ಸ ಶರೋ ರಾಮಸ್ಯ ಸುಮಹಾತ್ಮನಃ ॥ ೪೮ ॥

ಭಿತ್ವಾ ಮಹೀಂ ಚ ಸಹಸಾ ಪಾತಾಳತಲಮಾವಿಶತ್ ।
ತತೋ ರಾಮೋ ಮಹಾಬಾಹುಃ ಪಪಾತ ಪುಷ್ಪಕೋಪರಿ ॥ ೪೯ ॥

೪೪. ರಾಮನು ರಾವಣನನ್ನು ಕೊಲ್ಲಲು ಧನುಸ್ಸಿನಿಂದ ಬಿಟ್ಟ ಆ ಬಾಣವು ಆಕಾಶವನ್ನು ಹೊಂದಿ ಹೊಗೆಯನ್ನುಗುಳುತ್ತ ಉರಿಯಿತು.

೪೫. ಆ ಬಾಣವು ಇಂದ್ರನು ಬಿಟ್ಟ ವಜ್ರಾಯುಧದಂತೆ ತಡೆಯಲಸಾಧ್ಯವಾಗಿದ್ದಿತು. ಯಮನಂತೆ ಹಿಂದಿರುಗದಿರತಕ್ಕದ್ದು. ಅಂತಹ ಬಾಣವನ್ನು ರಾವಣನು ಎದುರಿಗೆ ನೋಡಿ ಹುಂ ಎಂದೆನ್ನುತ್ತ ಎಡದ ಕೈಯ್ಯಿಂದಲೇ ಹಿಡಿದು ಬಿಟ್ಟನು.

೪೬-೪೭. ಎಡಗೈಯ್ಯಲ್ಲಿ ಹಿಡಿದು ಮುಂಡಿಗೆ ಅಡ್ಡಲಾಗಿಟ್ಟುಕೊಂಡು ಮುರಿದು ಹಾಕಿದನು. ಆ ಬಾಣವು ಈ ರೀತಿಯಾಗಿ ನಾಶವಾದುದನ್ನು ನೋಡಿ ರಾಮನು ಮನಸ್ಸಿಗೆಟ್ಟು ದುಃಖಿಸಿದನು. ಆಗ ಆ ಸಹಸ್ರಕಂಧರನು ಕೋಪಗೊಂಡು ಹರಿತವಾದ ಬಾಣವನ್ನು ತೆಗೆದುಕೊಂಡು ತನ್ನ ಬಲವನ್ನು ಪ್ರಯೋಗಿಸಿ ರಾಮನ ಎದೆಗೆ ಗುರಿಯಿಟ್ಟು ಹೊಡೆದನು.

೪೮–೪೯. ಆ ಬಾಣವು ರಾಮನ ಎದೆಯನ್ನು ಸೀಳಿ ಭೂಮಿಯನ್ನು ತೂತು ಮಾಡಿಕೊಂಡು ಪಾತಾಳಕ್ಕೆ ಹೋಗಿ ಸೇರಿತು. ಅನಂತರ ಆ ಮಹಾನುಭಾವನಾದ ಶ್ರೀರಾಮನು ಬಿದ್ದು ಬಿಟ್ಟನು.

**ನಿಸ್ಸಂಜ್ಞೋ ನಿಶ್ಚಲಶ್ಚಾಸೀದ್ಧಾಹಾ ಭೂತಾನಿ ಚಕ್ರಿರೇ ।**
**ಪ್ರಾಕಂಪತ ಮಹೀ ಸರ್ವಾ ಸಪರ್ವತವನಾಬ್ಧಿಕಾ ॥ ೫೦ ॥**

**ದಶಶತವದನೋ ಜಿತಾರಿರುಗ್ರೋ**
**ರಣಶಿರಸಿ ಪ್ರನನರ್ತ ಸಾನುಮಾತ್ರಃ ।**
**ಗಗನತಳಗತಾ ನಿಪೇತುರುಲ್ಕಾಃ**
**ಪ್ರಲಯಮಿವಾಪಿ ಚ ಮೇನಿರೇ ಜನೌಘಾಃ ॥ ೫೧ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ರಾಮಸ್ವಪ್ನಾಯಿತಂ ನಾಮ**
**ದ್ವಾವಿಂಶತಿತಮಃ ಸರ್ಗಃ**



೫೦. ಹೀಗೆ ಬಿದ್ದ ರಾಮನಿಗೆ ಜ್ಞಾನವೂ ಹೋಯಿತು. ಕೈಕಾಲುಗಳ ಅಲ್ಲಾಡುವಿಕೆಯು ನಿಂತುಹೋಯಿತು. ಆಗ ಪರ್ವತ ಸಮುದ್ರಗಳಿಂದ ಕೂಡಿದ ಭೂಮಿಯು ನಡುಗಿತು. ಪ್ರಾಣಿಗಳೆಲ್ಲವೂ ಹಾಹಾ ಎಂದೆನ್ನುತ್ತಾ ಹಾಹಾಕಾರವನ್ನು ಮಾಡಿದುವು.

೫೧. ಸಾವಿರ ಕಂಠಗಳುಳ್ಳ ರಾವಣನು ಶತ್ರುವನ್ನು ಜಯಿಸಿ ಆ ರಣಾಂಗಣದಲ್ಲಿ ತನ್ನವರೊಡನೆ ಕುಣಿದನು. ಆಗ ಆಕಾಶದಿಂದ ಉಲ್ಕೆಗಳು (ಕೊಳ್ಳಿಗಳು) ಬೀಳುತ್ತಿದ್ದುವು. ಇದನ್ನು ನೋಡಿ ಜನಗಳು ಪ್ರಳಯಕಾಲವಿರಬಹುದೆಂದೆನ್ನುತ್ತಿದ್ದರು.

ಇಂತು ವಾಲ್ಮೀಕಿಋಷಿಯಿಂದ ಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದಲ್ಲಿ ರಾಮನು ಮಲಗಿದನೆಂಬ ಇಪ್ಪತ್ತೆರಡನೆಯ ಸರ್ಗವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

# ಅದ್ಭುತರಾಮಾಯಣೇ

## ಅಥ ತ್ರಯೋವಿಂಶತಿತಮಃ ಸರ್ಗಃ



ರಾಮಂ ತಥಾವಿಧಂ ದೃಷ್ಟ್ವಾ ಮುನಯೋ ಭಯವಿಹ್ವಲಾಃ ।
ಹಾಹಾಕಾರಂ ಪ್ರಕುರ್ವಂತಃ ಶಾಂತಿಂ ಜೇಪುಶ್ಚ ಕೇಚನ ॥ ೧ ॥

ತದಾ ತು ಮುನಿಭಿರ್ದೃಷ್ಟಾ ಸಿತಾ ಪ್ರಹಸಿತಾನನಾ ।
ವಸಿಷ್ಠ ಪ್ರಮುಖಾಸ್ಸರ್ವೇ ಸೀತಾಂ ಪ್ರೋಚುರ್ಮಹರ್ಷಯಃ ॥ ೨ ॥

ಸೀತೇ ಕಥಂ ಶ್ರಾವಿತೋಽಯಂ ರಾವಣಂ ರಾಘವಸ್ತ್ವಯಾ ।
ಸಮುತ್ಪನ್ನೋ ವಿಪಾಕೋಽಯಂ ಘೋರೋ ಜನಕನಂದಿನಿ ॥ ೩ ॥

## ಇಪ್ಪತ್ತಮೂರನೆಯ ಸರ್ಗವು.

೧. ಶ್ರೀರಾಮನು ಆ ರೀತಿಯಾಗಿ ಬಿದ್ದಿರುವುದನ್ನು ನೋಡಿ ಮುನಿಗಳು ಭಯಗೊಂಡು ಹಾ ಹಾ ಎಂದೆನ್ನುತ್ತ ಶಾಂತಿ ಮಂತ್ರವನು ಜಪಿಸಿದರು.

೨. ಆಗ ಸೀತೆಯು ನಗುತ್ತಲೇ ಇರುವುದನ್ನು ಋಷಿಗಳು ನೋಡಿದರು. ಮತ್ತು ವಸಿಷ್ಠನೇ ಮುಂತಾದ ಋಷಿಗಳು ಆಕೆಯನ್ನು ಕುರಿತು ಇಂತೆಂದರು.

೩. ಎಲೈ ಸೀತೆಯೇ! ನೀನು ಏತಕ್ಕೋಸ್ಕರ ಈ ರಾವಣನ ವಿಷಯವನ್ನು ಶ್ರೀರಾಮನಿಗೆ ತಿಳಿಸಿದೆ? ಎಲೈ ಜನಕನಂದಿನಿಯೇ! ನೀನು ಹೇಳಿದುದರ ಘೋರವಾದ ಫಲವು ಇಗೋ ಒದಗಿದೆ. ನೋಡು.

**ಕ್ವ ಗತಾ ಭ್ರಾತರಸ್ಸರ್ವೇ ಕ್ವ ಗತಾ ವಾನರರ್ಷಭಾಃ ।**
**ಮಂತ್ರಿಣಃ ಕ್ವ ಗತಾ ಭದ್ರೇ ರಾಮಸ್ಯ ಕಿಮುಪಸ್ಥಿತಂ ॥ ೪ ॥**

**ಶ್ರುತ್ವೈತದ್ವಚನಂ ತೇಷಾಂ ಮುನೀನಾಂ ಭಾವಿತಾತ್ಮನಾಂ ।**
**ರಾಮಂ ತಥಾವಿಧಂ ದೃಷ್ಟ್ವಾ ಶಯಾನಂ ಪುಷ್ಪಕೋಪರಿ ॥ ೫ ॥**

**ಪುಂಡರೀಕನಿಭೇ ನೇತ್ರೇ ನಿಮೀಲ್ಯ ರಣಮೂರ್ಧನಿ ।**
**ಆಲಿಂಗ್ಯ ಚೋರಸಾ ಸುಪ್ತಂ ಪ್ರಿಯಾಮಿವ ಧನುಶ್ಶರಂ ॥ ೬ ॥**

**ನರ್ದಂತಂ ರಾಕ್ಷಸಂ ಚಾಪಿ ಮಹಾಬಲಪರಾಕ್ರಮಂ ।**
**ಸಾಟ್ಟಹಾಸಂ ವಿನದ್ಯೋಚ್ಚೈಃ ಸೀತಾ ಜನಕನಂದಿನೀ ॥ ೭ ॥**

**ಸ್ವರೂಪಂ ಪ್ರಜಹೌ ದೇವೀ ಮಹಾವಿಕಟರೂಪಿಣೀ ।**
**ಕ್ಷುತ್‌ಕ್ಷಾಮಾ ಕೋಟರಾಕ್ಷೀ ಚ ಚಕ್ರಭ್ರಮಿತಲೋಚನಾ ॥ ೮ ॥**

---

೪. ರಾಮನ ತಮ್ಮಂದಿರೆಲ್ಲರೂ ಎಲ್ಲಿ ಹೋದರು? ಕಪಿಶ್ರೇಷ್ಠರೆಲ್ಲರೂ ಎಲ್ಲಿಗೆ ಹೋದರು? ಮಂತ್ರಿಗಳೆಲ್ಲಿಗೆ ಹೋದರು? ರಾಮನಿಗೆ ಏನುಗತಿಯು ಪ್ರಾಪ್ತವಾಯಿತು?

೫. ಸೀತೆಯು ಋಷಿಗಳ ಈ ಮಾತನ್ನು ಕೇಳಿದಳು. ರಾಮನು ಪುಷ್ಪಕದ ಮೇಲೆ ರಾವಣನಿಂದ ಕೊಲ್ಲಲ್ಪಟ್ಟು ಚೇಷ್ಟೆ ಮಾಡದೆ ಬಿದ್ದಿರುವುದನ್ನೂ ನೋಡಿದಳು.

೬–೭. ಆ ರಾಮನು ಪುಂಡರೀಕದಂತಿರುವ ಕಣ್ಣುಗಳನ್ನು ಮುಚ್ಚಿಕೊಂಡಿದ್ದನು. ಆ ಧನುಸ್ಸನ್ನೂ ಬಾಣವನ್ನೂ ತನ್ನ ಪ್ರೀತಿಪಾತ್ರಳಾದ ಹೆಂಡತಿಯಂತೆ ಅಪ್ಪಿಕೊಂಡು ಆ ಯುದ್ಧರಂಗದಲ್ಲಿ ಮಲಗಿದ್ದನು. ಮತ್ತು ಆ ಸಹಸ್ರಕಂಠನು ಬಹುವಾದ ಬಲ ಪರಾಕ್ರಮಗಳಿಂದ ಗರ್ಜಿಸುತ್ತಿದ್ದನು. ಇದನ್ನು ನೋಡಿ ಆ ಜನಕನಂದಿನಿಯು ಗಟ್ಟಿಯಾಗಿ ನಕ್ಕು ತನ್ನ ಸ್ವರೂಪವನ್ನೇ ಬಿಟ್ಟುಬಿಟ್ಟು ದೊಡ್ಡ ಭಯಂಕರವಾದ ಆಕಾರವನ್ನು ಹೊಂದಿದಳು.

೮-೧೧. ಹಸಿವಿನಿಂದ ಬಡಕಲಾದಳು. ಕಣ್ಣುಗಳು ಒಳಕ್ಕೆ ಹೋಗಿದ್ದುವು. ಗುಳ್ಳೆಗಳು ಚಕ್ರದಂತೆ ಸುತ್ತುತ್ತಿದ್ದುವು. ಕಾಲುಗಳು ಉದ್ದವಾಗಿದ್ದುವು. ಭಯಂಕರವಾಗಿ ಕೂಗುತ್ತಿದ್ದಳು. ಮುಂಡಗಳ ಮಾಲೆಗಳನ್ನೂ ಮೂಳೆಗಳ ಗೆಜ್ಜೆಗಳನ್ನೂ

ದೀರ್ಘಜಂಘಾ ಮಹಾರಾವಾ ಮುಂಡಮಾಲಾ ವಿಭೂಷಣಾ ।
ಅಸ್ಥಿಕಿಂಕಿಣಿಕಾ ಭೀಮಾ ಭೀಮವೇಗಪರಾಕ್ರಮಾ ॥ ೯ ॥

ಖರಸ್ವರಾ ಮಹಾಘೋರಾ ವಿಕೃತಾ ವಿಕೃತಾನನಾ ।
ಚತುರ್ಭುಜಾ ದೀರ್ಘತುಂಡಾ ಶಿರೋಲಂಕರಣೋಜ್ಜ್ವಲಾ ॥ ೧೦ ॥

ಲಲಜ್ಜಿಹ್ವಾ ಜಟಾಜೂಟೈರ್ಮಂಡಿತಾ ಚಂಡರೋಮಿಕಾ ।
ಪ್ರಲಯಾಂಭೋದಕಾಲಾಭಾ ಘಂಟಾಪಾಶವಿಧಾರಿಣೀ ॥ ೧೧ ॥

ಅವಸ್ಕಂದ್ಯ ರಥಾತ್ತೂರ್ಣಂ ಖಡ್ಗಖರ್ಪರಧಾರಿಣೀ ।
ಶ್ಯೇನೀವ ರಾವಣ ರಥೆ ಪಪಾತ ನಿಮಿಷಾಂತರೇ ॥ ೧೨ ॥

ಶಿರಾಂಸಿ ರಾವಣಸ್ಯಾಶು ನಿಮಿಷಾಂತರಮಾತ್ರತಃ ।
ಖಡ್ಗೇನ ತಸ್ಯ ಚಿಚ್ಛೇದ ಸಹಸ್ರಾಣೀಹ ಲೀಲಯಾ ॥ ೧೩ ॥

ಅನ್ಯೇಷಾಂ ಯೋದ್ಧೃವೀರಾಣಾಂ ಶಿರಾಂಸಿ ನಖರೇಣ ಹಿ ।
ಭಿನ್ನಾನಿ ಪಾತಯಾಮಾಸ ಭೂಮೌ ತೇಷಾಂ ದುರಾತ್ಮನಾಂ ॥ ೧೪ ॥

---

ಹಾಕಿಕೊಂಡಿದ್ದಳು. ಭಯಂಕರವಾದ ವೇಗ ಪರಾಕ್ರಮಗಳನ್ನು ಹೊಂದಿದ್ದಳು. ಸ್ವರವು ಕಠಿಣವಾಗಿದ್ದಿತು. ವಿಕಾರವಾದ ಮುಖದಿಂದಿದ್ದಳು. ನಾಲ್ಕು ತೋಳುಗಳಿದ್ದುವು. ಮುಖವು ಉದ್ದವಾಗಿದ್ದಿತು. ತಲೆಗೆ ಅಲಂಕಾರವನ್ನು ಮಾಡಿಕೊಂಡಿದ್ದಳು. ನಾಲಿಗೆಯು ಆವನನ್ನಾದರೂ ತಿನ್ನಬೇಕೆಂದು ಅಲ್ಲಾಡುತ್ತಿದ್ದಿತು. ತಲೆಯಲ್ಲಿ ಜಟೆಗಳಿದ್ದುವು. ರೋಮಗಳು ಒರಟಾಗಿದ್ದುವು. ಪ್ರಳಯಕಾಲದ ಮೋಡದಂತೆ ಕಪ್ಪಗಿದ್ದಳು. ಘಂಟೆಯನ್ನೂ ಹಗ್ಗವನ್ನೂ ಹಿಡಿದಿದ್ದಳು.

೧೨. ಕೈಯ್ಯಲ್ಲಿ ಖಡ್ಗ, ಕಪಾಲಗಳನ್ನು ಹಿಡಿದು ಗಿಡುಗನಂತೆ ವೇಗವಾಗಿ ರಥದಿಂದ ನೆಗೆದು ನಿಮಿಷಮಾತ್ರದಲ್ಲಿಯೇ ಆ ಸಹಸ್ರಕಂಠನ ರಥಕ್ಕೆ ಧುಮುಕಿದಳು.

೧೩. ಆ ರಥದಲ್ಲಿ ರಾವಣನನ್ನು ಹಿಡಿದುಕೊಂಡು ನಿಮಿಷ ಮಾತ್ರದಲ್ಲಿಯೇ ಅವನ ಸಾವಿರ ತಲೆಗಳನ್ನೂ ಸರಾಗವಾಗಿಯೇ ಕತ್ತಿಯಿಂದ ಕತ್ತರಿಸಿದಳು.

೧೪. ಅವನ ತಲೆಯನ್ನು ಕತ್ತರಿಸಿದ ಮೇಲೆ ಉಳಿದ ಯುದ್ಧವೀರರ ತಲೆಗಳನ್ನು ಕೈಯ್ಯುಗುರಿನಿಂದಲೇ ಕತ್ತರಿಸಿ ನೆಲದ ಮೇಲೆ ಬಿಸಾಡಿದಳು.

ಕೇಷಾಂಚಿತ್ ಪಾಟಯಾಮಾಸ ನಖೈಃ ಕೋಷ್ಠಾನಿ ಜಾನಕೀ ।
ಖಡ್ಗೇನ ಚಾಚ್ಛಿನತ್ ಕಾಂಶ್ಚಿತ್ ಕ್ರೂರಾನ್ ಪಾದಾಂಶ್ಚ ಚಿಚ್ಛಿದೇ ॥ ೧೫ ॥

ಖಂಡಂ ಖಂಡಂ ಚಕಾರಾನ್ಯಾನ್ ತಿಲಶಃ ಕಾಂಶ್ಚಿದೇವ ಹಿ ।
ಅಂತ್ರಾಣ್ಯನ್ಯಸ್ಯಾಚಕರ್ಷ ಪಾದಾಘಾತೇನ ಕಾಂಶ್ಚನ ॥ ೧೬ ॥

ಪಾರ್ಶ್ವೇನ ನಿಜಘಾನಾನ್ಯಾನ್ ಪಾರ್ಷ್ಣಿನಾನ್ಯಾನಪೋಥಯತ್ ।
ಕಾಂಶ್ಚಿಚ್ಛರೀರವಾತೇನ ದೃಷ್ಟ್ಯಾನ್ಯಾನಪಾತಯತ್ ॥ ೧೭ ॥

ಪ್ರಲಯಂ ಕುರ್ವತೀ ಸೀತಾ ರಾಕ್ಷಸಾನಾಂ ಭಯಂಕರೀ ।
ನಿಜಘಾನಾಟ್ಟಹಾಸೇನ ಕಾಂಶ್ಚಿತ್ ಪೃಷ್ಠೇ ದ್ವಿಧಾಕರೋತ್ ॥ ೧೮ ॥

ಕಾಂಶ್ಚಿತ್ಕೇಶಾನ್ ಸಮಾಕೃಷ್ಯ ನಿಷ್ಪಿಪೇಷ ಮಹೀತಳೇ ।
ಸರಥಾನ್ ಸಗಜಾನ್ ಸಾಶ್ವಾನ್ ಸಗದಾನ್ ಸಹ ತೋಮರಾನ್ ॥ ೧೯ ॥

---

೧೫. ಕೆಲವರ ಮೊಣಕೈಗಳನ್ನು ಉಗುರುಗಳಿಂದಲೇ ಸೀಳಿದಳು. ಕೆಲವರ ತಲೆಗಳನ್ನೂ ಕೆಲವರ ಕಾಲುಗಳನ್ನೂ ಕತ್ತಿಯಿಂದಲೇ ಕತ್ತರಿಸಿದಳು.

೧೬. ಕೆಲವರನ್ನು ದಪ್ಪದಪ್ಪ ಚೂರುಗಳನ್ನಾಗಿಯೂ, ಕೆಲವರನ್ನು ಸಣ್ಣ ಸಣ್ಣ ಚೂರುಗಳನ್ನಾಗಿಯೂ ಕತ್ತರಿಸಿದಳು. ಕೆಲವರನ್ನು ಕಾಲಿನಿಂದ ಒದೆದು ಒಳಗಿನ ಕರುಳು ಬರುವಂತೆ ಮಾಡಿದಳು.

೧೭. ಕೆಲವರನ್ನು ಪಕ್ಕೆಗಳಿಂದ ತಳ್ಳುವುದರಿಂದಲೂ ಕೆಲವರನ್ನು ಹಿಂದು ಗಡೆ ನೂಕುವುದರಿಂದಲೂ, ಕೆಲವರನ್ನು ತನ್ನ ಜೋರಿನ ಗಾಳಿಯಿಂದಲೂ ಕೆಲವ ರನ್ನು ಕಣ್ಣಿನ ನೋಟದಿಂದಲೂ ಕೊಂದಳು.

೧೮. ಈ ರೀತಿಯಾಗಿ ಪ್ರಳಯವನ್ನೇ ಮಾಡುತ್ತ ಸೀತೆಯು ರಾಕ್ಷಸರಿಗೆ ಭಯಂಕರಳಾದಳು. ಕೆಲವರನ್ನು ನಗುವಿನಿಂದಲೇ ಕೊಂದಳು. ಕೆಲವರನ್ನು ಸೀಳಿ ಎರಡು ಮಾಡಿದಳು.

೧೯. ಕೆಲವರನ್ನು ಜುಟ್ಟನ್ನು ಹಿಡಿದೆಳೆದೇ ಕೊಂದು ಕೆಡಗಿದಳು. ಕೆಲಕೆಲ ವರನ್ನು ರಥದೊಡನೆಯೂ, ಆನೆಯೊಡನೆಯೂ, ಕುದುರೆಯೊಡನೆಯೂ, ಗದೆಯೊಡ ನೆಯೂ ತೋಮರಗಳೊಡನೆಯೂ ಕೂಡಿರುವಂತೆ ಕೆಡಹಿದಳು.

ಕಾಂಶ್ಚಿದ್ಯೋಧಾನ್ ಸಮಾಕೃಷ್ಯ ಮಜ್ಜಯಾಮಾಸ ವಾರಿಧೌ ।
ಗಳೇಚೋದ್ವೃಧ್ಯ ಕೇಷಾಂಚಿತ್ ಪ್ರಾಣಾನ್ ಜಗ್ರಾಹ ಜಾನಕೀ ॥ ೨೦ ॥

ಕೇಷಾಂಚಿತ್ ಸ್ಕಂಧ ಆರುಹ್ಯ ಶಿರಾಂಸ್ಯುತ್ಪಾಟಿತಾನಿ ಹಿ ।
ಹುಂಕಾರೇಣಾಟ್ಟಹಾಸೇನ ಕಾಂಶ್ಚಿತ್ಪ್ರಾಣಾನಹಾಪಯುತ್ ॥ ೨೧ ॥

ಕಾಂಶ್ಚಿತ್ಪ್ರಚೂರ್ಣ್ಯವದನಂ ಪಶುಮಾರಮಮಾರಯುತ್ ।
ತಾನ್ ಸರ್ವಾನ್ ನಿಮಿಷೇಣೈವ ನಿಹತ್ಯ ಜನಕಾತ್ಮಜಾ ॥ ೨೨ ॥

ತೇಷಾಮುಂತ್ರೇಣ ಶಿರಸಾಂ ಮಾಲಾಭಿಃ ಕೃತಭೂಷಣಾ ।
ರಾವಣಸ್ಯ ಶಿರಾಂಸ್ಯಗ್ರಾಣ್ಯಾದಾಯ ರಣಮೂರ್ಧನಿ ॥ ೨೩ ॥

ಕಂದುಕಕ್ರೀಡನಂ ಕರ್ತುಂ ಮನಶ್ಚಕ್ರೇ ಮನಸ್ವಿನೀ ।
ಏತಸ್ಮಿನ್ನಂತರೇ ತಸ್ಯಾ ರೋಮಕೂಪೇಭ್ಯ ಉದ್ಗತಾಃ ॥ ೨೪ ॥

---

೨೦. ಕೆಲವರು ಯೋಧರರನ್ನು ಎಳೆದುಕೊಂಡು ಸಮುದ್ರದಲ್ಲಿ ಎಸೆದು ಮುಳುಗಿಸಿದಳು. ಕೆಲವರನ್ನು ಕತ್ತಿಗೆ ನೇಣುಹಾಕಿ ಕೊಂದಳು.

೨೧. ಕೆಲವರ ಕತ್ತಿನ ಮೇಲೆ ಕುಳಿತು ತಲೆಯನ್ನು ಕತ್ತರಿಸಿದಳು. ಆಕೆಯ ಹುಂಕಾರದಿಂದಲೂ, ಗಟ್ಟಿಯಾದ ನಗುವಿಕೆಯಿಂದಲೂ ಕೆಲವರು ಪ್ರಾಣಗಳನ್ನು ಬಿಟ್ಟರು.

೨೨–೨೩. ಕೆಲವರ ಮುಖವನ್ನು ಜಜ್ಜಿ ಯಾಗದಲ್ಲಿ ಪಶುಗಳನ್ನು ಕೊಲ್ಲುವಂತೆ ಕೊಂದಳು. ಆ ರಾಕ್ಷಸರೆಲ್ಲರನ್ನೂ ಕ್ಷಣ ಕಾಲದಲ್ಲಿ ಆ ಸೀತೆಯು ಕೊಂದು ಅವರ ಕರುಳನ್ನು ಮಾಲೆಯನ್ನಾಗಿ ಹಾಕಿಕೊಂಡಳು. ಅನಂತರ ಆ ಸಹಸ್ರ ಕಂಠನ ತಲೆಗಳನ್ನು ತೆಗೆದುಕೊಂಡು ರಣರಂಗದಲ್ಲಿ ಚಂಡಾಡಲು ಮನಸ್ಸು ಮಾಡಿದಳು.

೨೪. ಹೀಗೆ ಮನಸ್ಸು ಮಾಡಿಕೊಳ್ಳುತ್ತಲೂ ಆಕೆಯ ರೋಮಕೂಪಗಳಿಂದಲೇ ವಿಕಾರವಾದ ಆಕಾರವುಳ್ಳ ಮಾತೃಗಳೆಂಬುವರು ಹುಟ್ಟಿದರು. ಅವರೆಲ್ಲರೂ ನಗುತ್ತಲೇ ಬಂದರು. ಅವರೆಲ್ಲರೂ ಹೀಗೆ ಸಾವಿರಗಟ್ಟಲೆಯಲ್ಲಿ ಆ ಸೀತೆಯೊಡನೆ ಚಂಡಾಡಲು ಬಂದರು.

ಮಾತರೋ ವಿಕೃತಾಕಾರಾಃ ಸಾಟ್ಟಹಾಸಾಸ್ಸಮಾಯಯುಃ ।
ಸಹ ಕಂದುಕಲೀಲಾರ್ಥಂ ಸೀತಯಾ ತಾಃ ಸಹಸ್ರಶಃ ॥ ೨೫ ॥

ತಾಸಾಂ ಕಾಸಾಂಚಿದಾಖ್ಯಾಸ್ಯೇ ನಾಮಾನಿ ಶೃಣು ಸುವ್ರತ ।
ಯಾಭಿರ್ವ್ಯಾಪ್ತಾಸ್ತ್ರಯೋ ಲೋಕಾಃ ಕಲ್ಯಾಣೀಭಿಶ್ಚರಾಚರಾಃ ॥ ೨೬ ॥

ಪ್ರಭಾವತೀ ವಿಶಾಲಾಕ್ಷೀ ಪಾಲಿತಾ ಗೋನಸೀ ತಥಾ ।
ಶ್ರೀಮತೀ ಬಹುಳಾಚೈವ ತಥೈವ ಬಹುಪುತ್ರಿಕಾ ॥ ೨೭ ॥

ಅಪ್ಸುಜಾತಾ ಚ ಗೋಪಾಲೀ ಬೃಹದಂಬಾಲಿಕಾ ತಥಾ ।
ಜಯಾವತೀ ಮಾಲತಿಕಾ ಧ್ರುವರತ್ನಾ ಭಯಂಕರೀ ॥ ೨೮ ॥

ವಸುದಾಮಾSಸುದಾಮಾ ಚ ವಿಶೋಕಾ ನಂದಿನೀ ತಥಾ ।
ಏಕಚೂಡಾ ಮಹಾಚೂಡಾ ಚಕ್ರನೇಮಿಶ್ಚಟೀತಮಾ ॥ ೨೯ ॥

ಉತ್ತೇಜನೀ ಜಯಾ ಸೇನಾ ಕಮಲಾಕ್ಷ್ಯಥ ಶೋಭನಾ ।
ಶತ್ರುಂಜಯಾ ತಥಾ ಚೈವ ಕ್ರೋಧನಾ ಶಲಭೀ ಖರೀ ॥ ೩೦ ॥

೨೫-೨೬. ಯಾವ ಮಾತೃಕೆಗಳಿಂದ ಚರಾಚರವಾದ ಈ ಮೂರು ಲೋಕವೂ ಕೂಡಿಕೊಂಡಿರುವುದೋ.ಅಂತಹ ಕೆಲವರ ಹೆಸರನ್ನು ಹೇಳುತ್ತೇನೆ. ನೀನು ಕೇಳು.

೨೭-೨೮. ಪ್ರಭಾವತಿ, ವಿಶಾಲಾಕ್ಷಿ, ಪಾಲಿತೆ, ಗೋನಸಿ, ಶ್ರೀಮತಿ ಬಹುಳೆ, ಬಹುಪುತ್ರಿಕೆ, ಅಪ್ಸುಜಾತೆ, ಗೋಪಾಲೀ, ಬೃಹದಂಬಾಲಿಕೇ, ಜಯಾವತಿ, ಮಾಲತಿಕೆ ಧ್ರುವರತ್ನೆ, ಅಭಯಂಕರಿ, ಇವು ಕೆಲವರ ಹೆಸರುಗಳು.

೨೯-೩೨. ವಸುದಾಮೆ, ಅಸುದಾಮೆ, ವಿಶೋಕೇ ನಂದಿನಿ, ಏಕಚೂಡೆ, ಮಹಾಚೂಡೆ, ಚಕ್ರನೇಮಿ, ಚಟೀತಮೆ, ಉತ್ತೇಜನಿ, ಜಯೆ, ಸೇನೆ, ಕಮಲಾಕ್ಷಿ, ಶೋಭನೆ, ಶತ್ರುಂಜಯೆ, ಕ್ರೋಧನೆ, ಶಲಭೀ, ಖರಿ, ಮಾಧವಿ, ಶುಭ್ರವಸ್ತ್ರೆ, ತೀರ್ಥ ಸೇನೀ, ಜಟೋಜ್ವಲೆ, ಗೀತಪ್ರಿಯೆ, ಕಲ್ಯಾಣಿ, ಕದ್ರುರೋಮೆ, ಅಮಿತಾಶನೆ,

ಮಾಧವೀ ಶುಭ್ರವಸ್ತ್ರಾ ಚ ತೀರ್ಥಸೇನೀ ಜಟೋಜ್ಜ್ವಲಾ ।
ಗೀತಪ್ರಿಯಾ ಚ ಕಲ್ಯಾಣೀ ಕದ್ರುರೋಮಾಮಿತಾಶನಾ ॥ ೩೧ ॥

ಮೇಘಸ್ವನಾಭೋಗವತೀ ಸುಭ್ರೂಶ್ಚ ಕನಕಾವತೀ ।
ಅಲಾತಾಕ್ಷೀ ವೇಗವತೀ ವಿದ್ಯುಜ್ಜಿಹ್ವಾ ಚ ಭಾರತೀ ॥ ೩೨ ॥

ಪದ್ಮಾವತೀ ಸುನೇತ್ರಾ ಚ ಗಂಧರಾ ಬಹುಯೋಜನಾ ।
ಸನ್ನಾಳಿಕಾ ಮಹಾಕಾಳೀ ಕಮಲಾ ಚ ಮಹಾಬಲಾ ॥ ೩೩ ॥

ಸುದಾಮಾ ಬಹುದಾಮಾ ಚ ಸುಪ್ರಭಾ ಚ ಯಶಸ್ವಿನೀ ।
ನೃತ್ಯಪ್ರಿಯಾ ಪರಾನಂದಾ ಶತೋಲೂಖಲಮೇಖಲಾ ॥ ೩೪ ॥

ಶತಘಂಟಾ ಶತಾನಂದಾ ಆನಂದಾ ಭವತಾರಿಣೀ ।
ವಪುಷ್ಮತೀ ಚಂದ್ರಸೀತಾ ಭದ್ರಕಾಳೀ ಸಟಾಮಲಾ ॥ ೩೫ ॥

ಝುಂಕಾರಿಕಾ ನಿಷ್ಕುಟಿಕಾ ರಾಮಾ ಚತ್ವರವಾಸಿನೀ ।
ಸುಮಲಾ ಸುಸ್ತನವತೀ ವೃದ್ಧಕಾಮಾ ಜಯಪ್ರಿಯಾ ॥ ೩೬ ॥

ಧನದಾ ಸುಪ್ರಸಾದಾ ಚ ಭವದಾ ಚ ಜನೇಶ್ವರೀ ।
ಏಡೀ ಭೇಡೀ ಸಮೇಡೀ ಚ ವೇತಾಳಜನನೀ ತಥಾ ॥ ೩೭ ॥

---

ಮೇಘಸ್ವನೆ, ಭೋಗವತಿ, ಸುಭ್ರೂ, ಕನಕಾವತಿ, ಅಲಾತಾಕ್ಷಿ, ವೇಗವತಿ, ವಿದ್ಯುಜ್ಜಿಹ್ವೆ, ಭಾರತಿ ಎಂದು ಕೆಲವರ ಹೆಸರು.

೩೩-೩೬. ಪದ್ಮಾವತಿ, ಸುನೇತ್ರೆ, ಗಂಧರೆ, ಬಹುಯೋಜನೆ, ಸನ್ನಾಳಿಕೆ, ಮಹಾಕಾಳಿ, ಕಮಲೆ, ಮಹಾಬಲೆ, ಸುಧಾಮೆ, ಬಹುದಾಮೆ, ಸುಪ್ರಭೆ, ಯಶಸ್ವಿನಿ, ನೃತ್ಯಪ್ರಿಯೆ, ಪರಾನಂದೆ, ಶತೋಲೂಖಲೆ, ಮೇಖಲೆ, ಶತಘಂಟೆ, ಶತಾನಂದೆ, ಆನಂದೆ, ಭವತಾರಿಣೆ, ವಪುಷ್ಮತೀ, ಚಂದ್ರಸೀತೆ, ಭದ್ರಕಾಳಿ, ಸಟೆ, ಅಮಲೆ, ಝುಂಕಾರಿಕೆ, ನಿಷ್ಕುಟಿಕೆ, ರಾಮಾ, ಚತ್ವರವಾಸಿನಿ, ಸುಮಲೆ, ಸುಸ್ತನವತಿ, ವೃದ್ಧಕಾಮೆ, ಜಯಪ್ರಿಯೆ ಎಂಬದಾಗಿ ಕೆಲವರ ಹೆಸರುಗಳು.

೩೭-೪೦. ಧನದೆ, ಸುಪ್ರಸಾದೆ, ಭವದೆ, ಜನೇಶ್ವರಿ, ಏಡೀ, ಭೇಡಿ, ಸಮೇಡಿ, ವೇತಾಳಜನನೀ, ಕಂದೂತಿ, ಕಂದುಕಾ, ವೇದಮಿತ್ರೆ, ಸುವೇದಿಕೆ, ಲಂಬಾಸ್ಯೆ

**ಕಂದೂತಿಃ ಕಂದುಕಾಚ್ಚೈವ ವೇಪಮಿತ್ರಾ ಸುದೇವಿಕಾ ।**
**ಲಂಬಾಸ್ಯಾ ಕೇತಕೀ ಚ್ಚೈವ ಚಿತ್ರಸೇನಾಚಲಾಚಲಾ ॥ ೩೮ ॥**

**ಕುಕ್ಕುಟಿಕಾ ಶ್ಯಂಖಲಿಕಾ ತಥಾ ಶಂಕುಲಿಕಾ ಹಡಾ ।**
**ಕಂದಾಳಿಕಾ ಕಾಕಲಿಕಾ ಕುಂಭಿಕಾಥ ಶತೋದರೀ ॥ ೩೯ ॥**

**ಉತ್ಕ್ರಾಥಿನೀ ಜವೇಲಾ ಚ ಮಹಾವೇಗಾ ಚ ಕಂಕಿನೀ ।**
**ಮನೋಜವಾ ಕಟಕಿನೀ ಪ್ರಘಸಾ ಪೂತನಾ ತಥಾ ॥ ೪೦ ॥**

**ಖೇಶಯಾ ಚಾತಿದ್ರಢಿಮಾ ಕ್ರೋಶನಾಥ ತಡಿತ್ಪ್ರಭಾ ।**
**ಮಂಡೋದರೀ ಚ ತುಂಡೀ ಚ ಕೋಟರಾಮೇಘವಾಹಿನೀ ॥ ೪೧ ॥**

**ಸುಭಗಾ ಲಂಬಿನೀ ಲಂಬಾ ಬಹುಚೂಡಾ ವಿಕತ್ಥಿನೀ ।**
**ಊರ್ಧ್ವವೇಣೀಧರಾ ಚ್ಚೈವ ಪಿಂಗಾಕ್ಷೀ ಲೋಹಮೇಖಲಾ ॥ ೪೨ ॥**

**ಪೃಥುವಕ್ತ್ರಾ ಮಧುಲಿಹಾ ಮಧುಕುಂಭಾ ತಥೈವ ಚ ।**
**ಯಕ್ಷಾನೀಕಾ ಮತ್ಸರಿಕಾ ಜರಾಯುಃ ಜರ್ಜರಾನನಾ ॥ ೪೩ ॥**

**ಖ್ಯಾತಾ ದಹದಹಾಚ್ಚೈವ ತಥಾ ಧಮಧಮಾ ದ್ವಿಜ ।**
**ಖಂಡಖಂಡಾ ಪೃಥುಶ್ರೋಣೀ ಪೂಷಣಾ ಮಣಿಕುಟ್ಟಿಕಾ ॥ ೪೪ ॥**

ಕೇತಕಿ, ಚಿತ್ರಸೇನೆ, ಅಚಲೆ, ಚಲೆ, ಕುಕ್ಕುಟಿಕೆ, ಶೃಂಖಲಿಕೆ, ಶಂಕುಲಿಕೆ, ಹಡಾ, ಕಂದಾಲಿಕೆ, ಕಾಕಲಿಕೆ, ಕುಂಭಿಕೆ, ಶತೋದರಿ, ಉತ್ಕ್ರಾಥಿನಿ, ಜವೇಲೆ, ಮಹಾವೇಗೆ, ಕಂಕಿನೀ ಇವು ಕೆಲವರ ಹೆಸರುಗಳು.

೪೧-೪೪. ಖೇಶಯೆ, ಅತಿದ್ರಢಿಮೆ, ಕ್ರೋಶನೆ, ತಡಿತ್ಪ್ರಭೆ, ಮಂಡೋದರಿ, ತುಂಡೀ, ಕೋಟರೆ, ಮೇಘವಾಹಿನಿ, ಸುಭಗೆ, ಲಂಬಿನಿ, ಲಂಬೆ,-ಬಹುಚೂಡೆ, ವಿಕತ್ಥಿನಿ, ಊರ್ಧ್ವವೇಣೀಧರಾ, ಪಿಂಗಾಕ್ಷಿ, ಲೋಹಮೇಖಲಾ, ಪೃಥುವಕ್ತ್ರೆ, ಮಧುಲಿಹೆ, ಮಧುಕುಂಭೆ, ಯಕ್ಷಾನೀಕೆ, ಮತ್ಸರಿಕೆ, ಜರಾಯು, ಜರ್ಜರಾನನೆ, ಖ್ಯಾತೆ, ದಹದಹೆ, ಧಮಧಮೆ, ಖಂಡಖಂಡೆ, ಪೃಥುಶ್ರೋಣಿ, ಪೂಷಣೀ, ಮಣಿಕುಟ್ಟಿಕಾ ಎಂಬುದಾಗಿ ಕೆಲವರ ಹೆಸರುಗಳು.

ಅವ್ಲೋಚಾಚೈವ ನಿರ್ಲ್ಲೋಚಾ ತಥಾಲಂಬಪಯೋಧರಾ ।
ವೇಣುವೀಣಾಧರಾಚೈವ ಪಿಂಗಾಕ್ಷೀಲೋಹಮೇಖಲಾ ॥ ೪೫ ॥

ಶಶೋಲೂಕಮುಖೀ ಹೃಷ್ಟಾ ಖರಜಂಘಾ ಮಹಾಜರಾ ।
ಶಿಶುಮಾರಮುಖೀ ಶ್ವೇತಾ ಲೋಹಿತಾಕ್ಷೀ ವಿಭೀಷಣಾ ॥ ೪೬ ॥

ಜಟಾಲಿಕಾ ಕಾಮಚರೀ ದೀರ್ಘಜಿಹ್ವಾ ಬಲೋತ್ಕಟಾ ।
ಕಾಲಾಹಿಕಾಯಾ ಮಾಲೀಕಾ ಮುಕುಟಾ ಮುಕುಟೇಶ್ವರೀ ॥ ೪೭ ॥

ಲೋಹಿತಾಕ್ಷೀ ಮಹಾಕಾಯಾ ಹವಿಪಿಂಚಾ ಚ ಪಿಂಡಿಕಾ ।
ಏಕತ್ವಚಾ ಸುಕೂರ್ಮಾ ಚ ಕುಲ್ಲಾಕರ್ಣೀ ಚ ಕರ್ಣಿಕಾ ॥ ೪೮ ॥

ಸುರಕರ್ಣೀ ಚತುಷ್ಕರ್ಣೀ ಕರ್ಣಪ್ರಾವರಣಾ ತಥಾ ।
ಚತುಷ್ಪಥನಿಕೇತಾ ಚ ಗೋಕರ್ಣೀ ಮಹಿಷಾನನಾ ॥ ೪೯ ॥

ಖರಕರ್ಣೀ ಮಹಾಕರ್ಣೀ ಭೇರೀಸ್ವನಾ ಮಹಾಸ್ವನಾ ।
ಶಂಖಕುಂಭಶ್ರವಾಚೈವ ಭಗದಾ ಚ ಮಹಾಬಲಾ ॥ ೫೦ ॥

೪೫-೫೦. ಅವ್ಲೋಚೆ, ನಿರ್ಲ್ಲೋಚೆ, ಲಂಬಪಯೋಧರೆ, ವೇಣುಧರೆ, ವೀಣಾಧರೆ, ಪಿಂಗಾಕ್ಷಿ ಲೋಹಮೇಖಲೆ, ಶಶಮುಖೀ, ಉಲೂಕಮುಖೀ, ಹೃಷ್ಟೆ, ಖರಜಂಘೆ, ಮಹಾಜರೆ, ಶಿಶುಮಾರಮುಖೀ, ಶ್ವೇತೆ, ಲೋಹಿತಾಕ್ಷಿ, ವಿಭೀಷಣೆ, ಜಟಾಲಿಕೆ, ಕಾಮಚರೀ. ದೀರ್ಘಜಿಹ್ವೆ, ಬಲೋತ್ಕಟೆ, ಕಾಲಾಹಿಕೆ, ಯಾಮಲಿಕೆ, ಮುಕಟೆ, ಮುಕಟೇಶ್ವರಿ, ಲೋಹಿತಾಕ್ಷಿ, ಮಹಾಕಾಯೆ, ಹವಿಪಿಂಡೆ, ಪಿಂಡಿಕೆ, ಏಕತ್ವಚೆ, ಸುಕೂರ್ಮೆ, ಕುಲ್ಲಾಕರ್ಣೀ, ಕರ್ಣಿಕೆ, ಸುರಕರ್ಣಿ, ಚತುಷ್ಕರ್ಣೀ, ಕರ್ಣಪ್ರಾವರಣೆ ಚತುಷ್ಪಥನಿಕೇತೆ, ಗೋಕರ್ಣಿ, ಮಹಿಷಾನನೆ, ಖರಕರ್ಣೀ, ಮಹಾಕರ್ಣಿ, ಭೇರೀಸ್ವನೆ, ಮಹಾಸ್ವನೆ, ಶಂಖಶ್ರವೆ, ಕುಂಭಶ್ರವೆ, ಭಗದೆ, ಮಹಾಬಲೆ ಎಂಬದಾಗಿ ಕೆಲವರ ಹೆಸರು.

ಗಣಾ ಚ ಸುಗಣಾ ಚೈವ ಕಾಮದಾಪ್ಯಥ ಕನ್ಯಕಾ ।
ಚತುಷ್ಪಥ ರಥಾಚೈವ ಭೂತಿತೀರ್ಥಾನ್ಯಗೋಚರಾ ॥ ೫೧ ॥

ಪಶುದಾ ವಿಭುದಾ ಚೈವ ಸುಖದಾ ಚ ಮಹಾಯಶಾ ।
ಪಯೋದಾ ಗೋಮಹಿಷದಾ ಸುವಿಶಾಲಾ ಚತುರ್ಭುಜಾ ॥ ೫೨ ॥

ಪ್ರತಿಷ್ಠಾ ಸುಪ್ರತಿಷ್ಠಾ ಚ ರೋಚಮಾನಾ ಸುಲೋಚನಾ ।
ನೌಕರ್ಣೀ ಮುಖಕರ್ಣೀ ಚ ವಿಶಿರಾ ಮಂಥಿನೀ ತಥಾ ॥ ೫೩ ॥

ಏಕವಕ್ತ್ರಾ ಮೇಘರವಾ ಮೇಘವಾಮಾ ದ್ವಿರೋಚನಾ ।
ಏತಾಶ್ಚಾನ್ಯಾಶ್ಚ ಬಹವೋ ಮಾತರಃ ಕೋಟಿಕೋಟಿಶಃ ॥ ೫೪ ॥

ಅಸಂಖ್ಯಾತಾಸ್ಸಮಂ ಜಗ್ಮುಃ ಕ್ರೀಡಿತುಂ ಸೀತಯಾ ಸಹ ।
ದೀರ್ಘವಕ್ಷ್ಯೋ ದೀರ್ಘದಂತ್ಯೋ ದೀರ್ಘತುಂಡ್ಯೋ ದ್ವಿಜೋತ್ತಮ ॥೫೫॥

ಸರಸಾ ಮಧುರಾಶ್ಚೈವ ಯೌವನಸ್ಥಾಃ ಸ್ವಲಂಕೃತಾಃ ।
ಮಾಹಾತ್ಮ್ಯೇನ ಚ ಸಂಯುಕ್ತಾಃ ಕಾಮರೂಪಧರಾಸ್ತಥಾ ॥ ೫೬ ॥

---

೫೧–೫೨. ಗಣೆ ಸುಗಣೆ ಕಾಮದೆ ಕನ್ಯಕೆ ಚತುಷ್ಪಥರಥೆ ಭೂತಿತೀರ್ಥೆ ಅನ್ಯಗೋಚರೆ, ಪಶುದೆ, ವಿಭುದೆ, ಸುಖದೆ, ಮಹಾಯಶೆ, ಪಯೋದೆ, ಗೋಮಹಿಷದೆ, ಸುವಿಶಾಲೆ, ಚತುರ್ಭುಜೆ, ಎಂಬುದು ಕೆಲವರ ಹೆಸರುಗಳು.

೫೩–೫೪. ಪ್ರತಿಷ್ಠೆ ಸುಪ್ರತಿಷ್ಠೆ ರೋಚಮಾನೆ ಸುಲೋಚನೆ ನೌಕರ್ಣೆ ಮುಖಕರ್ಣೀ ವಿಶಿರಾ ಮಂಥಿನಿ ಏಕವಕ್ತ್ರೆ ಮೇಘರವೆ ಮೇಘವಾಮೇ ದ್ವಿರೋಚನೆ ಇವರೂ ಇನ್ನೂ ಇವರ ಬಹುಜನರೂ ಮಾತೃಗಳು ಕೋಟಿಗಟ್ಟಲೆಯಲ್ಲಿ ಅಸಂಖ್ಯರಾಗಿ ಸೀತೆಯೊಡನೆ ಆಡಲು ಬಂದರು.

೫೫–೫೬. ಇವರಿಗೆ ಅಗಲವಾದ ಎದೆಗಳಿದ್ದುವು. ಉದ್ದವಾದ ಹಲ್ಲುಗಳಿದ್ದವು. ಉದ್ದವಾದ ಮುಖಗಳಿದ್ದವು. ಸರಸೆಯರು ಮಧುರೆಯರು, ಯೌವನಸ್ಥೆಯರು ಅಲಂಕೃತೆಯರು, ಮಾಂಸವಿಲ್ಲದೆ ಇರುವ ದೇಹವುಳ್ಳವರು. ಶ್ವೇತವರ್ಣವುಳ್ಳವರು.

ನಿರ್ಮಾಂಸಗಾತ್ರ್ಯಃ ಶ್ವೇತಾಶ್ಚ ತಥಾ ಕಾಂಚನಸನ್ನಿಭಾಃ ।
ಕೃಷ್ಣಮೇಘನಿಭಾಶ್ಚಾನ್ಯಾ ಧೂಮ್ರಾಶ್ಚ ದ್ವಿಜಪುಂಗವ ॥ ೫೭ ॥

ಅರುಣಾಭಾ ಮಹಾಭಾಗಾ ದೀರ್ಘಕೇಶ್ಯಃ ಸಿತಾಂಬರಾಃ ।
ಊರ್ಧ್ವವೇಣೀಧರಾಶ್ಚೈವ ಪಿಂಗಾಕ್ಷ್ಯೋ ಲಂಬಮೇಖಲಾಃ ॥ ೫೮ ॥

ಲಂಬೋದರ್ಯೋ ಲಂಬಕರ್ಣ್ಯಸ್ತಥಾ ಲಂಬಪಯೋಧರಾಃ ।
ತಾಮ್ರಾಕ್ಷ್ಯಸ್ತಾಮ್ರವರ್ಣಾಶ್ಚ ಹರ್ಯಕ್ಷ್ಯಶ್ಚ ತಥಾಪರಾಃ ॥ ೫೯ ॥

ಶತ್ರೂಣಾಂ ವಿಗ್ರಹೇ ನಿತ್ಯಂ ಭಯದಾಸ್ತಾ ಭವಂತ್ಯಪಿ ।
ಕಾಮರೂಪಧರಾಶ್ಚೈವ ಜವೇ ವಾಯುಸಮಾಸ್ತಥಾ ॥ ೬೦ ॥

ಶಿರಾಂಸಿ ರಕ್ಷಸಾಂ ಗೃಹ್ಯ ಗಂಡಶೈಲೋಪಮಾನ್ಯಪಿ ।
ಚಿಕ್ರೀಡುಃ ಸೀತಯಾ ಸಾರ್ಧಂ ತಸ್ಮಿನ್ ರಣಧರಾತಲೇ ॥ ೬೧ ॥

---

ಚಿನ್ನದಂತೆ ಹೊಂಬಣ್ಣ ಉಳ್ಳವರು. ಕಪ್ಪು ಮೇಘದಂತೆ ಕೆಲವರು. ಕೆಲವರು ತಾಮ್ರವರ್ಣಕ್ಕಿದ್ದರು.

೫೮–೫೯. ಕೆಲವರು ಕೆಂಪಗಿದ್ದರು ಕೆಲವರಿಗೆ ಕೂದಲು ಉದ್ದವಾಗಿದ್ದಿತು. ಕೆಲವರು ಬಿಳಿಯ ಬಟ್ಟೆಯನ್ನು ಉಟ್ಟಿದ್ದರು. ಕೆಲವರು ತುರುಬನ್ನೇ ಎತ್ತಿ ಕಟ್ಟಿಕೊಂಡಿದ್ದರು. ಕೆಲವರು ಹೊಂಬಣ್ಣದ ಕಣ್ಣುಳ್ಳವರು. ಕೆಲವರಿಗೆ ನಡುವಿಗೆ ಕಟ್ಟಿಕೊಂಡಿದ್ದ ದಾರವು ಜೋಲಾಡುತ್ತಿದ್ದಿತು. ಕೆಲವರ ಹೊಟ್ಟೆಯು ಉದ್ದವಾಗಿದ್ದಿತು. ಕೆಲವರಿಗೆ ಕಿವಿಯು ಜೋಲಾಡುತ್ತಿದ್ದಿತು. ಕೆಲವರ ಸ್ತನಗಳು ಜೋಲಾಡುತ್ತಿದ್ದವು. ಕೆಲವರ ಕಣ್ಣುಗಳು ಕೆಂಪಗಿದ್ದುವು. ಕೆಲವರು ಕೆಂಪಗಿದ್ದರು. ಕೆಲವರ ಕಣ್ಣುಗಳು ಕೆಂಚಗಿದ್ದವು.

೬೦–೬೧. ಅವರೆಲ್ಲರೂ ಯುದ್ಧದಲ್ಲಿ ಶತ್ರುಗಳಿಗೆ ಭಯವನ್ನುಂಟುಮಾಡುವವರು. ಇಷ್ಟಬಂದ ರೂಪವನ್ನು ಹೊಂದುವವರು. ವಾಯುವೇಗವುಳ್ಳವರು. ದೊಡ್ಡ ಬಂಡೆಯಂತಿರುವ ರಾಕ್ಷಸರ ತಲೆಗಳನ್ನು ತೆಗೆದುಕೊಂಡು ಆ ರಣಾಂಗಣದಲ್ಲಿ ಸೀತೆಯೊಡನೆ ಆಟವಾಡಿದರು.

ಮುಂಡಮಾಲಾಧರಾಶ್ಚೈವ ಕಾಶ್ಚಿನ್ಮುಂಡವಿಭೂಷಣಾಃ ।
ರಣಾಂಗಣೇ ಮಹಾಘೋರೇ ಗೃಧ್ರಕಂಕಶಿವಾನ್ವಿತೇ ॥ ೬೨ ॥

ಮಾಂಸಾಸೃಕ್ಪಂಕಿಲೇ ಘೋರೇ ತತ್ರ ತತ್ರ ಪುರೋಪಮೇ ।
ನನರ್ತ ಜಾನಕೀ ದೇವೀ ಘೋರಕಾಲೀ ಮಹಾಬಲಾ ॥ ೬೩ ॥

ತದಾ ಚಕಂಪೇ ಪೃಥಿವೀ ನೌರಿವಾನಿಲಚಾಲಿತಾ ।
ಚೇಲುಶ್ಚ ಭೂಧರಾಃ ಸರ್ವೇ ಸಮುದ್ರಾಶ್ಚ ಚಕಂಪಿರೇ ॥ ೬೪ ॥

ಸ್ವರ್ಗಿಣಾಂ ಚ ವಿಮಾನಾನಿ ಖಾತ್ಪೇತುರ್ಭಯತೋ ದ್ವಿಜ ।
ಸೂರ್ಯಸ್ಯ ದುದ್ರುವುರ್ಭೀತಾ ವಾಜಿನೋ ಮುಕ್ತರಶ್ಮಯಃ ॥ ೬೫ ॥

ಯದಾ ನ ಸೇಹೇ ಜಾನಕ್ಯಾ ಭಾರಂ ಸೋಢುಂ ವಸುಂಧರಾ ।
ಗಂತುಮೈಚ್ಛತ ಪಾತಾಳಂ ಸೀತಾಪಾತಾಗ್ರಪೀಡಿತಾ ॥ ೬೬ ॥

---

೬೨-೬೩. ಕೆಲವರು ಮುಂಡದ ಮಾಲೆಯನ್ನು ಧರಿಸಿದ್ದರು. ಕೆಲವರು ಮುಂಡವನ್ನು ಅಲ್ಲಲ್ಲಿಗೆ ಕಟ್ಟಿಕೊಂಡಿದ್ದರು. ಹದ್ದು, ಕಾಗೆ, ನರಿಗಳಿಂದ ಕೂಡಿದ ಮಾಂಸರಕ್ತಗಳಿಂದ ಕೆಸರಾದ ಘೋರವಾದ ಆ ರಣಾಂಗಣದಲ್ಲಿ ಕಾಳಿಯು ಅವತಾರವಾದ ಆ ಜಾನಕಿಯು ಅವರೊಡನೆ ಕುಣಿದಳು.

೬೪-೬೫. ಆಗ ಗಾಳಿಯಿಂದ ಅಲ್ಲಾಡುತ್ತಿರುವ ಹಡಗಿನಂತೆ ಭೂಮಿಯು ಅಲ್ಲಾಡಿತು. ಪರ್ವತಗಳೆಲ್ಲವೂ ಅಲ್ಲಾಡಿದುವು. ಸಮುದ್ರಗಳು ನಡುಗಿದುವು. ದೇವತೆಗಳ ವಿಮಾನವು ಭಯದಿಂದ ಆಕಾಶದಿಂದ ಕೆಳಕ್ಕೆ ಬಿದ್ದುವು. ಸೂರ್ಯ ಸಾರಥಿಯ ಕೈಯ್ಯಿಂದ ಲಗಾಮುಗಳು ಕಳಚಿ ಬೀಳಲು ಆ ಸೂರ್ಯನ ಕುದುರೆಗಳು ಭಯದಿಂದ ಓಡಿದುವು.

೬೬. ಸೀತೆಯು ಕುಣಿಯುತ್ತಿರಲು ಅಂಗುಷ್ಠದಿಂದ ಅಮುಕಲ್ಪಟ್ಟ ಭೂಮಿಯು ಸೀತೆಯ ಭಾರದಿಂದಾದ ನೋವನ್ನು ಸಹಿಸಲಾರದೆ ಹೋಯಿತು. ಆಗ ತಾನು ಪಾತಾಳಕ್ಕೆ ಹೋಗಬೇಕೆಂದು ಮನಸ್ಸು ಮಾಡಿಕೊಂಡಿತು.

ಅಟ್ಟಹಾಸೇನ ಸೀತಾಯಾ ಮಾತೃಣಾಂ ಹುಂ ಕೃತೇನ ಚ ।
ಪ್ರಲಯಂ ಮೇನಿರೇ ಲೋಕಾಃ ಕಿಮೇತದಿತಿ ವಿಹ್ವಲಾಃ ॥ ೬೭ ॥

ಧರಾಪಾತಾಳಗಮನಂ ವಿತರ್ಕ್ಯ ಸುರಸತ್ತಮೈಃ ।
ಸಂಪ್ರಾರ್ಥಿತೋ ಮಹಾದೇವಃ ಸ್ವಯಮಾಯಾದ್ರಣಾಜಿರಂ ॥ ೬೮ ॥

ಜಾನಕ್ಯಾಃ ಪಾದವಿನ್ಯಾಸೇ ಶವರೂಪಧರೋ ಹರಃ ।
ಆತ್ಮಾನಂ ಸ್ತಂಭಯಾಮಾಸ ಧರಣೀಧೃತಿಹೇತವೇ ॥ ೬೯ ॥

ಸರ್ವಭಾರಸಹೋ ದೇವಃ ಸೀತಾಪಾದತಲೇಸ್ಥಿತಃ ।
ಶವರೂಪೋ ವಿರೂಪಾಕ್ಷಃ ಸುಸ್ಥಿತಾಭೂದ್ಧರಾ ತದಾ ॥ ೭೦ ॥

ತಥಾಪ್ಯುಪರಿಗಾ ಲೋಕಾ ನ ಸ್ಥಾತುಂ ಸೇಹಿರೇ ಕ್ಷಣಂ ।
ಸೀತಾಯಾಃ ಪಾದಶಬ್ದೇನ ಶಿರಸಾ ಹುಂ ಕೃತೇನ ಚ ।
ನಿಶ್ವಾಸವಾತಸಂಘಾತೈಃ ದುಃಸ್ಥಿತಾ ಭೂರ್ಭುವಾದಯಃ ॥ ೭೧ ॥

೬೭. ಸೀತೆಯು ಅಟ್ಟಹಾಸದ ನಗುವಿನಿಂದಲೂ, ಮಾತೃಗಳ ಹುಂಕಾರದಿಂದಲೂ ಹೆದರಿದ ಜನಗಳು ಪ್ರಪಂಚದಲ್ಲಿ ಪ್ರಳಯವಾಗುತ್ತದೆಂದೆನ್ನುತ್ತಿದ್ದರು.

೬೮. ದೇವತೆಗಳು ಭೂಮಿಯು ಪಾತಾಳಕ್ಕೆ ಹೋಗಿ ಬಿಡುವುದೆಂದು ಸಂಶಯಪಟ್ಟು ಅವರೆಲ್ಲರೂ ಆ ಮಹಾದೇವನನ್ನು ಕೇಳಿಕೊಳ್ಳಲು ಆ ಮಹಾದೇವನು ತಾನು ಆಗ ಯುದ್ಧರಂಗಕ್ಕೆ ಬಂದನು.

೬೯. ಜಾನಕಿಯು ಕಾಲಿಡುತ್ತಲಿರುವ ಜಾಗಗಳಲ್ಲೆಲ್ಲಾ ಶಿವನು ಶವದ ರೂಪವನ್ನು ಹೊಂದಿ ಭೂಮಿಗೆ ತೊಂದರೆಯಾಗಬಾರದೆಂದು ಬಿದ್ದಿರುತ್ತಿದ್ದನು.

೭೦. ಎಲ್ಲಾ ಭಾರವನ್ನೂ ಹೊರುತ್ತ ಮಹದೇವನು ಸೀತೆಯು ಪಾದತಲದಲ್ಲಿ ಶವರೂಪವಾಗಿ ಬಿದ್ದಿದ್ದನು. ಆಗ ಭೂಮಿಯು ಸ್ಥಿರವಾಗಿಯೂ ಸುಖವಾಗಿಯೂ ನಿಂತಿತು.

೭೧. ಆಮೇಲೆ ಆ ಸೀತೆಯು ಪಾದದ ಶಬ್ದದಿಂದಲೂ ತಲೆಯು ಅಲ್ಲಾಟದಿಂದಲೂ ಹುಂಕಾರದಿಂದಲೂ, ನಿಶ್ವಾಸದ ಗಾಳಿಯಿಂದಲೂ, ಭೂಲೋಕ, ಭುವರ್ಲೋಕ, ಸುವರ್ಲೋಕಗಳು ಬಹುವಾಗಿ ದುಃಖಗೊಂಡುವು.

**ಧರಣಿತನಯಯಾ ಯದ್ಭೀಮನೃತ್ಯಂ ಧರಣ್ಯಾಂ**
**ಕೃತಮಿಹ ಮನಸಾ ತಚ್ಚಿಂತಯಂತೋ ದ್ವಿಜೇಂದ್ರಾಃ ।**
**ಜಯತಿ ಜಯತಿ ಸೀತೇತ್ಯಾಹುರಿಂದ್ರಾದಿದೇವಾಃ**
**ಸಪದಿ ಭುವನಭಂಗಂ ಮನ್ಯಮಾನಾ ವಿಷೇದುಃ ॥ ೭೨ ॥**

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ**
**ಅದ್ಭುತೋತ್ತರಕಾಂಡೇ ಸಹಸ್ರವದನರಾವಣವಧೋ**
**ನಾಮ ತ್ರಯೋವಿಂಶತಿತಮಃ ಸರ್ಗಃ**



೭೨. ಸೀತೆಯು ಭೂಮಿಯಲ್ಲಿ ನರ್ತನ ಮಾಡುತ್ತಿರಲು ಅದನ್ನು ನೋಡಿ ಮಹರ್ಷಿಗಳು ಯೋಚಿಸುತ್ತ ಸೀತೆ ಜಯಜಯ ಎಂದೆನ್ನುತ್ತಿದ್ದರು. ಇಂದ್ರನೇ ಮುಂತಾದ ದೇವತೆಗಳು ಪ್ರಪಂಚವೆಲ್ಲ ನಾಶವಾಗುವುದಲ್ಲ! ಎಂದು ಯೋಚಿಸುತ್ತ ದುಃಖಪಡುತ್ತಿದ್ದರು.

ಇಂತು ವಾಲ್ಮೀಕಿಋಷಿಯಿಂದ ವಿರಚಿತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರಕಾಂಡದಲ್ಲಿ ಸಹಸ್ರವದನ ರಾವಣ ವಧ ಎಂಬ
ಇಪ್ಪತ್ತಮೂರನೆಯ ಸರ್ಗವು.



## ಶ್ರೀಃ

॥ ಶ್ರೀಗುರುಭ್ಯೋ ನಮಃ ॥



# ಅದ್ಭುತರಾಮಾಯಣೇ

## ಅಥ ಚತುರ್ವಿಂಶತಿತಮಃ ಸರ್ಗಃ



**ಸಂರಂಭವೇಗಂ ಸೀತಾಯಾ ವೀಕ್ಷ್ಯ ಬ್ರಹ್ಮಪುರೋಗಮಾಃ ।**
**ಸಲೋಕಪಾಲಾಸ್ತ್ರಿದಶಾ ಋಷಿಭಿಃ ಪಿತೃಭಿಸ್ಸಹ ॥ ೧ ॥**

**ಪ್ರಸಾದಯಿತುಮುದ್ಯುಕ್ತಾ ಸೀತಾಂ ತೇ ತುಷ್ಟುವುಃ ಸುರಾಃ ।**
**ಕೃತಾಂಜಲಿಪುಟಾ ದೇವಾಃ ಪ್ರಣಮ್ಯ ಚ ಪುನಃ ಪುನಃ ॥ ೨ ॥**

**ಬ್ರಹ್ಮಾದ್ಯಾಃ ಸ್ತೋತುಮಾರಬ್ಧಾಃ ಸೀತಾಂ ರಾಕ್ಷಸನಾಶಿನೀಂ ।**
**ಯಾ ಸಾ ಮಾಹೇಶ್ವರೀ ಶಕ್ತಿಃ ಜ್ಞಾನರೂಪಾತಿಲಾಲಸಾ ॥ ೩ ॥**

### ಇಪ್ಪತ್ತನಾಲ್ಕನೆಯ ಸರ್ಗವು.

೧–೨. ಆ ಸೀತೆಯ ಕೋಪದ ವೇಗವನ್ನು ನೋಡಿ ಬ್ರಹ್ಮ ಮುಂತಾದವರೂ ಲೋಕಪಾಲಕರೂ, ಋಷಿಗಳೂ, ಪಿತೃಗಳೂ ಅವಳನ್ನು ಸಮಾಧಾನಗೊಳಿಸಲು ಪ್ರಯತ್ನಪಟ್ಟವರಾಗಿ ಸ್ತೋತ್ರ ಮಾಡುವುದಕ್ಕೆ ಮೊದಲು ಮಾಡಿದರು. ಆ ದೇವಾದಿಗಳು ಕೈ ಮುಗಿದುಕೊಂಡು ಬಾರಿಬಾರಿಗೂ ನಮಸ್ಕರಿಸುತ್ತ ರಾಕ್ಷಸರ ನಾಶಿನಿಯಾದ ಆ ಸೀತೆಯನ್ನು ಸ್ತೋತ್ರ ಮಾಡಿದರು.

೩–೪. ಎಲೈ ಸೀತೆಯೆ ! ನೀನು ಮಾಹೇಶ್ವರೀ ಶಕ್ತಿಯು, ಜ್ಞಾನರೂಪಳು, ಬಹುಪಾದಆಸೆಯುಳ್ಳವಳು, ನೀನೊಬ್ಬಳೇ. ಕಲೆಗಳಿಲ್ಲದತತ್ವರೂಪದಲ್ಲಿದ್ದುಕೊಂಡಿದ್ದೀಯೋ

ಅನನ್ಯಾ ನಿಷ್ಕಲೇ ತತ್ವೇ ಸಂಸ್ಥಿತಾ ರಾಮವಲ್ಲಭಾ ।
ಸ್ವಾಭಾವಿಕೀ ಚ ತ್ವನ್ಮೂಲಾ ಪ್ರಭಾ ಭಾನೋಸ್ತಥಾಮಲಾ ॥ ೪ ॥

ಏಕಾ ಸಾ ವೈಷ್ಣವೀ ಶಕ್ತಿಃ ರಣೇ ಕೋಪಾಧಿವೇಗತಃ ।
ಪರಾಪರೇಣ ರೂಪೇಣ ಕ್ರೀಡಂತೀ ರಾಮಸನ್ನಿಧೌ ॥ ೫ ॥

ಸೇಯಂ ಕರೋತಿ ಸಕಲಂ ತಸ್ಯಾಃ ಕಾರ್ಯಮಿದಂ ಜಗತ್ ।
ನ ಕಾರ್ಯಂ ಚಾಪಿಕರಣಮೀಶ್ವರಶ್ಚೇತಿ ನಿಶ್ಚಯಃ ॥ ೬ ॥

ಚತಸ್ರಃ ಶಕ್ತಯೋ ದೇವ್ಯಾಃ ಸ್ವರೂಪತ್ವೇನ ಸಂಸ್ಥಿತಾಃ ।
ಅಧಿಷ್ಠಾನವಶಾದಸ್ಯಾ ಜಾನಕ್ಯಾ ರಾಮಯೋಷಿತಃ ॥ ೭ ॥

---

ಎಂದರೆ ನಿಷ್ಕಳ ತತ್ವಸ್ವರೂಪಳು, ಆ ರಾಮನಿಗೆ ವಲ್ಲಭಳು, ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಉಂಟಾಗಿರುವುದು. ಆ ನಿನ್ನ ಶಕ್ತಿಯು ಸೂರ್ಯನ ಪ್ರಭೆಯಂತೆ ನಿರ್ಮಲವಾದುದು.

೫. ವೈಷ್ಣವಶಕ್ತಿ ರೂಪಳಾದವಳು ನೀನು. ಯುದ್ಧದಲ್ಲಿ ಕೋಪದ ವೇಗದಿಂದ ಪರರೂಪವಾದ ಮೊದಲಿನ ರೂಪದಿಂದ ರಾಮನ ಸನ್ನಿಧಿಯಲ್ಲಿ ಕ್ರೀಡಿಸುತ್ತಿದ್ದೀಯೆ.

೬. ಆ ಪರಾಪರ ಶಕ್ತಿಯಾದ ನೀನೇ ಎಲ್ಲವನ್ನೂ ಮಾಡುತ್ತೀಯೆ. ಆ ನೀನು ಮಾಡಿದುದೇ ಈ ಪ್ರಪಂಚವು. ಈಶ್ವರನು ಕಾರ್ಯರೂಪನೂ ಅಲ್ಲ, ಕರಣ ರೂಪನೂ ಅಲ್ಲ ಎಂದು ನಿಶ್ಚಯಿಸಿದ್ದಾರೆ.

೭. ಪರಾಪರ ದೇವಿಯು ನಾಲ್ಕು ಬಗೆಯ ಶಕ್ತಿಗಳಾಗಿ ವಿಭಾಗವಾಗಿದ್ದಾಳೆ. ಈ ನಾಲ್ಕು ಶಕ್ತಿಗಳೂ ಆ ನಿನ್ನ ಏಕರೂಪವಾದುವುಗಳೇ, ಅವುಗಳು ಇರತಕ್ಕ ರೀತಿಯೂ ಹೊಂದಿ ಅನುಸರಿಸುವ ರೀತಿಯೂ ಬೇರೆಯಾಗಿ ಬೇರೆಬೇರೆ ಹೆಸರುಗಳನ್ನು ತೆಗೆದುಕೊಳ್ಳುತ್ತವೆ. ರಾಮನ ಹೆಂಡತಿಯು ರೂಪವಾಗಿರುವ ನೀನು ಆ ನಾಲ್ಕು ಶಕ್ತಿಯ ರೂಪಳು.

ಶಾಂತಿರ್ವಿದ್ಯಾ ಪ್ರತಿಷ್ಠಾ ಚ ನಿವೃತ್ತಿಶ್ಚೇತಿ ತಾಃ ಸ್ಮೃತಾಃ ।
ಚತುರ್ವ್ಯೂಹಸ್ತತೋ ದೇವಃ ಪ್ರೋಚ್ಯತೇ ಪರಮೇಶ್ವರಃ ॥ ೮ ॥

ಅನಯಾ ಪರಯಾ ದೇವಃ ಸ್ವಾತ್ಮಾನಂದಂ ಸಮಶ್ನುತೇ ।
ಯತ್ತ್ವಸ್ತ್ಯನಾದಿಸಂಸಿದ್ಧಮೈಶ್ವರ್ಯಮತುಲಂ ಮಹತ್ ॥ ೯ ॥

ತ್ವತ್ಸಂಬಂಧಾದವಾಪ್ತಂ ತದ್ರಾಮೇಣ ಪರಮಾತ್ಮನಾ ।
ಸೈಷಾ ಸರ್ವೇಶ್ವರೀ ದೇವೀ ಸರ್ವಭೂತಪ್ರವರ್ತಿಕಾ ॥ ೧೦ ॥

ತ್ವಯೇದಂ ಭ್ರಾಮ್ಯತೇದೀಶೋ ಮಾಯಾವೀ ಪುರುಷೋತ್ತಮಃ ।
ಸೈಷಾ ಮಾಯಾತ್ಮಿಕಾ ಶಕ್ತಿಃ ಸರ್ವಾಕಾರಾ ಸನಾತನೀ ॥ ೧೧ ॥

ವೈಶ್ವರೂಪ್ಯಂ ಮಹೇಶಸ್ಯ ಸರ್ವದಾ ಸಂಪ್ರಕಾಶಯೇತ್ ।
ಅನ್ಯಾಶ್ಚ ಶಕ್ತಯೋ ಮುಖ್ಯಾಸ್ತ್ವಯಾ ದೇವಿ ವಿನಿರ್ಮಿತಾಃ ॥ ೧೨ ॥

---

೮. ಎಲೈ ತಾಯಿಯೇ! ನೀನು ಶಾಂತಿ, ವಿದ್ಯೆ, ಪ್ರತಿಷ್ಠೆ, ನಿವೃತ್ತಿ ಎಂಬದಾಗಿ ನಾಲ್ಕು ರೂಪವಾದ ಶಕ್ತಿಯುಳ್ಳವಳಾಗಿದ್ದೀಯೆ. ಈ ನಿನ್ನ ನಾಲ್ಕು ಭಾಗಗಳನ್ನು ಹೊಂದಿರುವುದರಿಂದ ಆ ಸ್ವಾಮಿಯನ್ನು ಚತುರ್ವ್ಯೂಹವು (ನಾಲ್ಕು ಗುಂಪು)ಳ್ಳವನೆಂದು ಹೇಳುತ್ತಾರೆ.

೯-೧೦. ಪರಸ್ವರೂಪಳಾದ ನಿನ್ನಿಂದಲೇನೆ ಆ ರಾಮನು ಸ್ವಾತ್ಮಾನಂದವನ್ನು ಅನುಭವಿಸುತ್ತಿರುವುದು. ನಿನಗಾದರೋ ಅನಾದಿಸಿದ್ಧವಾದ ಬಹುವಾದ ಐಶ್ವರ್ಯವಿದೆ. ಇಂತಹ ನಿನ್ನಿಂದಲೇ ಆತ್ಮಾನಂದ ಲಾಭವು ಆ ರಾಮನಾದ ಪರಮಾತ್ಮನಿಗೆ ಸಿಕ್ಕುತ್ತಿರುವದು. ಆ ರೀತಿಯಾದ ಅತುಲೈಶ್ವರ್ಯವುಳ್ಳ ನೀನು ಎಲ್ಲ ಪ್ರಾಣಿಗಳಿಗೂ ನಿಯಂತೃವಾಗಿದ್ದೀಯೆ.

೧೧. ಮಾಯೆಯನ್ನೇ ಧನವಾಗಿವುಳ್ಳ ಆ ಪರಮಾತ್ಮನು ನಿನ್ನಿಂದಲೇನೇ ಈ ಪ್ರಪಂಚವನ್ನು ಮಾಯೆಗೊಳಪಡಿಸಿ ನಡೆಸುತ್ತಿರುವನು. ಆದ್ದರಿಂದಲೇ ನೀನೇ ಮಾಯಾತ್ಮಕೆಯಾದವಳು. ಎಲ್ಲಾ ಆಕಾರವೂ ನಿನಗಿದೆ. ಎಲ್ಲೆಲ್ಲೂ ನೀನಿರುತ್ತಿದ್ದೀಯೆ. ನೀನು ಸನಾತನಳು.

೧೨. ಈ ಮುಖ್ಯ ಶಕ್ತಿಯಾದ ನಿನ್ನಿಂದಲೇನೇ ಆ ಸ್ವಾಮಿಯು ವಿಶ್ವರೂಪತನವನ್ನು ಯಾವಾಗಲೂ ತೋರಿಸುತ್ತಿರುವನು. ಮುಖ್ಯವಾದ ಇನ್ನೂ ಅನೇಕ ಶಕ್ತಿಗಳನ್ನು ನೀನು ಉತ್ಪತ್ತಿ ಮಾಡಿದ್ದೀಯೆ.

ಜ್ಞಾನಶಕ್ತಿಃ ಕ್ರಿಯಾಶಕ್ತಿಃ ಪ್ರಾಣಶಕ್ತಿರಿತಿ ತ್ರಯಂ ।
ಸರ್ವಾಸಾಮೇವ ಶಕ್ತೀನಾಂ ಶಕ್ತಿಮಂತೋ ವಿನಿರ್ಮಿತಾಃ ॥ ೧೩ ॥

ಏಕಾಶಕ್ತಿಃ ಶಿವೋಽಪ್ಯೇಕಃ ಶಕ್ತಿಮಾನುಚ್ಯತೇ ಶಿವಃ ।
ಅಭೇದಂಚಾನುಪಶ್ಯಂತಿ ಯೋಗಿನಸ್ತತ್ವದರ್ಶಿನಃ ॥ ೧೪ ॥

ಶಕ್ತಯೋ ಜಾನಕೀದೇವೀ ಶಕ್ತಿಮಂತೋ ಹಿ ರಾಘವಃ ।
ವಿಶೇಷಃ ಕಥ್ಯತೇ ಚಾಯಂ ಪುರಾಣೇ ತತ್ವದರ್ಶಿಭಿಃ ॥ ೧೫ ॥

ಭೋಗ್ಯಾ ವಿಶ್ವೇಶ್ವರೀ ದೇವೀ ರಘೂತ್ತಮಪತಿವ್ರತಾ ।
ಪ್ರೋಚ್ಯತೇ ಭಗವಾನ್ ಭೋಕ್ತಾ ರಘುವಂಶವಿವರ್ಧನಃ ॥ ೧೬ ॥

ಮಂತಾ ರಾಮೋ ಮತಿಃ ಸೀತಾ ಮಂತವ್ಯಾ ಚ ವಿಚಾರತಃ ।
ಏವಂ ಸರ್ವಗತಂ ಸೂಕ್ಷ್ಮಂ ಕೂಟಸ್ಥಮಚಲಂ ಧ್ರುವಂ ॥ ೧೭ ॥

---

೧೩. ಆ ಶಕ್ತಿಗಳಲ್ಲಿ ಎಲ್ಲಾ ಶಕ್ತಿಗಳಿಗಿಂತಲೂ ಹೆಚ್ಚು ಶಕ್ತಿಗಳುಳ್ಳ ಜ್ಞಾನಶಕ್ತಿ, ಕ್ರಿಯಾಶಕ್ತಿ, ಪ್ರಾಣಶಕ್ತಿಗಳೆಂಬುವನ್ನು ನಿರ್ಮಿಸಿದ್ದೀಯೆ.

೧೪. ಪ್ರಪಂಚದಲ್ಲಿ ಶಕ್ತಿಯಿರತಕ್ಕದ್ದು ಒಂದೇ. ಶಿವನೂ ಒಬ್ಬನೇ ಆದರೆ ಆ ಶಿವನನ್ನು ಶಕ್ತಿಯುಳ್ಳವನೆಂದು ತಿಳಿದು ಶಕ್ತಿಮಂತನೆಂದೆನ್ನುತ್ತಾರೆ. ಆದರೆ ತತ್ವದರ್ಶಿಗಳಾದ ಯೋಗಿಗಳು ಶಕ್ತಿ ಶಿವನು ಅಭೇದವುಳ್ಳವರು ಎಂದು ಹೇಳುತ್ತಾರೆ.

೧೫. ಈ ಶಕ್ತಿಗಳೆಲ್ಲವೂ ಜಾನಕೀದೇವಿಯೇ. ರಾಘವನು ಈ ಶಕ್ತಿಗಳನ್ನು ಹೊಂದಿರತಕ್ಕವನು ಎಂಬುದನ್ನೂ ಹಳಬರಾದ ಋಷಿಗಳು ಹೇಳುತ್ತಾರೆ.

೧೬. ರಘೂತ್ತಮನ ಹೆಂಡತಿಯಾದ ಸೀತೆಯು ರೂಪವಾದ ಶಕ್ತಿಯು ಭೋಗ್ಯಳು (ಅನುಭವ ವಿಷಯಳು) ಎಂದೂ ರಘುವಂಶದಲ್ಲಿ ಹುಟ್ಟಿರುವ ಆ ರಾಮನು ಭೋಕ್ತಾ (ಅನುಭವಿಸುವವನು) ಎಂದು ಹೇಳುತ್ತಾರೆ.

೧೭. ಸೀತೆಯೇ ಮತಿಯು, (ತಿಳಿಯಲು ವಿಷಯಳಾದವಳು) ರಾಮನೇ ಮಂತೃವು (ತಿಳಿಯತಕ್ಕವನು) ಎಂಬದಾಗಿ ವಿಚಾರದಿಂದ ತಿಳಿಯಬರುತ್ತದೆ. ಇದೇನೇ ಎಲ್ಲರಲ್ಲಿಯೂ ಇರುವ ಸೂಕ್ಷ್ಮ ವಿಷಯವು. ಇದೇ ಕೂಟಸ್ಥವೆಂದೂ ಅಚಲವೆಂದೂ, ಧ್ರುವನೆಂದೂ ಎನ್ನಿಸಿಕೊಳ್ಳುತ್ತದೆ.

ಯೋಗಿನಸ್ತತ್ಪ್ರಪಶ್ಯಂತಿ ತವದೇವ್ಯಾಃ ಪರಂಪದಂ ।
ಅನಂತಮಜರಂ ಬ್ರಹ್ಮ ಕೇವಲಂ ನಿಷ್ಕಲಂ ಪರಂ ॥ ೧೮ ॥

ಯೋಗಿನಸ್ತತ್ಪ್ರಪಶ್ಯಂತಿ ತವ ದೇವ್ಯಾಃ ಪರಂಪದಂ ।
ಸಾ ತ್ವಂ ಧಾತ್ರೀವ ಪರಮಾ ಯಾನಂದನಿಧಿಮಿಚ್ಛತಾಂ ॥ ೧೯ ॥

ಸಂಸಾರತಾಪಾನಖಿಲಾನ್ ಹರಸೀಶ್ವರಸಂಶ್ರಯಾತ್ ।
ನೇದಾನೀಂ ಭೂತಸಂಹಾರಸ್ತ್ವಯಾಕಾರ್ಯೋ ಮಹೇಶ್ವರಿ ॥ ೨೦ ॥

ರಾವಣಂ ಸಗಣಂ ಹತ್ವಾ ಜಗತಾಂ ಸುಖಮಾಹಿತಂ ।
ಕಿಂ ಪುನರ್ನೃತ್ಯಕಲಯಾ ಜಗತ್ಸಂಹ್ರಿಯತೇ ತ್ವಯಾ ॥ ೨೧ ॥

ಏತಚ್ಛ್ರುತ್ವಾ ವಿಶಾಲಾಕ್ಷೀ ಬ್ರಹ್ಮಣೋಽಭ್ಯರ್ಥನಂ ವಚಃ ।
ಪ್ರೀತಾ ಸೀತಾ ತದಾಪ್ರಾಹ ಬ್ರಹ್ಮಾಣಂ ಸಹ ದೈವತಂ ॥ ೨೨ ॥

೧೮. ಎಲೈ ದೇವಿಯೇ! ನಿನ್ನ ಆ ಪರಮಪದವು ಉತ್ತಮವಾದುದು. ಅನಂತವಾದುದು. ನಾಶರಹಿತವಾದುದು. ಬ್ರಹ್ಮ ಸ್ವರೂಪವಾದುದು. ಒಂದೇ ಒಂದಾದುದು. ಕಲೆಯಿಲ್ಲದ್ದು ಎಂಬದಾಗಿ ಯೋಗಿಗಳು ತಿಳಿಯುತ್ತಾರೆ.

೧೯. ಆ ನಿನ್ನ ಸ್ಥಳವನ್ನು ಯೋಗಿಗಳು ಬಲ್ಲರು. ಅವರೇ ನೋಡುವವರು ಪರಮಾನಂದವನ್ನು ಇಚ್ಛಿಸುವವರಿಗೆ ಆ ಆನಂದವನ್ನು ಕೊಡತಕ್ಕವಳು ನೀನೇ ಆಗಿದ್ದೀಯೆ.

೨೦. ಎಲೈ ದೇವಿಯೇ! ನೀನು ಈಶ್ವರನನ್ನು ಆಶ್ರಯಿಸಿಕೊಂಡಿರುತ್ತಾ ಸಂಸಾರಗಳ ಎಲ್ಲಾ ತಾಪಗಳನ್ನೂ ನಾಶಮಾಡುತ್ತೀಯೆ. ಎಲೈ ಮಹೇಶ್ವರಿಯೇ! ಆದರೆ ಈಗ ಮಾತ್ರ ಭೂತಗಳನ್ನು ಸಂಹರಿಸಬೇಡ (ಪ್ರಪಂಚವನ್ನು ನಾಶ ಮಾಡಬೇಡ).

೨೧. ಎಲೈ ತಾಯಿಯೇ! ರಾವಣನನ್ನೂ ಅವನ ಕಡೆಯವರನ್ನೂ ಕೊಂದು ಜಗತ್ತಿಗೆ ಶಾಂತಿಯನ್ನುಂಟುಮಾಡಿದ್ದೀಯೆ! ಈ ಜಗತ್ತನ್ನೇ ನಾಶ ಮಾಡಲುದ್ಯುಕ್ತಳಾಗಿದ್ದೀಯೇನು?

೨೨. ಆ ವಿಶಾಲಾಕ್ಷಿಯಾದ ದೇವಿಯು ಬ್ರಹ್ಮನ ಈ ಯಾಚನೆಯ ಮಾತನ್ನು ಕೇಳಿ ಸಂತೋಷಗೊಂಡು ಬ್ರಹ್ಮನನ್ನೂ ದೇವತೆಗಳನ್ನೂ ಕುರಿತು ಇಂತೆಂದಳು.

ಪತಿರ್ಮೇ ಪುಂಡರೀಕಾಕ್ಷಃ ಪುಷ್ಪಕೋಪರಿ ರಾಘವಃ ।
ವಿದ್ಧಃ ಕ್ಷುರಪ್ರೇಣ ಹೃದಿ ಶೇತೇ ಮೃತಕವತ್ ಪ್ರಭುಃ ॥ ೨೩ ॥

ತಸ್ಮಿನ್ನೇವಂ ಸ್ಥಿತೇ ದೇವಾಃ ಕಿಮಿಚ್ಛಾಮಿ ಜಗದ್ಧಿತಂ ।
ಗ್ರಾಸಮೇಕಂ ಕರಿಷ್ಯಾಮಿ ಜಗದೇತಚ್ಚರಾಚರಂ ॥ ೨೪ ॥

ಶ್ರುತ್ವೈತದ್ವಚನಂ ದೇವ್ಯಾಃ ಸಂರಂಭಸಹಿತಂ ಸುರಾಃ ।
ಹಾಹಾಕಾರಂ ಪ್ರಚಕ್ರುಸ್ತೇ ಸಂಚಚಾಲ ಚ ಮೇದಿನೀ ॥ ೨೫ ॥

ತತೋ ಬ್ರಹ್ಮಾಸುರೈಸ್ಸಾರ್ಧಂ ಪುಷ್ಪಕಂ ರಥಮಾಸ್ಥಿತಂ ।
ಶ್ರೀರಾಮಂ ಗ್ರಾಹಯಾಮಾಸ ಸ್ಮೃತಿಂ ಸ್ಪೃಷ್ಟ್ವಾ ಸ್ವಪಾಣಿನಾ ॥ ೨೬ ॥

ಉತ್ತಸ್ಥೌ ಚ ಮಹಾಬಾಹೂ ರಾಮಃ ಕಮಲಲೋಚನಃ ।
ರೇ ರಾವಣ ಸುದುಷ್ಟಸ್ತ್ವಮುದ್ಯಮುದ್ಬಾಣಭೇದಿತಃ ॥ ೨೭ ॥

೨೩. ಎಲೈ ಬ್ರಹ್ಮನೆ! ಪುಂಡರೀಕಾಕ್ಷನೂ ರಾಘವನೂ ಆದ ನನ್ನ ಪತಿಯು ಹರಿತವಾದ ಬಾಣದಿಂದ ವಕ್ಷಸ್ಸಿಗೆ ಹೊಡೆಯಲ್ಪಟ್ಟವನಾಗಿ ಪುಷ್ಪಕದೊಳಗೆ ಜ್ಞಾನವಿಲ್ಲದೆ ಬಿದ್ದಿರುವನು.

೨೪. ಎಲೈ ದೇವತೆಗಳಿರಾ! ಆ ಸ್ವಾಮಿಯು ಹೀಗೆ ಬಿದ್ದಿರುತ್ತಿರುವಾಗ ನನಗೆ ಜಗತ್ತಿಗೆ ಉಪಕಾರ ಮಾಡುವುದು ಬೇಕಾಗಿರುವುದೇ? ಈ ಚರಾಚರವಾದ ಜಗತ್ತನ್ನು ಒಂದೇ ತುತ್ತಿಗೆ ನುಂಗುತ್ತೇನೆ.

೨೫. ದೇವತೆಗಳು ಆ ದೇವತೆಯ ಈ ಕೋಪದ ಮಾತನ್ನು ಕೇಳಿ ಹಾ ಹಾ ಎಂಬುದಾಗಿ ಕೂಗಿದರು. ಆಗ ಭೂಮಿಯು ನಡುಗಿತು.

೨೬. ಆಗ ಬ್ರಹ್ಮನು ದೇವತೆಗಳೊಡನೆ ಪುಷ್ಪಕದ ಬಳಿಗೆ ಹೋಗಿ ಅದರಲ್ಲಿ ಪ್ರಜ್ಞೆಯಿಲ್ಲದೆ ಬಿದ್ದಿದ್ದ ರಾಮನನ್ನು ತನ್ನ ಕೈಯ್ಯಿಂದಲೇ ಮುಟ್ಟಿ ಪ್ರಜ್ಞೆಯನ್ನು ಬರಮಾಡಿದನು.

೨೭-೨೮. ಆಗ ಒಡನೆಯೇ ಕಮಲಲೋಚನನಾದ ರಾಮನು ಎದ್ದನು ಮತ್ತು ಎಲೈ ದುಷ್ಟನಾದ ರಾವಣನೇ! ಈಗ ನಾನು ಬಾಣವನ್ನು ಬಿಡುತ್ತೇನೆ.

ದ್ರಕ್ಷ್ಯಸ್ಯಾಶು ಯಮಸ್ಯಾಸ್ಯಂ ಭೃಕುಟೀಭೀಷಣಾಕೃತಿ ।
ಬ್ರುವನ್ನೇವಂ ಧನುರ್ಗೃಹ್ಯ ಹ್ಯಪಶ್ಯತ್ತ್ರಿದಶಾನ್ ಪುರಃ ॥ ೨೮ ॥

ನಾಪಶ್ಯಜ್ಜಾನಕೀಂ ತತ್ರ ಪ್ರಾಣೇಭ್ಯೋಽಪಿ ಗರೀಯಸೀಂ ।
ನೃತ್ಯಂತೀಂ ಚಾಪರಾಂ ಕಾಳೀಮಪಶ್ಯಚ್ಚ ರಣಾಂಗಣೇ ॥ ೨೯ ॥

ಚತುರ್ಭುಜಾಂ ಲಲಜ್ಜಿಹ್ವಾಂ ಖಡ್ಗಖರ್ಪರಧಾರಿಣೀಂ ।
ಶವರೂಪಮಹಾದೇವ ಹೃದಿ ಸಂಸ್ಥಾಂ ದಿಗಂಬರಾಂ ॥ ೩೦ ॥

ಪಿಬಂತೀಂ ರುಧಿರಂ ಭೀಮಾಂ ಕೋಟರಾಕ್ಷೀಂ ಕ್ಷುಧಾತುರಾಂ ।
ಜಗದ್ಗ್ರಾಸೇ ಕೃತೋತ್ಸಾಹಾಂ ಮುಂಡಮಾಲಾವಿಭೂಷಣಾಂ ॥ ೩೧ ॥

ಆ ಬಾಣದಿಂದ ನೀನು ಪ್ರಾಣವನ್ನು ಕಳೆದುಕೊಂಡು ಹುಬ್ಬನ್ನು ಗಟ್ಟಿಕ್ಕಿಕೊಂಡು ಭಯಂಕರವಾದ ಮುಖವುಳ್ಳ ಆ ಯಮನ ಮುಖವನ್ನು ನೋಡುವಂತೆ ಮಾಡುತ್ತೇನೆ. ಎಂಬದಾಗಿ ಹೇಳುತ್ತ ಧನುಸ್ಸನ್ನು ಹಿಡಿದುಕೊಂಡು ಮೇಲಕ್ಕೇಳಲು ಎದುರಿಗೆ ದೇವತೆಗಳು ನಿಂತಿರುವುದನ್ನು ನೋಡಿದನು.

೨೯. ಅಲ್ಲೆಲ್ಲಾ ನೋಡಿದರೂ ಪ್ರಾಣಕ್ಕಿಂತ ಹೆಚ್ಚಿನವಳಾದ ಜಾನಕಿಯನ್ನು ಕಾಣಲೇ ಇಲ್ಲ. ಆದರೆ ಆ ರಣರಂಗದಲ್ಲಿ ಕುಣಿಯುತ್ತಿರುವ ಮತ್ತೊಬ್ಬ ಹೆಂಗಸಾದ ಕಾಳಿಯನ್ನು ನೋಡಿದನು.

೩೦. ಆಕೆಯು ನಾಲಿಗೆಯನ್ನು ಅಲ್ಲಾಡಿಸುತ್ತಿದ್ದಳು. ಖಡ್ಗವನ್ನೂ ಕಪಾಲವನ್ನೂ ಹಿಡಿದಿದ್ದಳು. ಶವರೂಪವಾಗಿ ಕೆಳಗೆ ಬಿದ್ದಿರುವ ಮಹಾದೇವನ ಎದೆಯ ಮೇಲೆ ದಿಗಂಬರಳಾಗಿ ಕುಣಿಯುತ್ತಿದ್ದಳು.

೩೧. ರಕ್ತವನ್ನು ಕುಡಿಯುತ್ತ ಭಯಾಕಾರವನ್ನು ಹೊಂದಿರುವ ಕಣ್ಣುಗಳು ಒಳಕ್ಕೆ ಹೋಗಿರುವ ಹಸಿವಿನಿಂದ ಕೂಡಿರುವ ಜಗತ್ತನ್ನೇ ನುಂಗಲು ಆಸೆ ಪಡುತ್ತಿರುವ ಮುಂಡಮಾಲೆಯನ್ನು ಧರಿಸಿರುವ ಆಕೆಯನ್ನು ನೋಡಿದನು.

ಭೀಮಾಕಾರಾಭಿರನ್ಯಾಭಿಃ ಕ್ರೀಡಂತೀಂ ರಣಮೂರ್ಧನಿ ।
ಮುಂಡೈ ರಾಕ್ಷಸರಾಜಸ್ಯ ಖೇಲಂತೀಂ ಕಂದುಕಂ ಮುದಾ ॥ ೩೨ ॥

ಪ್ರಲಯಧ್ವಾಂತಧಾರಾಭಾಂ ಸದಾ ಘುರ್ಘುರನಾದಿನೀಂ ।
ಅಂತ್ರಮುಂಡಕರೋಟ್ಯೈಕ್ಷ ಕೃತಮಾಲಾಂ ಚಲತ್ಪದಾಂ ॥ ೩೩ ॥

ಕಬಂಧಾನ್ ರಾಕ್ಷಸಾನಾಂ ಚ ತಯಾ ಸಹ ವಿನೃತ್ಯತಃ ।
ರಥವಾಜಿಗಜಾನಾಂ ಚ ಶಕಲಾನಿ ವ್ಯಲೋಕಯತ್ ॥ ೩೪ ॥

ನೈಕೋಽಪಿ ರಾಕ್ಷಸೋ ಯತ್ರ ಕರಪಾದಶಿರೋಯುತಃ ।
ಕಬಂಧಾ ಯೇ ಚ ನೃತ್ಯಂತಿ ತೇಷಾಂ ಪಾದಾಃ ಪ್ರತಿಷ್ಠಿತಾಃ ॥ ೩೫ ॥

ಕಬಂಧಂ ರಾವಣಸ್ಯಾಪಿ ನೃತ್ಯಂತಂ ಚ ವ್ಯಲೋಕಯತ್ ।
ತದ್ದೃಷ್ಟ್ವಾ ಸುಮಹಾಘೋರಂ ಪ್ರೇತರಾಜಪುರೋಪಮಂ ॥ ೩೬ ॥

೩೨. ತನ್ನಂತೆಯೇ ಭಯಂಕರವಾದ ಆಕಾರವುಳ್ಳ ಬೇರೆ ಮಾತೃಗಳೊಡನೆ ರಣರಂಗದಲ್ಲಿ ಆಟವಾಡುತ್ತಿದ್ದಳು. ಮತ್ತು ಆ ಸಹಸ್ರರಾವಣನ ತಲೆಯಿಂದ ಚಂಡಾಟವನ್ನು ಆಡುತ್ತಿದ್ದಳು.

೩೩. ಪ್ರಳಯಕಾಲದ ಕತ್ತಲೆಯಂತೆ ಇದ್ದಳು. ಕ್ರೂರವಾಗಿ ಶಬ್ದ ಮಾಡುತ್ತಿದ್ದಳು. ಕರುಳು, ತಲೆ, ಕಪಾಲ ಇವುಗಳನ್ನು ಜಪಸರವನ್ನಾಗಿ ಮಾಡಿಕೊಂಡಿದ್ದಳು. ಕುಣಿಯುತ್ತಿದ್ದಳು. ಇಂತಹವಳನ್ನು ನೋಡಿದನು.

೩೪. ರಾಕ್ಷಸರ ರುಂಡಗಳೂ ಅವಳೊಡನೆ ಕುಣಿಯುತ್ತಿದ್ದುವು. ರಥ, ಕುದುರೆ, ಆನೆಗಳು ಕತ್ತರಿಸಿ ಬಿದ್ದಿರುವುದನ್ನು ಅಲ್ಲಿ ನೋಡಿದನು.

೩೫. ಕೈಕಾಲು, ತಲೆಗಳಿಂದ ಕೂಡಿದ ರಾಕ್ಷಸನು ಅಲ್ಲಿ ಒಬ್ಬನೂ ಇರಲೇ ಇಲ್ಲ. ಅಲ್ಲಿ ಕುಣಿಯುತ್ತಿದ್ದ ಕಬಂಧಗಳಿಗೆ (ರುಂಡಗಳಿಗೆ) ಮಾತ್ರ ಕಾಲುಗಳಿದ್ದುವು.

೩೬–೩೭. ಆ ಸಹಸ್ರಕಂಠರಾವಣನ ರುಂಡವೂ ಅಲ್ಲಿ ಕುಣಿಯುತ್ತಿದ್ದುದನ್ನು ನೋಡಿದನು. ಆ ರಣರಂಗವೆಲ್ಲವೂ ಯಮನ ಪಟ್ಟಣದಂತಿದ್ದಿತು. ಅದನ್ನು

ಕಾಳೀಂ ಚ ವೀಕ್ಷ್ಯ ನೃತ್ಯಂತೀಂ ಮಾತೃಭಿಃ ಸಹಿತಾಂ ದ್ವಿಜ ।
ಪಪಾತ ಹಸ್ತಾದ್ರಾಮಸ್ಯ ವೇಪತಃ ಸಶರಂ ಧನುಃ ॥ ೩೭ ॥

ಭಯಾಚ್ಚ ನಿಮಿಮೀಲಾಶು ರಾಮಃ ಪದ್ಮವಿಲೋಚನೇ ।
ಇತ್ಯೇವಂ ವಿಸ್ಮಿತಂ ದೃಷ್ಟ್ವಾ ಬ್ರಹ್ಮೋವಾಚ ರಘೂತ್ತಮಂ ॥ ೩೮ ॥

ತ್ವಾಂ ದೃಷ್ಟ್ವಾ ವಿಹ್ವಲಂ ಸೀತಾ ಕ್ರುದ್ಧಂ ಚಾಪಿ ಚ ರಾವಣಂ ।
ರಥಾದವಸ್ಕಂದ್ಯ ಸತೀ ಪಪಾತ ರಣಮೂರ್ಧನಿ ॥ ೩೯ ॥

ಭೀಮಾಂ ಚ ಮೂರ್ತಿಮಾಲಂಬ್ಯ ರೋಮಕೂಪಾಚ್ಚ ಮಾತೃಕಾಃ ।
ನಿರ್ಮಾಯ ತಾಭಿಃ ಸಹಿತಾ ಹತ್ವಾ ರಾವಣಮಗ್ರತಃ ॥ ೪೦ ॥

ರಕ್ಷಸಾಂ ನಿಧನಂ ಕೃತ್ವಾ ನೃತ್ಯಂತೀಯಂ ವ್ಯವಸ್ಥಿತಾ
ಅನಯಾ ಸಹಿತೋ ರಾಮಸೃಜಸ್ಯವಸಿ ಹಂಸಿ ಚ ॥ ೪೧ ॥

---

ನೋಡಿದನು. ಕಾಳಿಯೂ ತನ್ನ ಜೊತೆಯವರ ಕೂಡ ಕುಣಿಯುತ್ತಿದ್ದುದನ್ನು ನೋಡಿದನು. ಒಡನೆಯೇ ರಾಮನಿಗೆ ನಡುಕವು ಬಂದಿತು. ಕೈಗಳಿಂದ ಧನಸ್ಸೂ ಬಾಣಗಳೂ ಬಿದ್ದುಹೋದುವು,

೩೮. ರಾಮನು ಇದನ್ನು ನೋಡಿ ಹೆದರಿದವನಾಗಿ ತಾನು ಕಣ್ಣುಗಳನ್ನು ಮುಚ್ಚಿಕೊಂಡನು. ಬ್ರಹ್ಮನು ಈ ಆಶ್ಚರ್ಯವನ್ನು ನೋಡಿ ರಾಮನನ್ನು ಕುರಿತು ಇತೆಂದನು.

೩೯. ಸೀತೆಯು ನೀನು ದುಃಖಪಡುತ್ತಿದ್ದುದನ್ನೂ ರಾವಣನು ಕೋಪಗೊಂಡದ್ದನ್ನೂ ನೋಡಿ ರಥದಿಂದ ಆ ರಣರಂಗಕ್ಕೆ ಧುಮ್ಮಿಕ್ಕಿದಳು.

೪೦. ಒಡನೆಯೇ ಭಯಂಕರವಾದ ಆಕಾರವನ್ನು ಹೊಂದಿ ತನ್ನ ರೋಮಕೂಪದಿಂದ ಮಾತೃಕೆಗಳನ್ನು ನಿರ್ಮಿಸಿ ಅವರೊಡನೆ ಆ ಸಹಸ್ರಕಂಠನನ್ನು ಕೊಂದು ಉಳಿದ ರಾಕ್ಷಸರನ್ನೂ ಕೊಂದು ಕುಣಿಯುತ್ತಾ ಇದ್ದಾಳೆ.

೪೧-೪೨. ಎಲೈ ರಾಮನೆ! ನೀನು ಇವಳೊಡನೆ ಕೂಡಿಕೊಂಡರೇನೇ ಸೃಷ್ಟಿಸುವ, ಕಾಪಾಡುವ, ನಾಶಮಾಡುವ ಶಕ್ತಿಯನ್ನು ಹೊಂದುತ್ತೀಯೆ. ಇವಳಿಲ್ಲದಿದ್ದರೆ

ನಾನಯಾ ರಹಿತೋ ರಾಮ ಕಿಂಚಿತ್ಕರ್ತುಮಪಿ ಕ್ಷಮಃ ।
ಇತಿ ಬೋಧಯಿತುಂ ಸೀತಾ ಚಕಾರ ತದನಿಂದಿತಾ || ೪೨ ||

ಪಶ್ಯೈತಾಂ ಜಾನಕೀಂ ರಾಮ ತ್ಯಜ ಭೀತಿಂ ಮಹಾಭುಜ ।
ನಿರ್ಗುಣಾಂ ಸಗುಣಾಂ ಸಾಕ್ಷಾತ್ ಸದಸದ್ವ್ಯಕ್ತಿವರ್ಜಿತಾಂ || ೪೩ ||

ಇತ್ಯೇತದ್ಬ್ರಹ್ಮಣ ವಚೋನಿಶಮ್ಯ ರಾಮಃ
ಶ್ರುತಿಸುಖಮಾತ್ಮಹಿತಂ ಪರಾಭಿಮರ್ದೀ ।
ಶುಚಮನುವಿಜಹೌ ವಿಚಾರ್ಯ ಕಿಂಚಿತ್
ಜನಕಸುತಾಮನುಪಶ್ಯತಿ ಸ್ಮ ಪಶ್ಚಾತ್ || ೪೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯ ಆದಿಕಾವ್ಯೇ
ಅದ್ಭುತೋತ್ತರಕಾಂಡೇ ರಾಮಾಶ್ವಾಸನಂ ನಾಮ
ಚತುರ್ವಿಂಶತಿತಮಃ ಸರ್ಗಃ

ನೀನೊಬ್ಬನೇ ಯಾವುದನ್ನೂ ಮಾಡಲಾರೆ ಎಂಬುದನ್ನು ತಿಳಿಸುವುದಕ್ಕೋಸ್ಕರ ಈ ರೀತಿಯಾಗಿ ಕುಣಿಯುತ್ತಲಿದ್ದಾಳೆ.

೪೩. ಎಲೈ ರಾಮನೇ! ಇವಳು ಜಾನಕಿಯು. ಈಕೆಯನ್ನು ನೋಡು. ಹೆದರಿಕೆಯನ್ನು ಬಿಡು. ಇವಳು ನಿರ್ಗುಣಳಾದ ರೂಪಗುಣಗಳುಳ್ಳವಳಾಗಿದ್ದಾಳೆ. ಆದ್ದರಿಂದ ಈಕೆಗೆ ಸದ್ವ್ಯಕ್ತಿಯೆಂದಾಗಲಿ, ಅಸದ್ವ್ಯಕ್ತಿಯೆಂದಾಗಲಿ ಭೇದವಿರುವುದಿಲ್ಲ. ಈಕೆಯನ್ನು ನೋಡು.

೪೪. ಕಿವಿಗಳಿಗೆ ಇಂಪಾಗಿರುವ ಹಿತವಾಗಿರುವ ಬ್ರಹ್ಮನು ಹೇಳಿದ ಈ ಮಾತುಗಳನ್ನು ಪರಬಲ ನಾಶಕನಾದ ರಾಮನು ಕೇಳಿ ಒಡನೆಯೆ ದುಃಖವನ್ನು ಬಿಟ್ಟುಬಿಟ್ಟನು. ಅನಂತರ ಆ ಜನಕನ ಮಗಳಾದ ಸೀತೆಯನ್ನು ನೋಡಿದನು.

ಇಂತು ವಾಲ್ಮೀಕಿಋಷಿ ಪ್ರೋಕ್ತವಾದ ಆದಿಕಾವ್ಯವಾದ ಶ್ರೀಮದ್ರಾಮಾಯಣದ
ಅದ್ಭುತೋತ್ತರ ಕಾಂಡದಲ್ಲಿ ಶ್ರೀರಾಮಾಶ್ವಾಸನವೆಂಬ
ಇಪ್ಪತ್ತನಾಲ್ಕನೆಯ ಸರ್ಗವು.

ಶ್ರೀಃ

॥ ಶ್ರೀಗುರುಭ್ಯೋ ನಮಃ ॥

---

# ಅದ್ಭುತರಾಮಾಯಣೇ

## ಅಥ ಪಂಚವಿಂಶತಿತಮಃ ಸರ್ಗಃ

ಬ್ರಹ್ಮಣೋ ವಚನಂ ಶ್ರುತ್ವಾ ರಾಮಃ ಕಮಲಲೋಚನಃ ।
ಪ್ರೋನ್ಮೀಲ್ಯ ಶನಕೈರಕ್ಷಿ ವೇಪಮಾನೋ ಮಹಾಭುಜಃ ॥ ೧ ॥

ಪ್ರಣಮ್ಯ ಶಿರಸಾ ಭೂಮೌ ತೇಜಸಾ ಚಾಪಿ ವಿಹ್ವಲಃ ।
ಭೀತಃ ಕೃತಾಂಜಲಿಪುಟಃ ಪ್ರೋವಾಚ ಪರಮೇಶ್ವರೀಂ ॥ ೨ ॥

ಕಾ ತ್ವಂ ದೇವಿ ವಿಶಾಲಾಕ್ಷಿ ಶಶಾಂಕಾವಯವಾಂಕಿತೇ ।
ನ ಜಾನೇ ತ್ವಾಂ ಮಹಾದೇವಿ ಯಥಾವದ್ಬ್ರೂಹಿ ಪೃಚ್ಛತೇ ॥ ೩ ॥

## ಇಪ್ಪತ್ತೈದನೆಯ ಸರ್ಗವು.

೧-೨. ಕಮಲಲೋಚನನಾದ ರಾಮನು ಬ್ರಹ್ಮನು ಹೇಳಿದುದನ್ನು ಕೇಳಿ ಮೆಲ್ಲಗೆ ಕಣ್ಣುಗಳನ್ನು ಬಿಟ್ಟು ನಡುಗುತ್ತಿರುವವನಾಗಿಯೇ ಆಕೆಯ ತೇಜಸ್ಸಿನಿಂದ ಹೆದರಿದವನಾಗಿ ಭೂಮಿಯಲ್ಲಿಯೇ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದನು.

೩. ಎಲೈ ವಿಶಾಲಾಕ್ಷಿಯೇ! ನೀನು ಯಾರು? ಚಂದ್ರನನ್ನು ಧರಿಸಿರುವೆಯಲ್ಲ? ಎಲೈ ದೇವಿಯೆ! ನೀನು ಯಾರೆಂಬುದನ್ನು ನಾನು ತಿಳಿಯೆನು. ಪ್ರಶ್ನಿಸುತ್ತಿರುವ ನನಗೆ ಸರಿಯಾದ ವಿಷಯವನ್ನು ಹೇಳು.

ರಾಮಸ್ಯ ವಚನಂ ಶ್ರುತ್ವಾ ತತಃ ಸಾ ಪರಮೇಶ್ವರೀ ।
ವ್ಯಾಜಹಾರ ರಘುವ್ಯಾಘ್ರಂ ಯೋಗಿನಾಮಭಯಪ್ರದಾ ॥ ೪ ॥

ಮಾಂ ವಿದ್ಧಿ ಪರಮಾಂ ಶಕ್ತಿಂ ಮಹೇಶ್ವರಸಮಾಶ್ರಯಾಂ ।
ಅನನ್ಯಾಮವ್ಯಯಾಮೇಕಾಂ ಯಾಂ ಪಶ್ಯಂತಿ ಮುಮುಕ್ಷವಃ ॥ ೫ ॥

ಅಹಂ ವೈ ಸರ್ವಭಾವಾನಾಂ ಆತ್ಮಾ ಸರ್ವಾಂತರಾ ಶಿವಾ ।
ಶಾಶ್ವತೀ ಸರ್ವವಿಜ್ಞಾನಾ ಸರ್ವಮೂರ್ತಿಪ್ರವರ್ತಿಕಾ ॥ ೬ ॥

ಅನಂತಾನಂತಮಹಿಮಾ ಸಂಸಾರಾರ್ಣವತಾರಿಣೀ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯಮೇ ಪದಮೈಶ್ವರಂ ॥ ೭ ॥

ಇತ್ಯುಕ್ತ್ವಾ ನಿರರಾಮೈಷಾ ರಾಮೋऽಪಶ್ಯಚ್ಚ ತತ್ಪದಂ ।
ಕೋಟಿಸೂರ್ಯ ಪ್ರತೀಕಾಶಂ ವಿಶ್ವಕ್ ತೇಜೋ ನಿರಾಕುಲಂ ॥ ೮ ॥

---

೪. ಆಗ ಆ ಪರಮೇಶ್ವರಿಯು ರಾಮನು ಹೇಳಿದುದನ್ನು ಕೇಳಿ ರಘುವಂಶ ಶ್ರೇಷ್ಠನಾದ ಆ ರಾಮನನ್ನು ಕುರಿತು ಇಂತೆಂದಳು.

೫. ನಾನು ಮಹೇಶ್ವರನನ್ನು ಆಶ್ರಯಿಸಿಕೊಂಡಿರುವ ಪರಮ ಶಕ್ತಿಯು. ನಾನಾ ಮುಖವುಳ್ಳವಳು, ನಾಶರಹಿತಳು, ಅದ್ವಿತೀಯಳು, ಮೋಕ್ಷವನ್ನು ಅಪೇಕ್ಷಿಸುವರು ಯಾವುದನ್ನು ನೋಡುವರೋ ಅವಳೇ ನಾನು.

೬-೭. ನಾನೇ ಎಲ್ಲಾ ಪ್ರಾಣಿಗಳಿಗೂ ಆತ್ಮವು. ನಾನು ಎಲ್ಲದರಲ್ಲಿಯೂ ಇದ್ದೇನೆ. ಮಂಗಳರೂಪಳು. ಶಾಶ್ವತಳು. ವಿಜ್ಞಾನರೂಪಳು. ಸರ್ವಮೂರ್ತಿಗಳನ್ನು ಕೆಲಮಾಡುವಂತೆ ಮಾಡತಕ್ಕವಳು. ನಾನು ಅಂತವಿಲ್ಲದವಳು. ಅನೇಕವಾದ ಮಹಿಮೆಯುಳ್ಳವಳು. ಸಂಸಾರವೆಂಬ ಸಮುದ್ರವನ್ನು ದಾಟಿಸತಕ್ಕವಳು. ನಿನಗೆ ದಿವ್ಯವಾದ ಕಣ್ಣುಗಳನ್ನು ಕೊಡುತ್ತೇನೆ. ನನ್ನ ಐಶ್ವರ್ಯವನ್ನೂ ನನ್ನ ಸ್ಥಾನವನ್ನೂ ನೋಡು.

೮. ಈ ರೀತಿಯಾಗಿ ಹೇಳಿ ಅವಳು ಸುಮ್ಮನಾಗಲು ಶ್ರೀರಾಮನು ಆಕೆಯ ರೀಯನ್ನೂ ಜಾಗವನ್ನೂ ನೋಡಿದನು. ಅವಳ ಸ್ಥಾನವು ಕೋಟಿಸೂರ್ಯರಂತೆ ಪ್ರಕಾಶವಾಗಿದ್ದಿತು. ಎಲ್ಲಾ ಕಡೆಯಲ್ಲಿಯೂ ತೇಜಸ್ಸಿನಿಂದ ಕೂಡಿದ್ದಿತು. ಯಾವ ತೊಂದರೆಯೂ ಇರಲಿಲ್ಲ.

ಜ್ವಾಲಾವಳಿ ಸಹಸ್ರಾಢ್ಯಂ ಕಾಲಾನಲಶತೋಪಮಂ ।
ದಂಷ್ಟ್ರಾ ಕರಾಳಂ ದುರ್ಧರ್ಷಂ ಜಟಾಮಂಡಲಮಂಡಿತಂ ॥ ೯ ॥

ತ್ರಿಶೂಲವರಹಸ್ತಂ ಚ ಘೋರರೂಪಂ ಭಯಾವಹಂ ।
ಪ್ರಶಾಮ್ಯತ್ಸೌಮ್ಯವದನಮನಂತೈಶ್ವರ್ಯಸಂಯುತಂ ॥ ೧೦ ॥

ಚಂದ್ರಾವಯವಲಕ್ಷ್ಮಾಢ್ಯಂ ಚಂದ್ರಕೋಟಿ ಸಮಪ್ರಭಂ ।
ಕಿರೀಟಿನಂ ಗದಾಹಸ್ತಂ ನೂಪುರೈರುಪಶೋಭಿತಂ ॥ ೧೧ ॥

ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।
ಶಂಖಚಕ್ರಕರಂ ಕಾಮ್ಯಂ ತ್ರಿನೇತ್ರಂ ಕೃತ್ತಿವಾಸಸಂ ॥ ೧೨ ॥

ಅಂತಸ್ಥಂ ಚಾಂಡಬಾಹ್ಯಸ್ಥಂ ಬಾಹ್ಯಾಭ್ಯಂತರತಃ ಪರಂ ।
ಸರ್ವಶಕ್ತಿಮಯಂ ಶಾಂತಂ ಸರ್ವಾಕಾರಂ ಸನಾತನಂ ॥ ೧೩ ॥

---

೯. ಸಾವಿರಾರು ಜ್ವಾಲೆಗಳಿಂದ ಕೂಡಿದ್ದಿತು. ಸಾವಿರಾರು ಕಾಲಾಗ್ನಿಗಳಿಗೆ ಸಮವಾಗಿದ್ದಿತು. ಕೋರೆಯ ಹಲ್ಲಿನಿಂದ ಭಯಂಕರವಾಗಿದ್ದಿತು. ಸಹಿಸುವುದಕ್ಕಾಗದ್ದು. ಜಟೆಯ ಮಂಡಲಗಳನ್ನು ಸುತ್ತಿಕೊಂಡಿದ್ದಿತು.

೧೦. ಕೈಯ್ಯಲ್ಲಿ ತ್ರಿಶೂಲಗಳಿದ್ದುವು. ಘೋರವಾದ ರೂಪವಿದ್ದಿತು. ಎಲ್ಲರಿಗೂ ಭಯಂಕರವಾಗಿದ್ದಿತು. ಮುಖವು ಶಾಂತವಾಗಿ ಮನೋಹರವಾಗಿದ್ದಿತು. ಬಹುವಾದ ಐಶ್ವರ್ಯದಿಂದ ಕೂಡಿದ್ದಿತು.

೧೧. ತಲೆಯು ಅರ್ಧಚಂದ್ರನಿಂದ ಕೂಡಿಕೊಂಡಿದ್ದಿತು. ಮುಖವು ಕೋಟಿ ಚಂದ್ರರ ಸಮವಾದ ಕಾಂತಿಯುಳ್ಳದಾಗಿದ್ದಿತು. ಕಿರೀಟವನ್ನು ಹಾಕಿಕೊಂಡಿದ್ದಳು. ಕೈಯಲ್ಲಿ ಗದೆಯು ಇದ್ದಿತು. ಕಾಲುಗಡಗಗಳನ್ನು ಹಾಕಿಕೊಂಡಿದ್ದಳು.

೧೨. ದಿವ್ಯವಾದ ಮಾಲೆಯನ್ನೂ, ಬಟ್ಟೆಗಳನ್ನೂ ಧರಿಸಿದ್ದಳು. ದಿವ್ಯವಾದ ಗಂಧವನ್ನು ತೊಡೆದುಕೊಂಡಿದ್ದಳು. ಶಂಖಚಕ್ರಗಳನ್ನು ಕೈಯ್ಯಲ್ಲಿ ಧರಿಸಿದ್ದಳು. ಮೂರು ಕಣ್ಣುಗಳಿದ್ದುವು. ಆನೆಯ ಚರ್ಮವನ್ನು ಧರಿಸಿದ್ದಳು.

೧೩. ಪ್ರಪಂಚರೂಪವಾದ ಅಂಡಗಳು ಅವಳ ಒಳಗೂ ಹೊರಗೂ ಇದ್ದುವು. ಸರ್ವ ಶಕ್ತಿ ರೂಪಳಾಗಿದ್ದಳು. ಶಾಂತಳಾಗಿದ್ದಳು. ಸರ್ವಾಕಾರಳಾಗಿದ್ದಳು. ಸನಾತನಳು.

ಬ್ರಹ್ಮೇಂದ್ರೋಪೇಂದ್ರಯೋಗೀಂದ್ರೈರೀಡ್ಯಮಾನಪದಾಂಬುಜಂ ।
ಸರ್ವತಃ ಪಾಣಿಪಾದಂ ತತ್ ಸರ್ವತೋಕ್ಷಿ ಶಿರೋಮುಖಂ ॥ ೧೪ ॥

ಸರ್ವಮಾವೃತ್ಯ ತಿಷ್ಠಂತಂ ದದರ್ಶ ಪದಮೈಶ್ವರಂ ।
ದೃಷ್ಟ್ವಾ ಚ ತಾದೃಶಂ ರೂಪಂ ದಿವ್ಯಂ ಮಾಹೇಶ್ವರಂ ಪದಂ ॥ ೧೫ ॥

ತಥೈವ ಚ ಸಮಾವಿಷ್ಟಃ ಸ ರಾಮೋ ಹೃತಮಾನಸಃ ।
ಆತ್ಮನ್ಯಾಧಾಯ ಚಾತ್ಮಾನಮೋಂಕಾರಂ ಸಮನುಸ್ಮರನ್ ॥ ೧೬ ॥

ನಾಮ್ನಾಮಷ್ಟಸಹಸ್ರೇಣ ತುಷ್ಟಾವ ಪರಮೇಶ್ವರೀಂ ।
ಓಂ ಸೀತೋಮಾ ಪರಮಾಶಕ್ತಿಃ ಅನಂತಾ ನಿಷ್ಕಲಾಮಲಾ ॥ ೧೭ ॥

---

೧೪. ಬ್ರಹ್ಮ, ಇಂದ್ರ, ಉಪೇಂದ್ರ, ಯೋಗೀಂದ್ರರುಗಳು, ಆಕೆಯ ಪಾದಗಳನು ಸ್ತುತಿಸುತ್ತಿರುವರು. ಕೈಕಾಲುಗಳು ಎಲ್ಲ ಕಡೆಗೂ ಇದ್ದವು. ತಲೆ, ಕಣ್ಣು, ಮುಖಗಳು ಎಲ್ಲ ಕಡೆಗೂ ಇದ್ದವು.

೧೫. ಎಲ್ಲವನ್ನೂ ಆವರಿಸಿಕೊಂಡಿದ್ದಳು. ಇಂತಹ ಪರಮೈಶ್ವರ್ಯವನ್ನು ನೋಡಿದನು. ಆ ರೀತಿಯಾದ ರೂಪವನ್ನೂ ಆ ಮಹೇಶ್ವರಪದವನ್ನೂ ನೋಡಿ ಅದಕ್ಕೆ ಮನಸ್ಸುಕೊಟ್ಟು ಮೈಮರೆತು ಹಾಗೆಯೇ ಕುಳಿತನು

೧೬. ಆತ್ಮನಲ್ಲಿಯೇ ಮನಸ್ಸಿಟ್ಟು ಓಂಕಾರವನ್ನು ಸ್ಮರಿಸುತ್ತ ಸಾವಿರದ ಎಂಟು ನಾಮಗಳಿಂದ ಆಕೆಯನ್ನು ಸ್ತುತಿಸಿದನು.

೧೭. ನೀನೇ ಸೀತೆಯು. ಉಮೆಯು. ಪರಮಶಕ್ತಿಯು. ಕೊನೆಯಿಲ್ಲದವಳು. ಪವಿತ್ರಳು. ಶಾಂತಿಯುಳ್ಳವಳು. ಮಹೇಶ್ವರಿಯು. ನಿತ್ಯೆಯು. ಶಾಶ್ವತಳಾದವಳು. ಉತ್ಕೃಷ್ಟಳು. ನಾಶರಹಿತಳು ನಿನ್ನ ಸ್ಥಿತಿಯನ್ನು ಯೋಚಿಸುವುದಕ್ಕಾಗದಷ್ಟು ಸೂಕ್ಷ್ಮ ರೀತಿಯಲ್ಲಿರುವಳು. ಒಬ್ಬಂಟಿಗಳು. ಕೊನೆಯಿಲ್ಲವಳು. ಮಂಗಳಾಕಾರಕಳು. ಪರಮಾತ್ಮಸ್ವರೂಪಳು.

ಶಾಂತಾ ಮಾಹೇಶ್ವರೀ ನಿತ್ಯಾ ಶಾಶ್ವತೀ ಪರಮಾಕ್ಷರಾ ।
ಅಚಿಂತ್ಯಾ ಕೇವಲಾನಂತಾ ಶಿವಾತ್ಮಾ ಪರಮಾತ್ಮಿಕಾ ॥ ೧೮ ॥

ಅನಾದಿರವ್ಯಯಾ ಶುದ್ಧಾ ದೇವಾತ್ಮಾ ಸರ್ವಗೋಚರಾ ।
ಏಕಾನೇಕವಿಭಾಗಸ್ಥಾ ಮಾಯಾತೀತಾ ಸುನಿರ್ಮಲಾ ॥ ೧೯ ॥

ಮಹಾಮಾಹೇಶ್ವರೀ ಶಕ್ತಾ ಮಹಾದೇವೀ ನಿರಂಜನಾ ।
ಕಾಷ್ಠಾ ಸರ್ವಾಂತರಸ್ಥಾ ಚ ಚಿಚ್ಛಕ್ತಿರತಿಲಾಲಸಾ ॥ ೨೦ ॥

ಜಾನಕೀ ಮಿಥಿಲಾನಂದಾ ರಾಕ್ಷಸಾಂತವಿಧಾಯಿನೀ ।
ರಾವಣಾಂತಕರೀರಮ್ಯಾ ರಾಮವಕ್ಷಃಸ್ಥಲಾಲಯಾ ॥ ೨೧ ॥

ಉಮಾ ಸರ್ವಾತ್ಮಿಕಾ ವಿದ್ಯಾ ಜ್ಯೋತೀರೂಪಾಽಯುತಾಕ್ಷರೀ ।
ಶಾಂತಿಃ ಪ್ರತಿಷ್ಠಾ ಸರ್ವೇಷಾಂ ನಿವೃತ್ತಿರಮೃತಪ್ರದಾ ॥ ೨೨ ॥

---

೧೮. ಆದಿಯಿಲ್ಲದವಳು. ನಾಶರಹಿತಳು. ಶುದ್ಧಳು. ದೇವಸ್ವರೂಪಳು. ಎಲ್ಲದರಲ್ಲಿಯೂ ಕಾಣತಕ್ಕವಳು. ಒಂದೇ ಒಂದಾಗಿ ಇರುವವಳು. ಅನೇಕ ರೀತಿಯಾಗಿಯೂ ಇರುವಳು. ಮಾಯೆಗೆ ಸಿಕ್ಕದವಳು. ನಿರ್ಮಲಳಾದವಳು.

೧೯. ಮಹೇಶ್ವರಿಯು. ಶಕ್ತಳು. ಮಹಾದೇವಿಯು. ಒಂದರ ಗುಣವನ್ನೂ ಹೊಂದದವಳು. ಕಡೆಯುವಳು, ಎಲ್ಲರ ಒಳಗೂ ಇರತಕ್ಕವಳು. ಚಿಚ್ಛಕ್ತಿ ಸ್ವರೂಪಳು. ಹೆಚ್ಚು ಆಸೆಯುಳ್ಳವಳು.

೨೦–೨೧. ಜನಕನ ಮಗಳು ಮಿಥಿಲಾ ದೇಶಕ್ಕೆ ಆನಂದರೂಪಳು. ರಾಕ್ಷಸರನ್ನು ನಾಶಮಾಡುವವಳು. ರಾವಣನನ್ನು ನಾಶಮಾಡಿದವಳು. ಮನೋಹರಳು. ರಾಮನ ಹೃದಯದಲ್ಲಿಯೇ ಮನೆ ಮಾಡಿಕೊಂಡಿರುವವಳು. ಉಮಾರೂಪಳು. ಸರ್ವರಲ್ಲಿಯೂ ಆತ್ಮರೂಪದಿಂದಿರುವವಳು. ವಿದ್ಯಾರೂಪಳು. ಜ್ಯೋತಿಸ್ಸಿನ ರೂಪಳು. ವಿಷಮವಾದ ಅಕ್ಷರಗಳುಳ್ಳವಳು. ಶಾಂತಿರೂಪಳು. ಎಲ್ಲವನ್ನೂ ಪ್ರತಿಷ್ಠೆಮಾಡುವವಳು. ಬಿಡಿಸತಕ್ಕವಳು. ಅಮೃತವನ್ನು ಕೊಡತಕ್ಕವಳು. ಮೋಕ್ಷದಾತ್ರಿಯು.

೨೨–೨೪. ಆಕಾಶವೇ ದೇಹವಾಗಿರುವವಳು. ಆಕಾಶಸ್ವರೂಪಳು. ಆಕಾಶವೇ ಆಧಾರವಾಗಿ ಉಳ್ಳವಳು. ಇಂದ್ರಿಯಗಳಿಗೆ ಸ್ವಾಧೀನವಾಗದಿರುವವಳು.

**ವ್ಯೋಮಮೂರ್ತಿರ್ವ್ಯೋಮಮಯೀ ವ್ಯೋಮಾಧಾರಾಚ್ಯುತಾಲತಾ ।**
**ಅನಾದಿನಿಧನಾಯೋಷಾ ಕಾರಣಾತ್ಮಾ ಕಲಾಕುಲಾ ॥ ೨೩ ॥**

**ನಂದಪ್ರಥಮಜಾ ನಾಭಿರಮೃತಸ್ಯಾಂತಸಂಶ್ರಯಾ ।**
**ಪ್ರಾಣೇಶ್ವರಪ್ರಿಯಾ ಮಾತಾಮಹೀ ಮಹಿಷವಾಹಿನೀ ॥ ೨೪ ॥**

**ಪ್ರಾಣೇಶ್ವರೀ ಪ್ರಾಣರೂಪಾ ಪ್ರಧಾನಂ ಪುರುಷೇಶ್ವರೀ ।**
**ಸರ್ವಶಕ್ತಿಃ ಕಲಾ ಕಾಷ್ಠಾ ಜ್ಯೋತ್ಸ್ನೇಂದೋರ್ಮಹಿಮಾಪ್ರದಾ ॥ ೨೫ ॥**

**ಸರ್ವಕಾರ್ಯನಿಯಂತ್ರೀ ಚ ಸರ್ವಭೂತೇಶ್ವರೇಶ್ವರೀ ।**
**ಅನಾದಿರವ್ಯಕ್ತಗುಣಾ ಮಹಾನಂದಾ ಸನಾತನೀ ॥ ೨೬ ॥**

**ಆಕಾಶಯೋನಿರ್ಯೋಗಸ್ಥಾ ಸರ್ವಯೋಗೇಶ್ವರೇಶ್ವರೀ ।**
**ಶವಾಸನಾ ಚಿತಾಂತಃಸ್ಥಾ ಮಹೇಶೀ ವೃಷವಾಹಿನೀ ॥ ೨೭ ॥**

---

ಆದಿ ಕೊನೆಗಳಿಲ್ಲದವಳು. ಹುಟ್ಟು ಸಾವಿಲ್ಲದವಳು. ಹೆಂಗಸು. ಕಾರಣಸ್ವರೂಪಳು. ಕಲೆಯಿಂದ ಕೂಡಿದವಳು. ನಂದನಿಗೆ ಮೊದಲನೆಯ ಮಗಳಾಗಿ ಹುಟ್ಟಿದವಳು. ಎಲ್ಲವನ್ನೂ ಹಿಡಿದಿರುವವಳು. ಅಮೃತವನ್ನು ಕೊನೆಗಾಣಿಸಿದವಳು. ಈಶ್ವರನಿಗೆ ಪ್ರಿಯಳು. ಎಲ್ಲಕ್ಕೂ ತಾಯಿಯ ತಾಯಿಯು. ಕೋಣನಮೇಲೆ ಕೂರುವವಳು.

೨೫. ಪ್ರಾಣಗಳಿಗೆ ಒಡೆಯಳು. ಪ್ರಾಣದ ರೂಪಳು. ಪ್ರಧಾನಳಾದವಳು ಪುರುಷನಿಗೆ ಒಡೆಯಳು. ಎಲ್ಲಾ ಶಕ್ತಿಗಳ ರೂಪಳು. ಕಲೆಯ ರೂಪಳು. ಕಾಷ್ಠದ ರೂಪಳು (ಇವು ಕಾಲಭೇದಗಳು). ಪೂರ್ಣಚಂದ್ರನ ಮಹಿಮೆಯುಳ್ಳವಳು.

೨೬-೨೭. ಎಲ್ಲಾ ಕೆಲಸಗಳಿಗೂ ಪ್ರೇರಕಳು. ಎಲ್ಲಾ ಭೂತಗಳಿಗೂ ಒಡೆಯಳು. ಆದಿಶೂನ್ಯಳು. ಪ್ರಕಟವಿಲ್ಲದ ಗುಣಗಳುಳ್ಳವಳು. ಬಹುವಾದ ಆನಂದವುಳ್ಳವಳು. ಸನಾತನಳು. ಆಕಾಶದಲ್ಲಿ ಹುಟ್ಟುವವಳು. ಯೋಗದಲ್ಲಿರುವವಳು. ಯೋಗೇಶ್ವರರಿಗೆಲ್ಲಾ ಒಡೆಯಳು. ಶವದಮೇಲೆ ಕುಳಿತಿರುವವಳು. ಚಿತೆಯಲ್ಲಿರುವವಳು. ಮಹೇಶ್ವರಿಯು. ಎತ್ತಿನಮೇಲೆ ಕುಳಿತಿರುವವಳು.

**ಬಾಲಿಕಾ ತರುಣೀ ವೃದ್ಧಾ ವೃದ್ಧಮಾತಾ ಜರಾತುರಾ ।**
**ಮಹಾಮಾಯಾಸುದುಷ್ಪೂರಾ ಮೂಲಪ್ರಕೃತಿರೀಶ್ವರೀ ॥ ೨೮ ॥**

**ಸಂಸಾರಯೋನಿಃ ಸಕಲಾ ಸರ್ವಶಕ್ತಿಸಮುದ್ಭವಾ ।**
**ಸಂಸಾರಸಾರದುರ್ವಾರಾ ದುರ್ನಿರೀಕ್ಷ್ಯಾದುರಾಸದಾ ॥ ೨೯ ॥**

**ಪ್ರಾಣಶಕ್ತಿಃ ಪ್ರಾಣವಿದ್ಯಾ ಯೋಗಿನೀ ಪರಮಾಕಲಾ ।**
**ಮಹಾವಿಭೂತಿರ್ದುರ್ಧರ್ಷಾ ಮೂಲಪ್ರಕೃತಿಸಂಭವಾ ॥ ೩೦ ॥**

**ಅನಾದ್ಯನಂತವಿಭವಾ ಪರಾತ್ಮಾ ಪುರುಷೋ ಬಲೀ ।**
**ಸರ್ಗಸ್ಥಿತ್ಯಂತಕರಣೀ ಸುದುರ್ವಾಚ್ಯಾ ದುರತ್ಯಯಾ ॥ ೩೧ ॥**

**ಶಬ್ದಯೋನಿಃ ಶಬ್ದಮಯೀ ನಾದಾಖ್ಯಾ ನಾದವಿಗ್ರಹಾ ।**
**ಪ್ರಧಾನಪುರುಷಾತೀತಾ ಪ್ರಧಾನಪುರುಷಾತ್ಮಿಕಾ ॥ ೩೨ ॥**

---

೨೮-೨೯. ಬಾಲಿಕೆಯು, ಯುವತಿಯು, ಮುದುಕಿಯು, ಮುದಿತಾಯಿಯು. ಮುಪ್ಪಿನಿಂದ ಕೂಡಿದವಳು. ಬಹುವಾದ ಮಾಯೆಯಿಂದ ಕೂಡಿದವಳು. ಮೂಲ ಪ್ರಕೃತಿಯು. ಈಶ್ವರಿಯು ಸಂಸಾರಕ್ಕೆ ಮೂಲಭೂತಳು. ಕಲೆಯಿಂದ ಕೂಡಿದವಳು. ಎಲ್ಲಾ ಶಕ್ತಿಗಳಿಗೂ ಉತ್ಪತ್ತಿಸ್ಥಾನಳು. ಸಂಸಾರಸಾರವನ್ನು ಬಿಡದಂತೆ ಮಾಡು ವವಳು. ನೋಡಲು ಆಗದಿರುವಂತೆ ರೂಪನ್ನು ಹೊಂದಿರುವವಳು. ತಡೆಯಲು ಆಗದವಳು.

೩೦-೩೧. ಪ್ರಾಣಿಶಕ್ತಿರೂಪಳು, ಪ್ರಾಣವಿದ್ಯೆಯು, ಯೋಗಿನಿಯು, ಉತ್ತಮ ವಾದ ಕಲಾರೂಪಳು. ಮಹಾ ಐಶ್ವರ್ಯವುಳ್ಳವಳು. ತಡೆಯಲು ಅಸಾಧ್ಯಳು. ಮೂಲ ಪ್ರಕೃತಿಯಿಂದ ಉತ್ಪನ್ನಳು. ಕೊನೆಮೊದಲಿಲ್ಲದವಳು ಐಶ್ವರ್ಯವುಳ್ಳವಳು. ಉತ್ತಮ ವಾದ ಆತ್ಮಸ್ವರೂಪಳು. ಪುರುಷರೂಪಳು. ಬಲಿಷ್ಠಳು. ಸೃಷ್ಟಿಸ್ಥಿತಿಲಯಗಳನ್ನು ಮಾಡುವವಳು. ಹೇಳಲು ಆಗದಿಂತಿರುವವಳು ಮೀರಲಾಗದವಳು.

೩೨-೩೩ ಶಬ್ದಕ್ಕೆ ಉತ್ಪತ್ತಿಸ್ಥಾನಳು. ಶಬ್ದಸ್ವರೂಪಳು. ನಾನಾನಾದ ರೂಪಳು. ನಾದದ ಆಕಾರಳು ಪ್ರಧಾನಪುರುಷನನ್ನು ಮೀರಿರತಕ್ಕವಳು. ಪ್ರಧಾನ

**ಪುರಾಣೀ ಚಿನ್ಮಯೀ ಪುಂಸಾಮಾದಿಃ ಪುರುಷರೂಪಿಣೀ ।**
**ಭೂತಾಂತರಾತ್ಮಾ ಕೂಟಸ್ಥಾ ಮಹಾಪುರುಷಸಂಸ್ಥಿತಾ ॥ ೩೩ ॥**

**ಜನ್ಮಮೃತ್ಯು ಜರಾತೀತಾ ಸರ್ವಶಕ್ತಿಸಮನ್ವಿತಾ ।**
**ವ್ಯಾಪಿನೀಚಾನವಚ್ಛಿನ್ನಾ ಪ್ರಧಾನಾ ಸುಪ್ರವೇಶಿನೀ ॥ ೩೪ ॥**

**ಕ್ಷೇತ್ರಜ್ಞಾ ಶಕ್ತಿರವ್ಯಕ್ತಲಕ್ಷಣಾ ಮಲವರ್ಜಿತಾ ।**
**ಅನಾದಿಮಾಯಾಸಂಭಿನ್ನಾ ತ್ರಿತತ್ವಾ ಪ್ರಕೃತಿರ್ಗುಣಾ ॥ ೩೫ ॥**

**ಮಹಾಮಾಯಾಸಮುತ್ಪನ್ನಾ ತಾಮಸೀ ಪೌರುಷಂ ಧ್ರುವಾ ।**
**ವ್ಯಕ್ತಾವ್ಯಕ್ತಾತ್ಮಿಕಾ ಕೃಷ್ಣಾ ರಕ್ತಾ ಶುಕ್ಲಾ ಪ್ರಸೂತಿಕಾ ॥ ೩೬ ॥**

**ಸ್ವಕಾರ್ಯಾ ಕಾರ್ಯಜನನೀ ಬ್ರಹ್ಮಾಸ್ಯಾ ಬ್ರಹ್ಮಸಂಶ್ರಯಾ ।**
**ವ್ಯಕ್ತಾ ಪ್ರಥಮಜಾ ಬ್ರಾಹ್ಮೀ ಮಹತೀ ಜ್ಞಾನರೂಪಿಣೀ ॥ ೩೭ ॥**

---

ಪುರುಷಸ್ವರೂಪಳು. ಹಳಬಳು ಚಿತ್‌ಸ್ವರೂಪಳು. ಪುರುಷರಿಗೆಲ್ಲಾ ಮೊದಲನೆಯವಳು. ಪುರುಷ ರೂಪಿನವಳು. ಭೂತಗಳ ಒಳಗೆ ಸೇರಿಕೊಂಡಿರತಕ್ಕವಳು. ಕೂಟಸ್ಥನಾದ ಪುರುಷನಲ್ಲಿ ಸೇರಿಕೊಂಡಿರತಕ್ಕವಳು.

೩೪-೩೫. ಹುಟ್ಟುಸಾವುಮುಪ್ಪುಗಳಿಲ್ಲದವಳು. ಎಲ್ಲ ಶಕ್ತಿಗಳನ್ನೂ ಹೊಂದಿರುವವಳು. ವ್ಯಾಪಕಳು. ಎಲ್ಲದರಲ್ಲಿಯೂ ಬೇರ್ಪಡದಂತೆ ಸೇರಿಕೊಂಡಿರುವವಳು. ಪ್ರಧಾನಳು. ಸುಖವಾಗಿಪ್ರವೇಶಮಾಡುವವಳು. ಆತ್ಮನನ್ನು ತಿಳಿದವಳು, ಶಕ್ತಿರೂಪಳು. ಲಕ್ಷಣಗಳನ್ನು ತಿಳಿಯಲಾಗದವಳು. ಪಾಪರಹಿತಳು. ಅನಾದಿಯಾದ ಮಾಯೆಗಿಂತ ಬೇರ್ಪಟ್ಟವಳು. ಮೂರು ತತ್ವಸ್ವರೂಪಳು. ಪ್ರಕೃತಿರೂಪಳು. ಗುಣವುಳ್ಳವಳು.

೩೬-೩೭. ಮಹಾಮಾಯೆಗೆ ಉತ್ಪತ್ತಿಸ್ಥಾನಳು. ತಾಮಸಸ್ವರೂಪಳು. ಪೌರುಷವುಳ್ಳವಳು ಧ್ರುವೆಸ್ವರೂಪಳು. ವ್ಯಕ್ತಾವ್ಯಕ್ತಸ್ವರೂಪಳು. ಕಪ್ಪಗಿರುವವಳು. ಬೆಳ್ಳಗೂ ಇರುವವಳು. ಎಲ್ಲಕ್ಕೂ ಉತ್ಪತ್ತಿಸ್ಥಾನಳು. ಕಾರ್ಯವನ್ನು ಉತ್ಪತ್ತಿಮಾಡುವವಳು ಬ್ರಹ್ಮನೇ ಮುಖದಲ್ಲಿ ಉಳ್ಳವಳು. ಬ್ರಹ್ಮನಿಗೆ ಆಶ್ರಯರೂಪಳು. ವ್ಯಕ್ತರೂಪಳು. ಎಲ್ಲರಿಗಿಂತಲೂ ಮೊದಲುಹುಟ್ಟಿದವಳು. ಬ್ರಹ್ಮನರೂಪಿನವಳು. ಮಹದ್ರೂಪಳು. ಜ್ಞಾನರೂಪಿನವಳು.

ವೈರಾಗ್ಯೈಶ್ವರ್ಯಧರ್ಮಾತ್ಮಾ ಬ್ರಹ್ಮಮೂರ್ತಿರ್ಹೃದಿ ಸ್ಥಿತಾ ।
ಜಯದಾ ಜಿತ್ವರೀ ಜೈತ್ರೀ ಜಯಶ್ರೀರ್ಜಯಶಾಲಿನೀ ॥ ೩೮ ॥

ಸುಖದಾ ಶುಭದಾ ಸತ್ಯಾ ಶುಭಾ ಸಂಕ್ಷೋಭಕಾರಿಣೀ ।
ಅಪಾಂ ಯೋನಿಸ್ಸ್ವಯಂಭೂತಿರ್ಮಾನಸೀ ತತ್ವಸಂಭವಾ ॥ ೩೯ ॥

ಈಶ್ವರಾಣೀ ಚ ಶರ್ವಾಣೀ ಶಂಕರಾರ್ಧಶರೀರಿಣೀ ।
ಭವಾನೀಚೈವರುದ್ರಾಣೀ ಮಹಾಲಕ್ಷ್ಮೀರಥಾಂಬಿಕಾ ॥ ೪೦ ॥

ಮಾಹೇಶ್ವರೀ ಸಮುತ್ಪನ್ನಾ ಭುಕ್ತಿಮುಕ್ತಿಫಲಪ್ರದಾ ।
ಸರ್ವೇಶ್ವರೀ ಸರ್ವವರ್ಣಾ ನಿತ್ಯಾಮುದಿತಮಾನಸಾ ॥ ೪೧ ॥

ಬ್ರಹ್ಮೇಂದ್ರೋಪೇಂದ್ರ ನಮಿತಾ ಶಂಕರೇಚ್ಛಾನುವರ್ತಿನೀ ।
ಈಶ್ವರಾರ್ಧಾಸನಗತಾ ರಘೂತ್ತಮಪತಿವ್ರತಾ ॥ ೪೨ ॥

---

೩೮–೪೦. ವೈರಾಗ್ಯವೇ ಐಶ್ವರ್ಯವಾಗಿ ಉಳ್ಳವಳು. ಧರ್ಮಾತ್ಮಳು. ಬ್ರಹ್ಮಮೂರ್ತಿಯು ಹೃದಯದಲ್ಲಿಯೇ ಇರುವವಳು. ಜಯವನ್ನು ಕೊಡುವವಳು. ಜಯಶೀಲಳು. ಜಯಿಸುವವಳು. ಜಯಶ್ರೀ ಸ್ವರೂಪಳು. ಜಯದಿಂದ ಪ್ರಕಾಶಿಸುವವಳು. ಸುಖವನ್ನು ಕೊಡುವವಳು ಶುಭವನ್ನು ಕೊಡುವವಳು. ಸತ್ಯರೂಪಳು. ಶುಭರೂಪಳು. ಕ್ಷೋಭವನ್ನುಂಟುಮಾಡುವವಳು. ನೀರಿಗೆ ಹುಟ್ಟುವ ಸ್ಥಾನಳು. ಐಶ್ವರ್ಯರೂಪಳು· ಮನಸ್ಸಲ್ಲಿ ಹುಟ್ಟುವವಳು. ತತ್ವಗಳಿಗೆ ಹುಟ್ಟವಸ್ಥಾನವು.

೪೦-೪೧. ಈಶ್ವರನ ಹೆಂಡತಿಯು. ಶರ್ವನ ಹೆಂಡತಿಯು. ಶಂಕರನ ಅರ್ಧಶರೀರವನ್ನೇ ಹೊಂದಿರುವವಳು. ಭವನ ಹೆಂಡತಿಯು. ರುದ್ರನ ಹೆಂಡತಿಯು. ಮಹಾಲಕ್ಷ್ಮಿಸ್ವರೂಪಳು. ಅಂಬಿಕೆಯು. ಮಹೇಶ್ವರನ ಹೆಂಡತಿಯು. ತಾನಾಗಿಯೇ ಹುಟ್ಟಿದವಳು. ಇಹದಲ್ಲಿ ಆಹಾರವನ್ನೂ ಪರದಲ್ಲಿ ಮೋಕ್ಷವನ್ನೂ ಕೊಡುವವಳು. ಸರ್ವಕ್ಕೂ ಈಶ್ವರಿಯು. ಸರ್ವವರ್ಣಸ್ವರೂಪಳು. ನಿತ್ಯಸ್ವರೂಪಳು. ಸಂತೋಷದ ಮನಸ್ಸುಳ್ಳವಳು.

೪೨–೪೪. ಬ್ರಹ್ಮ, ಇಂದ್ರ, ಉಪೇಂದ್ರರಿಂದ ನಮಿಸಲ್ಪಟ್ಟವಳು. ಶಂಕರನ ಇಚ್ಛೆಯನ್ನು ಅನುಸರಿಸಿಕೊಂಡು ನಡೆಯುವವಳು. ಈಶ್ವರನ ಅರ್ಧಾಸನದಲ್ಲಿ ಕುಳಿತುಕೊಳ್ಳುವವಳು. ರಾಘವನನ್ನೇ ಪತಿಯಾಗಿ ಉಳ್ಳವಳು. ಒಂದೇಸಾರಿ

ಸಕೃದ್ವಿಭಾವಿತಾ ಸರ್ವಾ ಸಮುದ್ರಪರಿಶೋಷಿಣೀ ।
ಪಾರ್ವತೀ ಹಿಮವತ್ಪುತ್ರೀ ಪರಮಾನಂದದಾಯಿನೀ ॥ ೪೩ ॥

ಗುಣಾಢ್ಯಾ ಯೋಗದಾ ಯೋಗ್ಯಾ ಜ್ಞಾನಮೂರ್ತಿರ್ವಿಕಾಶಿನೀ ।
ಸಾವಿತ್ರೀ ಕಮಲಾ ಲಕ್ಷ್ಮೀಃ ಶ್ರೀರನಂತೋರಸಿ ಸ್ಥಿತಾ ॥ ೪೪ ॥

ಸರೋಜನಿಲಯಾ ಶುಭ್ರಾ ಯೋಗನಿದ್ರಾ ಸುದರ್ಶನಾ ।
ಸರಸ್ವತೀ ಸರ್ವವಿದ್ಯಾ ಜಗಜ್ಜ್ಯೇಷ್ಠಾ ಸುಮಂಗಲಾ ॥ ೪೫ ॥

ವಾಸವೀ ವರದಾ ವಾಚ್ಯಾ ಕೀರ್ತಿಸ್ಸರ್ವಾರ್ಥಸಾಧಿಕಾ ।
ವಾಗೀಶ್ವರೀ ಸರ್ವವಿದ್ಯಾ ಮಹಾವಿದ್ಯಾ ಸುಶೋಭನಾ ॥ ೪೬ ॥

ಗುಹ್ಯವಿದ್ಯಾತ್ಮವಿದ್ಯಾ ಚ ಸರ್ವವಿದ್ಯಾತ್ಮಭಾವಿತಾ ।
ಸ್ವಾಹಾ ವಿಶ್ವಂಭರೀ ಸಿದ್ಧಿಃ ಸ್ವಧಾ ಮೇಧಾ ಧೃತಿಃ ಶ್ರುತಿಃ ॥ ೪೭ ॥

---

ಪರಿಶೀಲಿಸತಕ್ಕವಳು. ಸರ್ವಾತ್ಮಳು. ಸಮುದ್ರವನ್ನೇ ಶೋಷಿಸುವಂತಹವಳು. ಪರ್ವತದಲ್ಲಿ ವಾಸಮಾಡುವವಳು. ಹಿಮವಂತನ ಮಗಳು. ಹೆಚ್ಚು ಆನಂದವನ್ನು ಕೊಡುವವಳು. ಗುಣದಿಂದ ಕೂಡಿದವಳು. ಯೋಗವನ್ನು ಕೊಡುವವಳು. ಯೋಗ್ಯಳು. ಜ್ಞಾನಮೂರ್ತಿಯು. ಪ್ರಕಾಶಿಸುವವಳು. ಸಾವಿತ್ರಿಯು. ಕಮಲೆಯು. ಲಕ್ಷ್ಮಿಯು. ಶ್ರೀಯು. ಅನಂತನ ಹೃದಯದಲ್ಲಿರುವವಳು.

೪೫–೪೬. ಕಮಲವೇ ವಾಸಸ್ಥಾನವಾಗಿ ಉಳ್ಳವಳು. ಶುಭ್ರವಾಗಿರುವವಳು. ಯೋಗನಿದ್ರೆಯನ್ನು ಮಾಡುವವಳು. ನೋಡುವುದಕ್ಕೆ ಚೆನ್ನಾಗಿರುವವಳು. ಸರಸ್ವತಿಯು. ಸರ್ವವಿದ್ಯಾಸ್ವರೂಪಿಣಿಯು. ಜಗತ್ತಿಗೆ ದೊಡ್ಡವಳು. ಮಂಗಳ ಸ್ವರೂಪಳು. ಶೋಭನಳು. ವರವನ್ನು ಕೊಡತಕ್ಕವಳು. ಎಲ್ಲ ಕಡೆಯಲ್ಲಿಯೂ ಹೊಗಳಿಸಿಕೊಳ್ಳುವವಳು. ಕೀರ್ತಿರೂಪಳು. ಎಲ್ಲಾ ಕೆಲಸವನ್ನೂ ಸಾಧಿಸತಕ್ಕವಳು. ಮಾತಿಗೆಲ್ಲ ಒಡೆಯಳು. ಸಮಸ್ತವಿದ್ಯಾಸ್ವರೂಪಳು. ಮಹಾವಿದ್ಯಾರೂಪಳು. ಮಂಗಳ ಕರಳು.

೪೭. ಗುಟ್ಟಾದ ವಿದ್ಯಾರೂಪಳು. ವೇದಾಂತವಿದ್ಯಾರೂಪಳು. ಸರ್ವವಿದ್ಯಾ ರೂಪಳು. ಆತ್ಮನನ್ನು ತಿಳಿದವಳು. ಸ್ವಾಹೆಯು. ವಿಶ್ವವನ್ನೇ ಧರಿಸಿರುವವಳು. ಸಿದ್ಧರೂಪಳು. ಸ್ವಧಾರೂಪಳು. ಮೇಧೆಯು. ಧೃತಿಯು. ಶ್ರುತಿಯು.

**ನಾಭಿಸ್ಸನಾಭಿಃ ಸುಕೃತಿಃ ಮಾಧವೀ ನರವಾಹಿನೀ ।**
**ಪೂಜಾ ವಿಭಾವರೀ ಸೌಮ್ಯಾ ಭಗಿನೀ ಭೋಗದಾಯಿನೀ ॥ ೪೮ ॥**

**ಶೋಭಾ ವಂಶಕರೀ ಲೀಲಾ ಮಾನಿನೀ ಪರಮೇಷ್ಠಿನೀ ।**
**ತ್ರೈಲೋಕ್ಯಸುಂದರೀ ರಮ್ಯಾ ಸುಂದರೀ ಕಾಮಚಾರಿಣೀ ॥ ೪೯ ॥**

**ಮಹಾನುಭಾವಾ ಮಧ್ಯಸ್ಥಾ ಮಹಾಮಹಿಷಮರ್ದಿನೀ ।**
**ಪದ್ಮಮಾಲಾ ಪಾಪಹರಾ ವಿಚಿತ್ರಮುಕುಟಾನನಾ ॥ ೫೦ ॥**

**ಕಾಂತಾ ಚಿತ್ರಾಂಬರಧರಾ ದಿವ್ಯಾಭರಣಭೂಷಿತಾ ।**
**ಹಂಸಾಖ್ಯಾ ವ್ಯೋಮನಿಲಯಾ ಜಗತ್ಸೃಷ್ಟಿವಿವರ್ಧಿನೀ ॥ ೫೧ ॥**

**ನಿರ್ಯಂತ್ರಾ ಮಂತ್ರವಾಹಸ್ಥಾ ನಂದಿನೀ ಭದ್ರಕಾಳಿಕಾ ।**
**ಆದಿತ್ಯವರ್ಣಾ ಕೌಮಾರೀ ಮಯೂರವರವಾಹಿನೀ ॥ ೫೨ ॥**

೪೮–೫೦. ಪ್ರಪಂಚಕ್ಕೆ ಮೂಲರೂಪಳು. ಪ್ರಪಂಚವನ್ನು ಕೈಯ್ಯಲ್ಲಿ ಹಿಡಿದಿರುವವಳು. ಒಳ್ಳೆಯ ಕೆಲಸಮಾಡುವಳು. ಮಾಧವನ ಕಡೆಯವಳು. ನರರ ಮೇಲೆ ಕೂರುವವಳು. ಪೂಜಾರೂಪಳು. ತನೋರೂಪಳು. ಸೌಮ್ಯವಾಗಿರತಕ್ಕವಳು. ಸಹೋದರಿರೂಪಳು. ಎಲ್ಲಾ ಭೋಗವನ್ನೂ ಕೊಡುವವಳು. ಶೋಭಾರೂಪಳು. ವಂಶವನ್ನು ಬೆಳೆಸುವವಳು. ಲೀಲಾರ್ಥವಾಗಿ ಮನುಷ್ಯಾಕಾರವನ್ನು ಹೊಂದುವವಳು. ಉಚ್ಚಸ್ಥಾನದಲ್ಲಿರುವವಳು. ಮೂರು ಲೋಕದಲ್ಲಿಯೂ ಸುಂದರಳು. ಮನೋಹರಳು. ಸುಂದರಿಯು. ಇಷ್ಟಬಂದಂತೆ ರೂಪವನ್ನು ತಾಳುವವಳು. ಮಹಾನುಭಾವಳು. ಪಕ್ಷಪಾತವಿಲ್ಲದೆ ಮಧ್ಯಸ್ಥಳಾಗಿರುವವಳು. ಮಹಿಷಾಸುರನನ್ನು ಕೊಂದವಳು. ಪದ್ಮಮಾಲೆಯನ್ನು ಹಾಕಿಕೊಂಡಿರುವವಳು. ಪಾಪನಾಶಕಳು. ಚಿತ್ರವಾಗಿರುವ ಕಿರೀಟವೂ ಮುಖವೂ ಉಳ್ಳವಳು.

೫೧–೫೨. ಮನೋಹರಳು. ಚಿತ್ರವಾದ ಬಟ್ಟೆಗಳನ್ನುಟ್ಟಿರುವವಳು. ದಿವ್ಯವಾದ ಆಭರಣಗಳನ್ನು ಹಾಕಿಕೊಂಡಿರುವವಳು. ಹಂಸಳು. ಆಕಾಶವೇ ಮನೆಯಾಗಿ ಉಳ್ಳವಳು. ಜಗತ್ತಿನ ಸೃಷ್ಟಿಯನ್ನು ಹೆಚ್ಚಿಸುವವಳು. ಅವಳನ್ನು ತಡೆಯುವವರಿಲ್ಲ. ಮಂತ್ರಕ್ಕೆ ಒಳಗಾದವಳು. ಆನಂದವನ್ನುಂಟುಮಾಡುವವಳು. ಭದ್ರಕಾಳಿಯು. ಆದಿತ್ಯನಂತೆ ಬಣ್ಣವುಳ್ಳವಳು. ಕುಮಾರಿಯಾಗಿರುವವಳು. ನವಿಲಿನಮೇಲೆ ಕೂತುಕೊಳ್ಳುವವಳು.

**ವೃಷಾಸನಗತಾ ಗೌರೀ ಮಹಾಕಾಳೀ ಸುರಾರ್ಚಿತಾ ।**
**ಅದಿತಿರ್ನಿಯತಾ ರೌದ್ರೀ ಪದ್ಮಗರ್ಭಾ ವಿವಾಹನಾ ॥ ೫೩ ॥**

**ವಿರೂಪಾಕ್ಷೀ ಲೇಲಿಹಾನಾ ಮಹಾಸುರವಿನಾಶಿನೀ ।**
**ಮಹಾಸಲಾನವದ್ಯಾಂಗೀ ಕಾಮಪೂರಾ ವಿಭಾವರೀ ॥ ೫೪ ॥**

**ವಿಚಿತ್ರರತ್ನಮುಕುಟಾ ಪ್ರಣತರ್ದ್ಧಿವಿವರ್ಧಿನೀ ।**
**ಕೌಶಿಕೀ ಕರ್ಷಿಣೀ ರಾತ್ರಿಸ್ತ್ರಿದಶಾರ್ತಿವಿನಾಶಿನೀ ॥ ೫೫ ॥**

**ವಿರೂಪಾ ಚ ಸುರೂಪಾ ಚ ಭೀಮಾ ಮೋಕ್ಷಪ್ರದಾಯಿನೀ ।**
**ಭಕ್ತಾರ್ತಿನಾಶಿನೀ ಭವ್ಯಾ ಭವಭಾವವಿನಾಶಿನೀ ॥ ೫೬ ॥**

**ನಿರ್ಗುಣಾ ನಿತ್ಯವಿಭವಾ ನಿಸ್ಸಾರಾ ನಿರಪತ್ರಪಾ ।**
**ಯಶಸ್ವಿನೀ ಸಾಮಗೀತಿಃ ಭವಾಂಗನಿಲಯಾಲಯಾ ॥ ೫೭ ॥**

೫೩. ಎತ್ತಿನಮೇಲೆ ಕೂರುವವಳು. ಗೌರಬಣ್ಣವುಳ್ಳವಳು. ಮಹಾಕಾಳಿಯೂ. ದೇವತೆಗಳಿಂದ ಪೂಜಿಸಿಕೊಳ್ಳುವವಳು. ಆ ದೇವಮಾತೆಯಾದ ಅದಿತಿಯೂ. ಅದೃಷ್ಟರೂಪಳು. ರುದ್ರನ ಸಂಬಂಧಸಿಯೂ. ಪದ್ಮದ ಮಧ್ಯದಲ್ಲಿರುವವಳು. ವಾಹನವಿಲ್ಲದಿರುವವಳು.

೫೪-೫೬. ವಿರೂಪವಾದ ಕಣ್ಣುಳ್ಳವಳು. ಎಲ್ಲವನ್ನೂ ಭಕ್ಷಿಸುವವಳು. ಮಹಾರಾಕ್ಷಸನನ್ನು ಕೊಂದವಳು. ಮಹಾ ಫಲವಾದ ಮೋಕ್ಷಸ್ವರೂಪಳು. ನಿರ್ದುಷ್ಟಳು. ಕಾಮವನ್ನು ತುಂಬಿಕೊಂಡಿರುವವಳು. ರಾತ್ರಿಯ ಸ್ವರೂಪಳು. ಚಿತ್ರವಿಚಿತ್ರವಾದ ರತ್ನಗಳಿಂದ ಕೂಡಿದ ಕಿರೀಟವುಳ್ಳವಳು. ನಮಸ್ಕಾರಮಾಡಿದವರಿಗೆ ಉತ್ಕರ್ಷವನ್ನುಂಟುಮಾಡುವವಳು. ಕುಶಿಕನ ಮನೆಯವಳು. ಎಲ್ಲರನ್ನೂ ಎಳೆಯತಕ್ಕವಳು. ರಾತ್ರಿರೂಪಳು. ದೇವತೆಗಳ ಕಷ್ಟವನ್ನು ಪರಿಹಾರ ಮಾಡುವವಳು. ವಿರೂಪವಾಗಿರುವವಳು. ಸುರೂಪವಾಗಿಯೂ ಇರುವವಳು. ಭಯಂಕರಳು. ಮೋಕ್ಷವನ್ನು ಕೊಡತಕ್ಕವಳು. ಭಕ್ತರ ಕಷ್ಟ ಪರಿಹಾರಕಳು. ಮಂಗಳಕರಳು. ಸಂಸಾರವನ್ನು ಸಾಕುಮಾಡಿ ಮೋಕ್ಷವನ್ನು ಕೊಡತಕ್ಕವಳು.

೫೭-೫೯. ನಿರ್ಗುಣಳು. ನಿತ್ಯವಿಭವಳು. ಸಾರವಿಲ್ಲದವಳು. ಲಜ್ಜೆಯಿಲ್ಲದವಳು. ಯಶಸುಳ್ಳವಳು. ಸಾಮದಗೀತಸ್ವರೂಪಳು. ಈಶ್ವರನ

**ದೀಕ್ಷಾ ವಿದ್ಯಾಧರೀ ದೀಪ್ತಾ ಮಹೇಂದ್ರವಿನಿಪಾತಿನೀ ।
ಸರ್ವಾತಿಶಾಯಿನೀ ವಿದ್ಯಾ ಸರ್ವಶಕ್ತಿಪ್ರದಾಯಿನೀ ॥ ೫೮ ॥**

**ಸರ್ವೇಶ್ವರಪ್ರಿಯಾ ತಾರ್ಕ್ಷೀ ಸಮುದ್ರಾಂತರವಾಸಿನೀ ।
ಅಕಲಂಕಾ ನಿರಾಧಾರಾ ನಿತ್ಯಸಿದ್ಧಾ ನಿರಾಮಯಾ ॥ ೫೯ ॥**

**ಕಾಮಧೇನುರ್ವೇದಗರ್ಭಾ ಧೀಮತೀ ಮೋಹನಾಶಿನೀ ।
ನಿಸ್ಸಂಕಲ್ಪಾ ನಿರಾತಂಕಾ ವಿನಯಾ ವಿನಯಪ್ರದಾ ॥ ೬೦ ॥**

**ಜ್ವಾಲಾಮಾಲಾ ಸಹಸ್ರಾಢ್ಯಾ ದೇವದೇವೀ ಮನೋನ್ಮನೀ ।
ಉರ್ವೀಗುರ್ವೀ ಗುರುಃ ಶ್ರೇಷ್ಠಾ ಸಗುಣಾ ಷಡ್ಗುಣಾತ್ಮಿಕಾ ॥ ೬೧ ॥**

**ಮಹಾಭಗವತೀ ಭಾವ್ಯಾ ವಸುದೇವಸಮುದ್ಭವಾ ।
ಮಹೇಂದ್ರೋಪೇಂದ್ರಭಗಿನೀ ಭಕ್ತಿಗಮ್ಯಾ ಪರಾಯಣಾ ॥ ೬೨ ॥**

---

ಅವಯವವೇ ಮನೆಯಾಗಿರುವವಳು. ದೀಕ್ಷೆಯ ರೂಪಳು. ವಿದ್ಯಾಧರಿಯು. ಪ್ರಕಾಶಳು. ಮಹೇಂದ್ರನನ್ನು ನಾಶಮಾಡಿದವಳು. ಎಲ್ಲರಿಗಿಂತಲೂ ಉತ್ಕೃಷ್ಟಳು. ಎಲ್ಲ ಶಕ್ತಿಗಳನ್ನೂ ಕೊಡತಕ್ಕವಳು. ಸರ್ವೇಶ್ವರನಾದ ಪರಮಾತ್ಮನಿಗೆ ಪ್ರೀತಿಪಾತ್ರಳು. ಗರುಡರೂಪಳು. ಸಮುದ್ರದ ಒಳಗೆ ವಾಸಮಾಡುವವಳು. ಕಲಂಕವಿಲ್ಲದವಳು. ಆಧಾರಶೂನ್ಯಳು. ಯಾವಾಗಲೂ ಸಿದ್ಧರೂಪಳಾಗಿರುವವಳು. ರೋಗವಿಲ್ಲದವಳು.

೬೦–೬೨. ಕಾಮಧೇನು ಸ್ವರೂಪಳು. ವೇದದಲ್ಲಿರುವವಳು. ಬುದ್ಧಿಯನ್ನುಳ್ಳವಳು ಅಜ್ಞಾನವನ್ನು ನಾಶಮಾಡುವವಳು. ಇಚ್ಛಾರಹಿತಳು. ಆತಂಕವಿಲ್ಲದವಳು. ವಿನಯ ರೂಪಳು. ವಿನಯವನ್ನು ಕೊಡುವವಳು. ಜ್ವಾಲೆಯ ರೂಪಳು. ಮಾಲೆಗಳಿಂದ ಕೂಡಿದವಳು. ದೇವತೆಗಳಿಗೆಲ್ಲಾ ದೇವಿಯು. ಮನಸ್ಸಿಗೆ ಹರ್ಷದಾಯಕಳು. ಭಾರವನ್ನು ವಹಿಸತಕ್ಕವಳು. ಭಾರಭೂತಳು. ಗುರುವು. ಶ್ರೇಷ್ಠಳು. ಗುಣದಿಂದ ಕೂಡಿದವಳು. ಆರು ಗುಣಗಳಿಂದ ಕೂಡಿದವಳು. ಬೇಕಾದ ಇಷ್ಟಗಳನ್ನು ಕೊಡುವವಳು. ಕಂಡು ಹಿಡಿಯಲು ಯೋಗ್ಯಳು. ವಸುದೇವನ ಹೊಟ್ಟೆಯಲ್ಲಿ ಹುಟ್ಟಿದವಳು. ಮಹೇಂದ್ರನಿಗೂ ಇಂದ್ರನಿಗೂ ಸಹೋದರಿಯು. ಭಕ್ತಿಯಿಂದ ಸಿಕ್ಕತಕ್ಕವಳು. ಕೊನೆಯಲ್ಲಿ ರಕ್ಷಕಳು. ಜ್ಞಾನದಿಂದ ತಿಳಿಯಲು ಸಾಧ್ಯಳು.

ಜ್ಞಾನಜ್ಞೇಯಾ ಜರಾತೀತಾ ವೇದಾಂತವಿಷಯಾ ಗತಿಃ ।
ದಕ್ಷಿಣಾ ದಹನಾ ಬಾಹ್ಯಾ ಸರ್ವಭೂತನಮಸ್ಕೃತಾ ॥ ೬೩ ॥

ಯೋಗಮಾಯಾ ವಿಭಾವಜ್ಞಾ ಮಹಾಮೋಹಾ ಮಹೀಯಸೀ ।
ಸತ್ಯಾ ಸರ್ವಸಮುದ್ಭೂತಿಃ ಬ್ರಹ್ಮವೃಕ್ಷಾಶ್ರಯಾ ಮತಿಃ ॥ ೬೪ ॥

ಬೀಜಾಂಕುರಸಮುದ್ಭೂತಿಃ ಮಹಾಶಕ್ತಿರ್ಮಹಾಮತಿಃ ।
ಖ್ಯಾತಿಃ ಪ್ರತಿಜ್ಞಾ ಚಿತ್ಸಂವಿತ್ ಮಹಾಯೋಗೇಂದ್ರಶಾಯಿನೀ ॥ ೬೫ ॥

ವಿಕೃತಿಃ ಶಾಂಕರೀ ಶಾಸ್ತ್ರೀ ಯಕ್ಷಗಂಧರ್ವಸೇವಿತಾ ।
ವೈಶ್ವಾನರೀ ಮಹಾಶಾಲಾ ದೇವಸೇನಾಗುಹಪ್ರಿಯಾ ॥ ೬೬ ॥

ಮಹಾರಾತ್ರೀ ಶಿವಾನಂದಾ ಶಚೀ ದುಃಖಪ್ರಣಾಶನೀ ।
ಪೂಜ್ಯಾಽಪೂಜ್ಯಾ ಜಗದ್ಧಾತ್ರೀ ದುರ್ವಿನೇಯಸ್ವರೂಪಿಣೀ ॥ ೬೭ ॥

---

ಮುಪ್ಪಿಲ್ಲದವಳು. ವೇದಾಂತಕ್ಕೆ ಗುರಿಯಾದವಳು. ಎಲ್ಲರಿಗೂ ದಿಕ್ಕಾದವಳು. ಉದಾರಳು. ಅಗ್ನಿ ರೂಪಳು. ಬಾಹ್ಯ ರೂಪಳು. ಎಲ್ಲಾ ಪ್ರಾಣಿಗಳಿಂದಲೂ ನಮಸ್ಕೃತಳು.

೬೪-೬೬. ಯೋಗವೆಂಬ ಮಾಯೆಯುಳ್ಳವಳು. ವಿಭಾವವನ್ನು ಬಲ್ಲವಳು. ಮಹಾಮೋಹಸ್ವರೂಪಳು. ಉತ್ಕೃಷ್ಟಳು. ಸತ್ಯಸ್ವರೂಪಳು. ಎಲ್ಲಕ್ಕೂ ಉತ್ಪತ್ತಿ ಸ್ಥಾನಳು. ಅರಳಿಯ ಮರವನ್ನು ಆಶ್ರಯಿಸಿಕೊಂಡಿರುವವಳು. ಬುದ್ಧಿಯರೂಪಳು. ಬೀಜದಲ್ಲಿರುವ ಮೊಳಕೆಯನ್ನು ಎಬ್ಬಿಸುವವಳು. ಮಹಾ ಶಕ್ತಿ ಸ್ವರೂಪಳು. ಬಹು ಬುದ್ಧಿ ಸ್ವರೂಪಳು. ಯಶಸ್ಸನ್ನು ಹೊಂದಿರುವವಳು. ಪ್ರತಿಜ್ಞಾ ರೂಪಳು. ಚಿದ್ರೂಪಳು. ಜ್ಞಾನರೂಪಳು. ಮಹಾ ಯೋಗಿಯಾದ ಶಿವನಮೇಲೆ ಮಲಗಿರುವವಳು. ವಿಕಾರವುಳ್ಳವಳು. ಶಂಕರನ ಸಂಬಂಧಸಿಯು. ಶಾಸ್ತ್ರವನ್ನು ಬಲ್ಲವಳು. ಗಂಧರ್ವ ಯಕ್ಷರುಗಳಿಂದ ಸೇವಿಸಲ್ಪಡತಕ್ಕವಳು. ಯಜ್ಞಶಾಲೆಯ ರೂಪಳು. ದೇವತೆಗಳಿಗೆ ಸೇವೆಯ ರೂಪಳಾದವಳು. ಗುಹನಿಗೆ ಪ್ರೀತಿಪ್ರದಳು.

೬೭-೭೦. ಮಹಾ ರಾತ್ರಿ ರೂಪಳು. ಶಿವನಿಗೆ ಆನಂದವನ್ನುಂಟುಮಾಡುವವಳು. ಶಚಿಯ ದುಃಖವನ್ನು ಹಾಳುಮಾಡಿದವಳು. ಪೂಜಿಸಿಕೊಳ್ಳುವುದಕ್ಕೆ

ಗುಹಾಂಬಿಕಾ ಗುಹೋತ್ಪತ್ತಿಃ ಮಹಾಪೀಠಾ ಮರುತ್ಸುತಾ ।
ಹವ್ಯವಾಹಾಂತರಾ ಗಾರ್ಗೀ ಹವ್ಯವಾಹಸಮುದ್ಭವಾ ॥ ೬೮ ॥

ಜಗದ್ಯೋನಿರ್ಜಗನ್ಮಾತಾ ಜಗನ್ಮೃತ್ಯುರ್ಜರಾತಿಗಾ ।
ಬುದ್ಧಿರ್ಮಾತಾ ಬುದ್ಧಿಮತೀ ಪುರುಷಾಂತರವಾಸಿನೀ ॥ ೬೯ ॥

ತಪಸ್ವಿನೀ ಸಮಾಧಿಸ್ಥಾ ತ್ರಿನೇತ್ರಾ ದಿವಿ ಸಂಸ್ಥಿತಾ ।
ಸರ್ವೇಂದ್ರಿಯ ಮನೋಮಾತಾ ಸರ್ವಭೂತಹೃದಿ ಸ್ಥಿತಾ ॥ ೭೦ ॥

ಸಂಸಾರತಾರಿಣೀ ವಿದ್ಯಾ ಬ್ರಹ್ಮವಾದಿಮನೋಲಯಾ ।
ಬ್ರಹ್ಮಾಣೀ ಬೃಹತೀ ಬ್ರಾಹ್ಮೀ ಬ್ರಹ್ಮಭೂತಾ ಭಯಾವನಿಃ ॥ ೭೧ ॥

ಹಿರಣ್ಮಯೀ ಮಹಾರಾತ್ರಿಃ ಸಂಸಾರಪರಿವರ್ತಿಕಾ ।
ಸುಮಾಲಿನೀ ಸುರೂಪಾ ಚ ತಾರಿಣೀ ಭಾವಿನೀ ಪ್ರಭಾ ॥ ೭೨ ॥

---

ಯೋಗ್ಯಳು. ಇತರರನ್ನು ಪೂಜಿಸದವಳು. ಜಗತ್ತನ್ನೇ ಧರಿಸಿರುವವಳು. ದುಷ್ಟರಿಗೆ ವಶವಾಗದವಳು. ಗುಹನಿಗೆ ತಾಯಿಯು. ಗುಹನಿಗೆ ಉತ್ಪತ್ತಿಭೂತಳು. ಮಹಾ ಪೀಠರೂಪಳು. ಮರುತ್ತುಗಳಿಗೆ ಮಗಳು. ಅಗ್ನಿಯ ಒಳಗೆ ಸೇರಿರುವವಳು. ಗರ್ಗನ ಮನೆಯಲ್ಲಿರುವವಳು. ಬೆಂಕಿಯಿಂದ ಹುಟ್ಟಿದವಳು. ಜಗತ್ತಿಗೆ ಉತ್ಪತ್ತಿಸ್ಥಾನಳು. ಜಗತ್ತಿಗೆ ತಾಯಿಯು. ಜಗತ್ತಿಗೆ ಮೃತ್ಯುರೂಪಳು. ಮುಪ್ಪನ್ನು ದಾಟಿದವಳು. ಬುದ್ಧಿ ರೂಪಳು. ಮಾತೃಕೆಯ ರೂಪಳು. ಬುದ್ಧಿಯುಳ್ಳವಳು. ಬೇರೆಯ ಪುರುಷರಲ್ಲಿಯೂ ಇರತಕ್ಕವಳು. ತಪಸ್ವಿನಿಯು. ಸಮಾಧಿಯಲ್ಲಿರುವವಳು. ಮೂರು ಕಣ್ಣುಳ್ಳವಳು. ಸ್ವರ್ಗದಲ್ಲಿರುವವಳು. ಇಂದ್ರಿಯ ಸ್ವರೂಪಳು. ಮನಸ್ಸಿಗೆ ತಾಯಿಯಂತಿರುವವಳು. ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಇರುವವಳು.

೭೧-೭೨. ಸಂಸಾರವನ್ನು ಪರಿಹರಿಸುವ ವಿದ್ಯಾರೂಪಳು. ಬ್ರಹ್ಮವಾದಿಗಳ ಮನಸ್ಸಿನಲ್ಲಿರುವವಳು. ಬ್ರಹ್ಮನ ಹೆಂಡತಿಯೂ. ದೊಡ್ಡವಳು. ಬ್ರಹ್ಮನ ರೂಪಳು. ಬ್ರಹ್ಮನಲ್ಲಿಯೇ ಐಕ್ಯವಾಗಿರುವವಳು. ಭಯಂಕರಳು. ಹಿರಣ್ಯ ರೂಪಳು. ಮಹಾ ರಾತ್ರಿ ರೂಪಳು. ಸಂಸಾರವನ್ನು ನಡೆಸುವವಳು. ಮಾಲೆಯುಳ್ಳವಳು. ರೂಪವತಿಯು. ಎಲ್ಲವನ್ನೂ ದಾಟಿಸುವವಳು. ಭಾವವುಳ್ಳವಳು.

ಉನ್ಮೂಲನೀ ಸರ್ವಸಹಾ ಸರ್ವಪ್ರತ್ಯಯಸಾಕ್ಷಿಣೀ ।
ತಪಿನೀ ತಾಪಿನೀ ವಿಶ್ವಾಭೋಗದಾ ಧಾರಿಣೀ ಧರಾ ॥ ೭೩ ॥

ಸುಸೌಮ್ಯಾ ಚಂದ್ರವದನಾ ತಾಂಡವಾಸಕ್ತ ಮಾನಸಾ ।
ಸರ್ವಶುದ್ಧಿಕರೀ ಶುದ್ಧ ಮರ್ಲತ್ರಯವಿನಾಶಿನೀ ॥ ೭೪ ॥

ಜಗತ್ಪ್ರಿಯಾ ಜಗನ್ಮೂರ್ತಿಃ ತ್ರಿಮೂರ್ತಿರಮೃತಾಶ್ರಯಾ ।
ನಿರಾಶ್ರಯಾ ನಿರಾಹಾರಾ ನಿರಂಕುಶರಣೋದ್ಭವಾ ॥ ೭೫ ॥

ಚಕ್ರಹಸ್ತಾ ವಿಚಿತ್ರಾಂಗೀ ಸ್ರಗ್ವಿಣೀ ಪದ್ಮಧಾರಿಣೀ ।
ಪರಾಪರವಿಧಾನಜ್ಞಾ ಮಹಾಪುರುಷಪೂರ್ವಜಾ ॥ ೭೬ ॥

ವಿದ್ಯೇಶ್ವರಪ್ರಿಯಾऽವಿದ್ಯಾ ವಿದ್ಯುಜ್ಜಿಹ್ವಾ ಜಿತಶ್ರಮಾ ।
ವಿದ್ಯಾಮಯೀ ಸಹಸ್ರಾಕ್ಷೀ ಸಹಸ್ರಶ್ರವಣಾತ್ಮಜಾ ॥ ೭೭ ॥

---

ಪ್ರಭಾರೂಪಳು. ಶತ್ರುಗಳನ್ನು ಬುಡಸಹಿತ ಕೀಳುವವಳು. ಎಲ್ಲವನ್ನೂ ಸಹಿಸುವವಳು. ಎಲ್ಲದಕ್ಕೂ ಸಾಕ್ಷಿಯು. ತಪಿಸುವವಳು. ತಾಪಪಡುವಂತೆ ಮಾಡುವವಳು. ಪ್ರಪಂಚರೂಪಿಣಿಯು. ಭೋಗವನ್ನು ಕೊಡುವವಳು. ಧರಿಸುವವಳು. ಭೂಮಿಯ ರೂಪಳು.

೭೪-೭೭. ಬಹಳವಾಗಿ ಸೌಮ್ಯವಾಗಿರುವವಳು. ಚಂದ್ರನಂತೆ ಮುಖವುಳ್ಳವಳು. ಉದ್ಧತವಾದ ಕುಣಿತದಲ್ಲಿ ಆಸಕ್ತಳು. ಸತ್ವ ರಜಸ್ತಮೋಗುಣಗಳಿಲ್ಲದಂತೆ ಶುದ್ಧ ಮಾಡುವವಳು. ಶುದ್ಧಳಾಗಿಸುವವಳು. ಆಧಿವ್ಯಾದಿ ಮನೋವ್ಯಥೆಗಳನ್ನು ನಾಶಮಾಡುವವಳು. ಜಗತ್ತಿಗೆ ಪ್ರಿಯಳು. ಜಗತ್ಸ್ವರೂಪಳು. ತ್ರಿಮೂರ್ತಿಸ್ವರೂಪಳು. ಅಮೃತಕ್ಕೆ ಆಶ್ರಯವಾಗಿರುವವಳು. ಮತ್ತೊಬ್ಬರ ಆಶ್ರಯವನ್ನು ಅಪೇಕ್ಷಿಸದವಳು. ಆಹಾರವನ್ನೇ ತಿನ್ನದವಳು. ಈಕೆಗೆ ಮೇಲಿನವರು ಯಾರೂ ಇಲ್ಲದವಳು. ಯುದ್ಧವಾಗುವ ಎಡೆಗಳಲ್ಲೆಲ್ಲಾ ಇರುವವಳು. ಚಕ್ರವನ್ನು ಹಿಡಿದಿರುವವಳು. ವಿಚಿತ್ರವಾದ ಅವಯವ ಉಳ್ಳವಳು. ಮಾಲೆಯನ್ನು ಹಾಕಿಕೊಂಡಿರುವವಳು. ಪದ್ಮವನ್ನು ಹಿಡಿದಿರುವವಳು. ಹಿಂದುಮುಂದಿನ ವಿಧಾನಗಳನ್ನು ಬಲ್ಲವಳು. ಮಹಾ ಪುರುಷನಿಗಿಂತಲೂ ಮೊದಲೇ ಹುಟ್ಟಿದವಳು. ವಿದ್ಯೇಶ್ವರನಿಗೆ ಪ್ರೀತಿಪಾತ್ರಳು. ನಿರ್ದುಷ್ಟಳು. ಚಂಚಲವಾದ ನಾಲಿಗೆಯುಳ್ಳವಳು. ಶ್ರಮವನ್ನು ಜಯಿಸಿರುವವಳು. ವಿದ್ಯಾಸ್ವರೂಪಳು. ಸಾವಿರ ಕಣ್ಣುಗಳುಳ್ಳವಳು. ಸಾವಿರ ಕಿವಿಗಳುಳ್ಳವಳು. ತನ್ನಷ್ಟಕ್ಕೆ ತಾನೇ ಹುಟ್ಟಿದವಳು.

**ಸಹಸ್ರರಶ್ಮಿಪದ್ಮಸ್ಥಾ ಮಹೇಶ್ವರಪದಾಶ್ರಯಾ ।**
**ಜ್ವಾಲಿನೀ ಸದ್ಮನಾ ವ್ಯಾಪ್ತಾ ತೈಜಸೀ ಪದ್ಮರೋಧಿಕಾ ॥ ೭೮ ॥**

**ಮಹಾದೇವಾಶ್ರಯಾ ಮಾನ್ಯಾ ಮಹಾದೇವಮನೋರಮಾ ।**
**ವ್ಯೋಮಲಕ್ಷ್ಮೀಃ ಸಿಂಹರಥಾ ಚೇಕಿತಾನ್ಯಮಿತಪ್ರಭಾ ॥ ೭೯ ॥**

**ವಿಶ್ವೇಶ್ವರೀ ವಿಮಾನಸ್ಥಾ ವಿಶೋಕಾ ಶೋಕನಾಶಿನೀ ।**
**ಅನಾಹತಾ ಕುಂಡಲಿನೀ ನಳಿನೀ ಪದ್ಮವಾಸಿನೀ ॥ ೮೦ ॥**

**ಶತಾನಂದಾ ಸತಾಂ ಕೀರ್ತಿಃ ಸರ್ವಭೂತಾಶಯಸ್ಥಿತಾ ।**
**ವಾಗ್ದೇವತಾ ಬ್ರಹ್ಮಕಲಾ ಕಲಾತೀತಾ ಕಲಾವತೀ ॥ ೮೧ ॥**

**ಬ್ರಹ್ಮರ್ಷಿರ್ಬ್ರಹ್ಮಹೃದಯಾ ಬ್ರಹ್ಮವಿಷ್ಣುಶಿವಪ್ರಿಯಾ ।**
**ವ್ಯೋಮಶಕ್ತಿಃ ಕ್ರಿಯಾಶಕ್ತಿಃ ಜನಶಕ್ತಿಃ ಪರಾಗತಿಃ ॥ ೮೨ ॥**

೭೮-೭೯. ಸಾವಿರ ದಳಗಳುಳ್ಳ ಪದ್ಮದಲ್ಲಿ ಕುಳಿತಿರುವವಳು. ಮಹೇಶ್ವರನ ಪಾದಗಳನ್ನು ಆಶ್ರಯಿಸಿಕೊಂಡಿರುವವಳು. ಜ್ವಾಲೆಯುಳ್ಳವಳು. ಮನೆಯುಳ್ಳವಳು. ತೇಜೋವಿಕಾರಳು. ಪದ್ಮವನ್ನು ಮುಚ್ಚುವವಳು ಮಹಾದೇವನಿಗೆ ಮನಸ್ಸನ್ನು ಹರ್ಷವಾಗುವಂತೆ ಮಾಡುವವಳು. ಆಕಾಶದಂತೆ ಕಪ್ಪಾಗಿರುವವಳ. ಸಿಂಹವೇ ರಥವಾಗಿರುವವಳು, ಚೇಕಿತಾನನೆಂಬುವವಳು. ಹೆಚ್ಚು ಕಾಂತಿಯುಳ್ಳವಳು.

೮೦-೮೩. ಪ್ರಪಂಚಕ್ಕೆ ಒಡೆಯಳು. ವಿಮಾನದಲ್ಲಿರುವವಳು. ಶೋಕವಿಲ್ಲದವಳು. ಶೋಕವನ್ನು ನಾಶಮಾಡುವವಳು. ಅನಾಹತಳು. ಕುಂಡಲಿನಿಯು. ನಲಿನಿಯು. ಪದ್ಮವಾಸಿನಿಯು. ಶತಾನಂದೆಯು. ಸತ್ಪುರುಷರಿಗೆ ಕೀರ್ತಿರೂಪಳು. ಎಲ್ಲಾ ಪ್ರಾಣಿಗಳ ಮನಸ್ಸಿನಲ್ಲಿಯೂ ಇರುವವಳು. ವಾಗ್ದೇವತೆಯು. ಬ್ರಹ್ಮಕಲೆಯು. ಕಲೆಯನ್ನು ಮೀರಿಸಿದವಳು. ಕಲೆಯುಳ್ಳವಳು. ಬ್ರಹ್ಮರ್ಷಿಯು. ಬ್ರಹ್ಮನಿಗೆ ಹೃದಯಭೂತಳು. ಬ್ರಹ್ಮ ವಿಷ್ಣು ಶಿವರಿಗೆ ಪ್ರೀತಿಪಾತ್ರಳು. ಆಕಾಶ ಶಕ್ತಿಯ ರೂಪಳು. ಕ್ರಿಯಾಶಕ್ತಿಯು, ಜನದ ಶಕ್ತಿರೂಪಳು. ಉತ್ತಮಗತಿ ರೂಪಳು. ಕ್ಷೋಭಿತೆಯು. ರೌದ್ರಿಕೆಯು. ಭೇದ್ಯಳು. ಭೇದವಾಗಲಿ ಅಭೇದವಾಗಲಿ

**ಕ್ಷೋಭಿಕಾ ರೌದ್ರಿಕಾ ಭೇದ್ಯಾ ಭೇಧಾಭೇದವಿವರ್ಜಿತಾ ।**
**ಅಭಿನ್ನಾ ಭಿನ್ನಸಂಖ್ಯಾನಾ ವಂಶಿನೀ ವಂಷಹಾರಿಣೀ ॥ ೮೩ ॥**

**ಗುಹ್ಯಶಕ್ತಿರ್ಗಣಾತೀತಾ ಸರ್ವದಾ ಸರ್ವತೋಮುಖೀ ।**
**ಭಗಿನೀ ಭಗವತ್ಪತ್ನೀ ಸಕಲಾ ಕಾಲಕಾರಿಣೀ ॥ ೮೪ ॥**

**ಸರ್ವವಿತ್ಸರ್ವತೋಭದ್ರಾ ಗುಹ್ಯಾತೀತಾ ಗುಹಾವಳಿಃ ।**
**ಪ್ರಕ್ರಿಯಾ ಯೋಗಮಾತಾ ಚ ಗಂಧಾವಿಶ್ವೇಶ್ವರೇಶ್ವರೀ ॥ ೮೫ ॥**

**ಕಪಿಲಾ ಕಪಿಲಾಕಾಂತಾ ಕನಕಾಭಾ ಕಲಾಂತರಾ ।**
**ಪುಣ್ಯಾ ಪುಷ್ಕರಿಣೀಭೋಕ್ತ್ರೀ ಪುರಂದರಪುರಸ್ಸರಾ ॥ ೮೬ ॥**

**ಪೋಷಣೀಪರಮೈಶ್ವರ್ಯಾ ಭೂತಿದಾ ಭೂತಿಭಾಷಣಾ ।**
**ಪಂಚಬ್ರಹ್ಮಸಮುತ್ಪತ್ತಿಃ ಪರಮಾತ್ಮಾತ್ಮವಿಗ್ರಹಾ ॥ ೮೭ ॥**

---

ಇಲ್ಲದವಳು. ಭಿನ್ನವಾಗಿರುವವಳಲ್ಲ. ಭಿನ್ನಸಂಖ್ಯೆಯಂತೆ ತೋರುವವಳು. ವಂಶವನ್ನುಳ್ಳವಳು. ವಂಶವನ್ನು ನಾಶಮಾಡುವವಳು.

೮೪. ದೇಹದೊಳಗಿರುವ ಗುಟ್ಟಾದ ಶಕ್ತಿಯ ರೂಪಳು. ಗುಂಪಿಗಿಂತಲೂ ಮೀರಿದವಳು. ಎಲ್ಲವನ್ನೂ ಕೊಡುವವಳು. ಎಲ್ಲಾ ಕಡೆಗೂ ಮುಖವುಳ್ಳವಳು. ಸಹೋದರಿಯು. ಭಗವಂತನ ಹೆಂಡತಿಯು. ಕಲೆಯಿಂದ ಕೂಡಿದವಳು. ಕಾಲವನ್ನು ಉಂಟುಮಾಡುವವಳು.

೮೫–೮೮. ಎಲ್ಲವನ್ನೂ ಬಲ್ಲವಳು. ಎಲ್ಲಾ ಕಡೆಯಲ್ಲಿಯೂ ಮಂಗಳವನ್ನುಳ್ಳವಳು. ಗುಟ್ಟಾದುದಕ್ಕಿಂತಲೂ ಮೀರಿದವಳು. ಗುಹೆಗಳ ಸಾಲುಳ್ಳವಳು. ಒಳ್ಳೆಯ ಕೆಲಸ ಮಾಡತಕ್ಕವಳು. ಯೋಗಕ್ಕೆ ತಾಯಿಯು. ಸುವಾಸನೆಯ ರೂಪಳು. ವಿಶ್ವೇಶ್ವರನ ಹೆಂಡತಿಯು. ಕಪಿಲ ಬಣ್ಣವುಳ್ಳವಳು. ಸುವರ್ಣದ ರೂಪವುಳ್ಳವಳು. ಕಲೆಯನ್ನು ಹೊಂದಿರುವವಳು. ಪುಣ್ಯರೂಪಳು. ಪುಷ್ಕರಿಣಿ ರೂಪಳು. ಅನುಭವಿಸುವವಳು. ಪುರಂದರನ ಮುಂದೆ ಹೋಗುವವಳು. ಪೋಷಣೆ ಮಾಡುವವಳು. ಪರಮೈಶ್ವರ್ಯವನ್ನು ಕೊಡತಕ್ಕವಳು. ಐಶ್ವರ್ಯವನ್ನು ಹೊಂದುವ ಲಕ್ಷಣಗಳುಳ್ಳವಳು. ಪಂಚ ಬ್ರಹ್ಮರಿಗೆ ಉತ್ಪತ್ತಿ ಸ್ಥಾನಳು. ಪರಮಾತ್ಮನಿಗೆ ಆತ್ಮರೂಪಳು. ಗುಟ್ಟನ್ನು ಯಾವಾಗಲೂ ತನ್ನಲ್ಲಿ ಉಳ್ಳವಳು.

ಸರ್ವೋದಯಾ ಭಾನುಮತೀ ಯೋಗಿಜ್ಞೇಯಾ ಮನೋಜವಾ ।
ಬೀಜರೂಪಾ ರಜೋರೂಪಾ ವಶಿನೀ ಯೋಗರೂಪಿಣೀ ॥ ೮೮ ॥

ಸುಮಂತ್ರಾ ಮಂತ್ರಿಣೀ ಪೂರ್ಣಾ ಹ್ಲಾದಿನೀ ಕ್ಲೇಶನಾಶಿನೀ ।
ಮನೋಹರೀ ಮನೋರಕ್ಷೀ ತಾಪಸೀ ವೇದರೂಪಿಣೀ ॥ ೮೯ ॥

ವೇದಶಕ್ತಿರ್ವೇದಮಾತಾ ವೇದವಿದ್ಯಾಪ್ರಕಾಶಿನೀ ।
ಯೋಗೇಶ್ವರೇಶ್ವರೀಮಾಲಾ ಮಹಾಶಕ್ತಿರ್ಮನೋಮಯೀ ॥ ೯೦ ॥

ವಿಶ್ವಾವಸ್ಥಾ ವೀರಮುಕ್ತಿಃ ವಿದ್ಯುನ್ಮಾಲಾ ವಿಹಾಯಸೀ ।
ಪೀವರೀ ಸುರಭೀ ವಂದ್ಯಾ ನಂದಿನೀ ನಂದಿವಲ್ಲಭಾ ॥ ೯೧ ॥

ಭಾರತೀ ಪರಮಾನಂದಾ ಪರಾಪರವಿಭೇದಿಕಾ ।
ಸರ್ವಪ್ರಹರಣೋಪೇತಾ ಕಾಮ್ಯಾ ಕಾಮೇಶ್ವರೇಶ್ವರೀ ॥ ೯೨ ॥

ಅಚಿಂತ್ಯಾಽಚಿಂತ್ಯಮಹಿಮಾ ದುರ್ಲೇಖಾ ಕನಕಪ್ರಭಾ ।
ಕೂಶ್ಮಾಂಡೀ ಧನರತ್ನಾಢ್ಯಾ ಸುಗಂಧಾ ಗಂಧದಾಯಿನೀ ॥ ೯೩ ॥

---

ಸೂರ್ಯನ ರೂಪಳು. ಯೋಗಿಗಳಿಂದ ತಿಳಿಯಲು ಸಾಧ್ಯಳು. ಮನಸ್ಸಿನಷ್ಟು ವೇಗವುಳ್ಳವಳು. ಬೀಜಾಕ್ಷರ ರೂಪಳು. ರಜೋಗುಣರೂಪಳು. ವಶವನ್ನು ಮಾಡಿಕೊಡತಕ್ಕವಳು. ಯೋಗರೂಪಳು.

೮೯. ಒಳ್ಳೆಯ ಮಂತ್ರರೂಪಳು. ಒಳ್ಳೆಯ ಮಂತ್ರವನ್ನು ಹೇಳುವವಳು. ಪೂರ್ಣ ಸ್ವರೂಪಳು. ಸಂತೋಷವುಳ್ಳವಳು. ಕ್ಲೇಶವನ್ನು ನಾಶ ಮಾಡುವವಳು. ಮನೋಹರಳು. ಮನಸ್ಸನ್ನು ರಕ್ಷಿಸುವವಳು. ತಾಪಸಿಯು. ವೇದಗಳ ರೂಪಳು.

೯೦–೯೫. ವೇದಶಕ್ತಿಯು. ವೇದ ವಿದ್ಯೆಯನ್ನು ಪ್ರಕಾಶಿಸುವವಳು. ಯೋಗೇಶ್ವರಿಗೆಲ್ಲಾ ಈಶ್ವರಿಯು. ಮಾಲಾ ಮಹಾಶಕ್ತಿಯು. ಮನೋವಿಕಾರಳು. ಎಲ್ಲಾ ಅವಸ್ಥೆಯನ್ನು ಉಳ್ಳವಳು. ವೀರರಿಗೆ ಮುಕ್ತಿಯನ್ನು ಕೊಡುವವಳು. ಮಿಂಚಿನ ಮಾಲೆಯ ರೂಪವನ್ನು ಹೊಂದಿರುವವಳು. ಆಕಾಶರೂಪಳು. ದಪ್ಪವಾಗಿರತಕ್ಕವಳು. ಕಾಮಧೇನುವಿನಿಂದ ನಮಸ್ಕೃತಳು. ಆನಂದವನ್ನುಂಟುಮಾಡುವವಳು.

**ತ್ರಿವಿಕ್ರಮಪದೋದ್ಭೂತಾ ಧನುಷ್ಪಾಣಿಃಶಿರೋಹಯಾ |**
**ಸುದುರ್ಲಭಾ ಧನಾಧ್ಯಕ್ಷಾ ಧನ್ಯಾ ಪಿಂಗಳಲೋಚನಾ ॥ ೯೪ ॥**

**ಭ್ರಾಂತಿಃ ಪ್ರಭಾವತೀ ದೀಪ್ತಿಃ ಪಂಕಜಾಯತಲೋಚನಾ |**
**ಆದ್ಯಾ ಹೃತ್ಕಮಲೋದ್ಭೂತಾ ಪರಾಮಾತಾ ರಣಪ್ರಿಯಾ ॥ ೯೫ ॥**

**ಸತ್ಕ್ರಿಯಾ ಗಿರಿಜಾ ನಿತ್ಯಶುದ್ಧಾ ಪುಷ್ಪನಿರಂತರಾ |**
**ದುರ್ಗಾ ಕಾತ್ಯಾಯನೀ ಚಂಡೀ ಚರ್ಚಿಕಾ ಶಾಂತವಿಗ್ರಹಾ ॥ ೯೬ ॥**

**ಹಿರಣ್ಯವರ್ಣಾ ರಜನೀ ಜಗನ್ಮಂತ್ರಪ್ರವರ್ತಿಕಾ |**
**ಮಂದರಾದ್ರಿನಿವಾಸಾ ಚ ಶಾರದಾ ಸ್ವರ್ಣಮಾಲಿನೀ ॥ ೯೭ ॥**

---

ನಂದಿಗೆ ಪ್ರಿಯಳು. ವಿದ್ಯಾರೂಪಳು. ಪರಮಾನಂದ ರೂಪಳು. ಪರಾಪರಗಳನ್ನು ಭೇದಿಸತಕ್ಕವಳು. ಎಲ್ಲಾ ಆಯುಧಗಳನ್ನು ಹೊಂದಿರುವವಳು. ಕಾಮಿಸಲು ಯೋಗ್ಯಳು. ಕಾಮೇಶ್ವರನ ಹೆಂಡತಿಯು. ಸ್ಮರಿಸುವುದಕ್ಕೆ ಆಗದವಳು. ಸ್ಮರಿಸುವುದಕ್ಕಾಗದಷ್ಟು ಮಹಿಮೆಯುಳ್ಳವಳು. ಇಂತಹವಳೆಂದು ವರ್ಣಿಸಲು ಅಸಾಧ್ಯಳು. ಸುವರ್ಣಪ್ರಭೆಯುಳ್ಳವಳು. ಕೂಶ್ಮಾಂಡಗಣದಲ್ಲಿ ಸೇರಿರುವವಳು. ನವರತ್ನಗಳನ್ನು ಹಾಕಿಕೊಂಡಿರುವವಳು. ಸುಗಂಧವುಳ್ಳವಳು. ಗಂಧವನ್ನು ಕೊಡತಕ್ಕವಳು. ವಿಷ್ಣು ಪಾದದಿಂದ ಹುಟ್ಟಿದವಳು. ಧನುಸ್ಸನ್ನು ಕೈಯಲ್ಲಿ ಹಿಡಿದಿರುವವಳು. ಕುದುರೆಯಂತೆ ತಲೆಯುಳ್ಳವಳು. ಹೊಂದಲು ಅಸಾಧ್ಯಳು. ಹಣಕ್ಕೆ ಅಧ್ಯಕ್ಷಳು. ಧನವನ್ನು ಹೊಂದಿದವಳು. ಕೆಂಜುಗಣ್ಣುಳ್ಳವಳು. ಭ್ರಾಂತಿ ರೂಪಳು. ಕಾಂತಿಯುಳ್ಳವಳು. ಕಾಂತಿಯು. ಕಮಲದಂತೆ ಕಣ್ಣುಳ್ಳವಳು. ಮೊದಲನೆಯವಳು. ಹೃದಯಕಮಲದಲ್ಲಿ ಹುಟ್ಟಿದವಳು. ಮೊದಲನೆಯ ತಾಯಿಯು. ಯುದ್ಧಪ್ರಿಯಳು.

೯೬–೯೭. ಸತ್ಕಾರ ರೂಪಳು. ಗಿರಿಯಲ್ಲಿ ಹುಟ್ಟಿದವಳು. ನಿತ್ಯಶುದ್ಧಳು. ಪುಷ್ಪದಲ್ಲಿ ಯಾವಾಗಲೂ ಇರುವವಳು, ದುರ್ಗೆಯು. ಕಾತ್ಯಾಯನಿಯು. ಚಂಡಿಯು. ಚರ್ಚಿಕೆಯು. ಶಾಂತವಾದ ಆಕಾರವುಳ್ಳವಳು. ಹಿರಣ್ಯದ ವರ್ಣ ಉಳ್ಳವಳು. ರಾತ್ರಿ ರೂಪಳು. ಜಗನ್ಮಂತ್ರವನ್ನೇ ಪ್ರವರ್ತಿಸುವವಳು. ಮಂದರ ಪರ್ವತದಲ್ಲಿ ವಾಸಿಸುವವಳು. ಶಾರದೆಯು. ಸ್ವರ್ಣದಮಾಲೆಯುಳ್ಳವಳು. ರತ್ನದ ಮಾಲೆಯುಳ್ಳವಳು. ರತ್ನವನ್ನೇ ಗರ್ಭದಲ್ಲಿ ಉಳ್ಳವಳು. ಭೂಮಿಯ ರೂಪಳು.

ರತ್ನಮಾಲಾ ರತ್ನಗರ್ಭಾ ಪೃಥ್ವೀ ವಿಶ್ವಪ್ರಮಾಥಿನೀ ।
ಪದ್ಮಾಸನಾ ಪದ್ಮನಿಭಾ ನಿತ್ಯತುಷ್ಟಾಽಮೃತೋದ್ಭವಾ ॥ ೯೮ ॥

ಧುನ್ವತೀ ದುಷ್ಪ್ರಕಂಪಾ ಚ ಸೂರ್ಯಮಾತಾ ದೃಷದ್ವತೀ ।
ಮಹೇಂದ್ರಭಗಿನೀ ಮಾಯಾ ವರೇಣ್ಯಾ ವರದರ್ಪಿತಾ ॥ ೯೯ ॥

ಕಲ್ಯಾಣೀ ಕಮಲಾ ರಾಮಾ ಪಂಚಭೂತವರಪ್ರದಾ ।
ವಾಚ್ಯಾ ವರೇಶ್ವರೀ ನಂದ್ಯಾ ದುರ್ಜಯಾ ದುರತಿಕ್ರಮಾ ॥ ೧೦೦ ॥

ಕಾಲರಾತ್ರಿರ್ಮಹಾವೇಗಾ ವೀರಭದ್ರಹಿತಪ್ರಿಯಾ ।
ಭದ್ರಕಾಳೀ ಜಗನ್ಮಾತಾ ಭಕ್ತಾನಾಂ ಭದ್ರದಾಯಿನೀ ॥ ೧೦೧ ॥

ಕರಾಳಾ ಪಿಂಗಳಾಕಾರಾ ನಾಮವೇದಾ ಮಹಾನದಾ ।
ತಪಸ್ವಿನೀ ಯಶೋದಾ ಚ ಯಥಾಧ್ವಪರಿವರ್ತಿನೀ ॥ ೧೦೨ ॥

---

ಪ್ರಪಂಚವನ್ನೇ ನಾಶಮಾಡುವವಳು. ಪದ್ಮಾಸನವನ್ನೇ ಹಾಕಿಕೊಂಡಿರುವವಳು. ಪದ್ಮದಂತಿರುವವಳು. ಯಾವಾಗಲೂ ಸಂತೋಷವುಳ್ಳವಳು. ಅಮೃತದಿಂದ ಹುಟ್ಟಿದವಳು. ಅಲ್ಲಾಡಿಸುತ್ತಿರುವವಳು. ಬಲವಾಗಿ ಅಲ್ಲಾಡಿಸುತ್ತಲಿರುವವಳು. ಸೂರ್ಯಮಾತೆಯು. ಗಿರಿರೂಪಳು. ಮಹೇಂದ್ರನಿಗೆ ತಂಗಿಯು. ಮಾಯಾ ರೂಪಳು. ಶ್ರೇಷ್ಠಳು. ವರದಿಂದ ದರ್ಪಿತಳು.

೧೦೦-೧೦೨. ಕಲ್ಯಾಣಿಯು. ಕಮಲೆಯು. ಲಕ್ಷ್ಮಿಯು. ಪಂಚಭೂತಗಳಿಗೂ ವರವನ್ನು ಕೊಡತಕ್ಕವಳು. ವಾಚ್ಯ ಭೂತಳು. ವರಕ್ಕೆ ಈಶ್ವರಿಯು. ಸಂತೋಷಪಡಿಸತಕ್ಕವಳು. ಜಯಿಸಲಸಾಧ್ಯಳು. ಮೀರಲಸಾಧ್ಯಳು. ಮೀರುವುದಕ್ಕಾಗದವಳು. ಕಾಲರಾತ್ರಿಯು. ಮಹಾವೇಗವುಳ್ಳವಳು. ವೀರಭದ್ರನಿಗೆ ಹಿತವನ್ನು ಮಾಡುವವಳು. ಭದ್ರಕಾಳಿಯು. ಜಗನ್ಮಾತೆಯು. ಭಕ್ತರಿಗೆ ಮಂಗಳವನ್ನುಂಟುಮಾಡುವವಳು. ಭಯಂಕರಳು. ಕೆಂಪಗಿರುವ ಆಕಾರಗಳುಳ್ಳವಳು. ಅವಳ ನಾಮಗಳೇ ವೇದಗಳು. ಭಯಂಕರವಾದ ಶಬ್ದವುಳ್ಳವಳು. ತಪಸ್ವಿನಿಯು ಯಶೋದೆಯು. ಸರಿಯಾದ ದಾರಿಯಲ್ಲಿ ನಡೆಯುವವಳು.

ಂಖಿನೀ ಪದ್ಮಿನೀ ಸಾಂಖ್ಯಾ ಸಾಂಖ್ಯಯೋಗಪ್ರವರ್ತಿಕಾ ।
ತ್ರೈತ್ರೀ ಸಂವತ್ಸರಾ ರುದ್ರಾ ಜಗತ್ಸಂಪೂರಣೀಂದ್ರಜಾ ॥ ೧೦೩ ॥

ುಂಭಾರಿಃ ಖೇಚರೀಖಸ್ಥಾ ಕಂಬುಗ್ರೀವಾ ಕಲಪ್ರಿಯಾ ।
ುರಧ್ವಜಾ ಖರಾರೂಢಾ ಪರಾರ್ಧ್ಯಾ ಪರಮಾಲಿನೀ ॥ ೧೦೪ ॥

ಶ್ವರ್ಯರತ್ನನಿಲಯಾ ವಿರಕ್ತಾ ಗರುಡಾಸನಾ ।
ಯಂತೀ ಹೃದ್ಗುಹಾ ರಮ್ಯಾ ಸತ್ವವೇಗಾ ಗಣಾಗ್ರಣೀ ॥ ೧೦೫ ॥

ಂಕಲ್ಪಸಿದ್ಧಾ ಸಾಮ್ಯಸ್ಥಾ ಸರ್ವವಿಜ್ಞಾನದಾಯಿನೀ ।
ಲಿಕಲ್ಮಷಹಂತ್ರೀ ಚ ಗುಹ್ಯೋಪನಿಷದುತ್ತಮಾ ॥ ೧೦೬ ॥

ತ್ಯದೃಷ್ಟಿಃ ಸ್ಮೃತಿರ್ವ್ಯಾಪ್ತಿಃ ಪುಷ್ಟಿಸ್ತುಷ್ಟಿಃ ಕ್ರಿಯಾವತೀ ।
ಶ್ವಾಮರೇಶ್ವರೇಶಾನಾ ಭುಕ್ತಿರ್ಮುಕ್ತಿಃ ಶಿವಾಮೃತಾ ॥ ೧೦೭ ॥

---

೧೦೩-೧೦೭. ಶಂಖಿನಿಯು. ಪದ್ಮಿನಿಯು. ಸಾಂಖ್ಯಳು. ಸಾಂಖ್ಯ ಮತ್ತು ಯೋಗಗಳನ್ನು ನಡೆಸತಕ್ಕವಳು. ಚೈತ್ರಸಂವತ್ಸರದ ರೂಪಳು. ರುದ್ರಳು. ಜಗನ್ನೇ ಪೂರಣ ಮಾಡುವವಳು. ಇಂದ್ರನ ಮಗಳು. ಶುಂಭನನ್ನು ಕೊಂದವಳು. ಂತರಿಕ್ಷದಲ್ಲಿ ಸಂಚರಿಸುವವಳು. ಅಂತರಿಕ್ಷದಲ್ಲಿಯೇ ಇರುವವಳು. ಶಂಖದಂತೆ ತ್ತುಳ್ಳವಳು. ಜಗಳದಲ್ಲಿ ಆಸಕ್ತಳು. ಕತ್ತೆಯ ಪತಾಕೆಯುಳ್ಳವಳು. ಕತ್ತೆಯ ುೇಲೆ ಕುಳಿತಿರುವವಳು. ಸಂಖ್ಯೆಯನ್ನು ಮೀರಿದವಳು. ಅನೇಕ ಮಾಲೆಗಳನ್ನು ಾಕಿಕೊಂಡಿರುವವಳು. ಐಶ್ವರ್ಯಕ್ಕೆ ಮನೆಯು. ವಿರಕ್ತಳು. ಗರುಡನ ಮೇಲೆ ುಳಿತಿರುವವಳು. ಜಯಂತಿಯು. ಹೃದಯಾಕಾಶದಲ್ಲಿರುವವಳು. ಮನೋಹರಳು ತ್ವವೇ ಹೆಚ್ಚಾಗಿವುಳ್ಳವಳು. ಗಣಗಳಿಗೆ ಮುಂದಾಳು. ಮನಸ್ಸಿನಲ್ಲಿ ಸ್ಮರಿಸುವುದ ಂದಲೇ ಸಿದ್ಧಳಾಗತಕ್ಕವಳು. ಸಾಮ್ಯತೆಯುಳ್ಳವಳು. ಎಲ್ಲ ಕೌಶಲ್ಯವನ್ನೂ ಕೊಡು ವಳು. ಕಲಿಯ ಕಲ್ಮಷಗಳನ್ನು ನಾಶಮಾಡುವವಳು. ಗುಹ್ಯವಾದ ಉಪನಿಷ ರೂಪಳು. ಉತ್ತಮಳು. ನಿತ್ಯ ಜ್ಞಾನವುಳ್ಳವಳು. ಸ್ಮತಿಯು ವ್ಯಾಪ್ತಿಯು. ುಷ್ಟಿಯು. ತುಷ್ಟಿಯು. ಕ್ರಿಯೆಯು. ಎಲ್ಲಾ ದೇವತೆಗಳಿಗೂ ಒಡೆಯಳು. ಕ್ತಿಯನ್ನು ಕೊಡತಕ್ಕವಳು. ಮುಕ್ತಿರೂಪಳು. ಮಂಗಳಕರಳು. ಅಮೃತ ೂಪಳು.

